# ವಸಾಹತು ಕಾಲಘಟ್ಟದ ಕನ್ನಡ ಕಥಾ ಸಾಹಿತ್ಯದಲ್ಲಿ ಸ್ಥಳೀಯ ಪ್ರಜ್ಞೆಯ ತಾತ್ವಿಕ ಶೋಧ

(ಪಿಎಚ್.ಡಿ. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಶೋಧನ ಮಹಾಪ್ರಬಂಧ)



ಸಂಶೋಧಕರು
ಸುಬ್ರಹ್ಮಣ್ಯ ಸಿ.

ಮಾರ್ಗದರ್ಶಕರು
ಡಾ. ಅಮರೇಶ ಎನ್.
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ



೨೦೨೦

# ವಸಾಹತು ಕಾಲಘಟ್ಟದ ಕನ್ನಡ ಕಥಾ ಸಾಹಿತ್ಯದಲ್ಲಿ ಸ್ಥಳೀಯ ಪ್ರಜ್ಞೆಯ ತಾತ್ವಿಕ ಶೋಧ

(ಪಿಎಚ್.ಡಿ. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಸಂಶೋಧನ ಮಹಾಪ್ರಬಂಧ)


ಸಂಶೋಧಕರು
**ಸುಬ್ರಹ್ಮಣ್ಯ ಸಿ.**

ಮಾರ್ಗದರ್ಶಕರು
**ಡಾ. ಅಮರೇಶ ಎನ್.**
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ





**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ಹಂಪಿ

೨೦೨೦

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಸುಬ್ರಹ್ಮಣ್ಯ ಸಿ. ಅವರು **"ವಸಾಹತು ಕಾಲಘಟ್ಟದ ಕನ್ನಡ ಕಥಾ ಸಾಹಿತ್ಯದಲ್ಲಿ ಸ್ಥಳೀಯ ಪ್ರಜ್ಞೆಯ ತಾತ್ವಿಕ ಶೋಧ"** ಎಂಬ ಶೀರ್ಷಿಕೆಯಲ್ಲಿ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೭-೧-೨೦೨೦

ಸ್ಥಳ : ವಿದ್ಯಾರಣ್ಯ

**ಡಾ. ಅಮರೇಶ ಎನ್.**

ಪ್ರಾಧ್ಯಾಪಕರು

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

# ಸಂಶೋಧಕರ ಪ್ರಮಾಣ ಪತ್ರ

**'ವಸಾಹತು ಕಾಲಘಟ್ಟದ ಕನ್ನಡ ಕಥಾ ಸಾಹಿತ್ಯದಲ್ಲಿ ಸ್ಥಳೀಯ ಪ್ರಜ್ಞೆಯ ತಾತ್ವಿಕ ಶೋಧ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಅಮರೇಶ ಎನ್.** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೭-೧-೨೦೨೦

ಸ್ಥಳ : ವಿದ್ಯಾರಣ್ಯ

**ಸುಬ್ರಹ್ಮಣ್ಯ ಸಿ.**
ಸಂಶೋಧಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

ಅಧ್ಯಾಯ – ೧

**ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ವಿಧಾನ**

ಪ್ರಸ್ತಾವನೆ ೧

೧.೧ ಅಧ್ಯಯನದ ಉದ್ದೇಶ ೪

೧.೨ ಅಧ್ಯಯನದ ಮಹತ್ತ್ವ ೭

೧.೩ ಅಧ್ಯಯನದ ವ್ಯಾಪ್ತಿ – ವೈಧಾನಿಕತೆ ೯

ಅಧ್ಯಾಯ – ೨

**೨.೧ ಸ್ಥಳೀಯತೆಯ ಚರ್ಚೆಯ ಪೂರ್ವ ಅವಲೋಕನ** ೧೧

**೨.೨ ವಸಾಹತುಶಾಹಿ ಸಂದರ್ಭ ಮತ್ತು ಕನ್ನಡ ಕತೆಗಳ ಉದಯ** ೨೩

ಅಧ್ಯಾಯ – ೩

**'ಸ್ಥಳೀಯತೆ'ಯ ಪರಿಕಲ್ಪನೆಯ ಚರ್ಚೆ** ೩೯–೫೮

ಅಧ್ಯಾಯ – ೪

**ಮೊದಲ ತಲೆಮಾರಿನ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ** ೫೯–೧೧೧

ಅಧ್ಯಾಯ – ೫

**ಪ್ರಾತಿನಿಧಿಕ ಮೊದಲ ತಲೆಮಾರಿನ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ**

೫.೧ ದಕ್ಷಿಣ ಕನ್ನಡ ಭಾಗದ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ ೧೧೨

೫.೨. ಮೈಸೂರು ಭಾಗದ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ ೧೩೦

೫.೩. ಮುಂಬೈ ಕರ್ನಾಟಕದ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ ೧೫೧

೫.೪. ಕಲ್ಯಾಣ ಕರ್ನಾಟಕದ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ ೧೬೭

ಅಧ್ಯಾಯ – ೬

**ಮೊದಲ ತಲೆಮಾರಿನ ಕತೆಗಳಲ್ಲಿ ಸ್ಥಳೀಯ ಪಾತ್ರಗಳು**

ಉಪಸಂಹಾರ ೧೯೮

ಫಲಿತಗಳು ೨೦೧

ಅನುಬಂಧ – ೧

ಪ್ರಧಾನ ಆಕರಗಳು ೨೦೪

ಪರಾಮರ್ಶನ ಗ್ರಂಥಗಳು ೨೦೮

ಅನುಬಂಧ – ೨

ಕತೆಗಾರರ ಬದುಕು – ಬರಹ ೨೧೨

ಅಧ್ಯಾಯ - ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ವಿಧಾನ

**ಪ್ರಸ್ತಾವನೆ**

ವಸಾಹತುಶಾಹಿ ಕಾಲಮಾನದಲ್ಲಿ ಕನ್ನಡದ ಕಥಾ ಸಾಹಿತ್ಯದಲ್ಲಿ ಭಿನ್ನವಾದ ಪಲ್ಲಟಗಳಾದವು. ಅವುಗಳಲ್ಲಿ ಸ್ಥಳೀಯತೆಯನ್ನು ಕತೆಗಳ ಮೂಲಕ ಶೋಧಿಸುವ ಮತ್ತು ವಸಾಹತುಶಾಹಿಯ ಪ್ರತಿಯಾಗಿ ಕಟ್ಟುವ, ಸ್ಥಳೀಯ ಜೀವನ ಮೀಮಾಂಸೆಯನ್ನು ಕಥನ ಪರಂಪರೆಗೆ ಒಗ್ಗಿಸುವ ಅಭಿವ್ಯಕ್ತಿಯು ಮೊದಲ ತಲೆಮಾರಿನ ಕತೆಗಳಲ್ಲಿ ಮುಖ್ಯವಾಯಿತು. ವಸಾಹತುಶಾಹಿಯು ರೂಪಿಸಿದ ಧೋರಣೆಗಳು ಕನ್ನಡ ಪ್ರದೇಶದಲ್ಲಿ ಪ್ರವೇಶ ಪಡೆದ ಮೇಲೆ ನಮ್ಮ ಜೀವನ ವಿಧಾನದ ಮೂಲ ನಂಬಿಕೆ, ಪರಂಪರೆ ಹಾಗೂ ಸಾಂಸ್ಕೃತಿಕ ಅಭಿವ್ಯಕ್ತಿಯ ಭೌತ ಹಾಗೂ ಅಭೌತಿಕ ಮೀಮಾಂಸೆಯು ಪಲ್ಲಟವಾಯಿತು. ಈ ಪಲ್ಲಟ ಸ್ಥಳೀಯತೆಯನ್ನು ವಸಾಹತುಶಾಹಿಯ ಪ್ರಭುತ್ವದ ಹಿಡಿತಕ್ಕೆ ಒಳಗು ಮಾಡಿತಲ್ಲದೆ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಹಾಗೂ ದೈನಂದಿನ ಬದುಕಿನಲ್ಲಿ ಸಂಕರ, ಸಂಘರ್ಷ, ಪ್ರತಿರೋಧವಾದ ಪರಿಸರವನ್ನು ಹುಟ್ಟುಹಾಕಿದ ಈ ಕಾಲಮಾನದಲ್ಲಿ ಕತೆಯನ್ನು ಬರೆದ ಕತೆಗಾರರು ವಸಾಹತುಶಾಹಿಯ ಧೋರಣೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಮರೆಯಾಗುತ್ತಿರುವ ಕನ್ನಡ ಪರಿಸರದ ನಂಬಿಕೆ, ಆರಾಧನೆ, ಭಾಷೆ, ಜ್ಞಾನ ಪರಂಪರೆ, ಜೀವನ ಮೌಲ್ಯ ಹಾಗೂ ಮಾನವ ಸಂಬಂಧವನ್ನು 'ಸ್ಥಳೀಯತೆ' ಎಂಬ ನೆಲೆಯಲ್ಲಿ ಕತೆಯ ಕೇಂದ್ರವಾಗಿಸಿಕೊಂಡು ಬರೆದರು. ಮೊದಲ ತಲೆಮಾರಿನ ಬಹುತೇಕ ಕತೆಗಾರರ ಕತೆಗಳು ಸ್ಥಳೀಯತೆಯ ಭಿನ್ನ ಭಿನ್ನ ರೂಪವನ್ನು ಅಭಿವ್ಯಕ್ತಿಸುವ ಜೊತೆಗೆ ಕಥನ ಪರಂಪರೆಯನ್ನು ಬಲಪಡಿಸಿದವು.

'ಸ್ಥಳೀಯತೆ' ಎಂಬ ಪರಿಕಲ್ಪನೆಯು ಪ್ರಭುತ್ವದ ಪ್ರಧಾನ ಸಂಸ್ಕೃತಿಯ ಪ್ರತಿಯಾಗಿ ದೇಶೀಯ ಅಭಿವ್ಯಕ್ತಿಯನ್ನು ಕಟ್ಟುವ ನೆಲೆಯಿಂದ ಕನ್ನಡ ಸಾಹಿತ್ಯದ ಚಾರಿತ್ರಿಕ ಸಂದರ್ಭವನ್ನು ಅವಲೋಕಿಸಿದಾಗ ಆರಂಭ ಕಾಲದಿಂದಲೂ ಕನ್ನಡ ಗದ್ಯ ಹಾಗೂ ಪದ್ಯ ಸಾಹಿತ್ಯ ಪ್ರಕಾರಗಳಲ್ಲಿ ಸ್ಥಳೀಯತೆಯ ಅಸ್ಮಿತೆ ಕಾಣುತ್ತದೆ. ಪ್ರಭುತ್ವದ ಭಾಷೆ, ಸಾಹಿತ್ಯ ಹಾಗೂ ಸಾಂಸ್ಕೃತಿಕ ಪ್ರಜ್ಞೆಯಿಂದ ಬಿಡಿಸಿಕೊಳ್ಳುವ, ಪ್ರತಿರೋಧಿಸುವ ಅಥವಾ ಸಂಕರಗೊಳ್ಳುವ ಮೂಲಕ ಬಹುತ್ವದ ನೆಲೆಯನ್ನು ಪಡೆದುಕೊಂಡರೂ ಸ್ಥಳೀಯತೆಯು ಏಕಮುಖವಾದ ಅಭಿವ್ಯಕ್ತಿಯ ವಿಧಾನವನ್ನು ಪಡೆಯದೆ ಕಾಲ ಹಾಗೂ ಪರಿಸರದ ನೆಲೆಯಲ್ಲಿ ಪಲ್ಲಟಗೊಳ್ಳುವ ಮೂಲಕ ಬಹುತ್ವದ ಮೀಮಾಂಸೆಯನ್ನು ಪಡೆದುಕೊಂಡಿದೆ.

ಮೊದಲ ತಲೆಮಾರಿನ ಕತೆಗಾರರು ಸ್ಥಳೀಯತೆಯನ್ನು ತಮ್ಮ ಕತೆಗಳ ಕೇಂದ್ರವಾಗಿಸಿ ಕೊಂಡು ಕನ್ನಡ ನೆಲದ ಸತ್ವವನ್ನು ಭಾಷೆಯ ಅಭಿವ್ಯಕ್ತಿಯಾಗಿಸಿ ಒಂದು ಕಥಾ ಪರಂಪರೆಯನ್ನು ವಸಾಹತುಶಾಹಿಯ ಧೋರಣೆ ಹಾಗೂ ಪ್ರೇರಣೆಯ ಚೌಕಟ್ಟಿನಲ್ಲಿ ರಚಿಸಿದರು. ಮೊದಲ ತಲೆಮಾರಿನ ಬಹುತೇಕ ಕತೆಗಳು ವಸಾಹತುಶಾಹಿಯ ಉಪ ಉತ್ಪನ್ನದಂತೆ ಕಂಡರೂ ಕತೆಗಳ ಸತ್ವ ಹಾಗೂ ಮೀಮಾಂಸೆಯು ಸ್ಥಳೀಯತೆಯ ಸ್ವರೂಪವನ್ನು ಸಾಂದ್ರವಾಗಿ ನಿರೂಪಿಸಿದೆ. ವಸಾಹತುಶಾಹಿಯ ಭಿನ್ನ-ಭಿನ್ನ ಧೋರಣೆಗಳು, ಪಶ್ಚಿಮದ ವಿಚಾರ ಪ್ರಜ್ಞೆ, ಪೂರ್ವದ ಕನ್ನಡದ ಕತೆಗಳ ಮೀಮಾಂಸೆ, ಭಾರತೀಯ ಸುಧಾರಣಾ ಚಳವಳಿಯ ಪ್ರೇರಣೆಗಳು ಮೊದಲ ತಲೆಮಾರಿನ ಕತೆಗಳ ಸ್ಥಳೀಯತೆಯ ಅಭಿವ್ಯಕ್ತಿಯನ್ನು ಬಲಪಡಿಸಿವೆ.

ವಸಾಹತುಶಾಹಿಯ ಪ್ರಭುತ್ವದ ಧೋರಣೆಗಳನ್ನು ವಿಮರ್ಶೆಗೆ ಒಳಪಡಿಸುವ ಜೊತೆಗೆ ಕನ್ನಡದ ನೆಲದ ಸ್ಥಳೀಯತೆಯ ಅಭಿವ್ಯಕ್ತಿಯನ್ನು ಗುಣಾತ್ಮಕ ನೆಲೆಯಿಂದ ಕತೆಗಳ ಮೂಲಕ ನಿರೂಪಿಸುವ ದಕ್ಷಿಣ ಕನ್ನಡ ಭಾಗದ ಕತೆಗಾರರಾದ ಪಂಜೆ ಮಂಗೇಶರಾಯ, ಬಾಗಲೋಡಿ ದೇವರಾಯ, ಕಡೆಂಗೋಡ್ಲು ಶಂಕರಭಟ್ಟ, ಎಂ.ಎಂ. ಕಾಮತ್, ಸೇಡಿಯಾಪು ಕೃಷ್ಣ ಭಟ್ಟ ಇತ್ಯಾದಿ ಕತೆಗಾರರು ತಮ್ಮ ನೆಲದ ಜೀವನ ಸತ್ವ, ನಂಬಿಕೆ, ಪರಂಪರೆ, ಧರ್ಮ ಹಾಗೂ ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ಸ್ಥಳೀಯತೆಯಾಗಿ ಕಾಪಿಟ್ಟುಕೊಳ್ಳುವ ಜೊತೆಗೆ ವಸಾಹತುಶಾಹಿಯ ವ್ಯವಸ್ಥೆಗೆ ಪ್ರತಿಯಾಗಿ ಪರಂಪರೆಯನ್ನು ಗುಣಾತ್ಮಕವಾದ ಸತ್ವವಾಗಿ ನಿರೂಪಿಸುವ ನೆಲೆಯಲ್ಲಿ ಮಾನವ ಸಂಬಂಧವನ್ನು, ಯಜಮಾನಿಕೆಯ (ಗುತ್ತಿನ) ಸ್ವರೂಪವನ್ನು, ಸ್ತ್ರೀ ಬದುಕಿನೊಳಗಿನ ಸ್ತ್ರೀ ಸಂವೇದನೆಯನ್ನು ಶೋಧಿಸುವ ಮೂಲಕ ಅದರ ಗೆಲುವನ್ನು ಕಥಾ ಅಭಿವ್ಯಕ್ತಿಯಾಗಿಸಿದ್ದನ್ನು ಕಂಡುಕೊಳ್ಳಲಾಯಿತು.

ಮಾಸ್ತಿ, ದೇವುಡು, ಆನಂದ, ವಾಣಿ, ಗೋರೂರು ಇತ್ಯಾದಿ ಮೈಸೂರು ಕರ್ನಾಟಕದ ಕತೆಗಾರರು ರಾಜ ಪ್ರಭುತ್ವದ ಒಳಗಿದ್ದುಕೊಂಡು ವಸಾಹತುಶಾಹಿಯ ಧೋರಣೆಯ ಸ್ಪರ್ಶಕ್ಕೆ ಒಳಗಾಗಿದ್ದರಿಂದ ಮೈಸೂರು ರಾಜರ ಹಾಗೂ ವಸಾಹತುಶಾಹಿಯ ಸಂಘರ್ಷ, ಸಂಕರ ಹಾಗೂ ಪ್ರಭುತ್ವದ ಧೋರಣೆಗಳ ಸೈದ್ಧಾಂತಿಕ ಹೋರಾಟವನ್ನು ಕತೆಗಳ ಪರಿಸರವಾಗಿಸಿಕೊಂಡು ಸ್ಥಳೀಯತೆಯನ್ನು ತಾತ್ವೀಕರಿಸಿದರು. ಈ ಭಾಗದ ಕತೆಗಳಲ್ಲಿ ರೂಪುಗೊಂಡ ಸ್ಥಳೀಯತೆಯು ನಮ್ಮ ಪರಂಪರೆಯನ್ನು, ನಂಬಿಕೆಗಳನ್ನು ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ಆಧುನಿಕ ಪರಿಸರದಲ್ಲಿ ಬಲಪಡಿಸುವುದರ ಜೊತೆಗೆ ವಸಾಹತುಶಾಹಿಯ ಮೂಲಕ ಶ್ರೇಷ್ಠವೆಂದು ಹೇಳಿಸುವ ನೆಲೆಯಿಂದ ಸ್ಥಳೀಯತೆಯ ಸ್ವರೂಪವನ್ನು ಕಂಡುಕೊಳ್ಳಲಾಯಿತು. ಮಾಸ್ತಿಯವರ ಕತೆಗಳು ಸ್ಥಳೀಯತೆಯ ಸ್ವರೂಪವನ್ನು ಜೀವನ ವಿನ್ಯಾಸದ ನೆಲೆಯಿಂದ ತೆರೆದುಕೊಳ್ಳುತ್ತವೆ ಹಾಗೂ ಬದುಕಿನ ಅನುಭವವೇ ಸಾಂದ್ರವಾಗಿ ವಸಾಹತುಶಾಹಿಯ ಪ್ರತಿಯಾಗಿ ಬಳಕೆಯಾಗುವ ಜೊತೆಗೆ ನಮ್ಮ ಸಾಂಸ್ಕೃತಿಕ ಪರಂಪರೆಯ ಸಂಕರ, ಸಂಘರ್ಷವನ್ನು ಕಥಾನವಾಗಿಸುವ ಮೂಲಕ ಸ್ಥಳೀಯತೆಯ ಪರಿಕಲ್ಪನೆಗೆ ಚೌಕಟ್ಟನ್ನು ಒದಗಿಸಿದ್ದನ್ನು ಗುರುತಿಸಲಾಗಿದೆ.

ಸಾಮಾಜಿಕ, ಆರ್ಥಿಕ, ಧಾರ್ಮಿಕ ಸ್ಥಿತಿಗತಿಗಳಿಗೆ ಪಶ್ಚಿಮದ ಪ್ರೇರಣೆಯ ಮೂಲಕ ಸಾಮಾಜಿಕ ಸುಧಾರಣೆಯ ತಾತ್ವಿಕತೆಯನ್ನು ಸ್ಥಳೀಯತೆಯ ನೆಲೆಯಲ್ಲಿ ಅನುಸಂಧಾನ ಮಾಡಿದ ಮುಂಬೈ ಭಾಗದ ಮೊದಲ ತಲೆಮಾರಿನ ಕತೆಗಾರರು ಮುಖ್ಯವಾಗಿ ಸ್ತ್ರೀ ಸಮಸ್ಯೆಯನ್ನು, ಕುಟುಂಬದ ನೆಲೆಯಲ್ಲಿ ಪ್ರಮಾಣ ಬದ್ಧವಾಗಿದ್ದ ಸಂಪ್ರದಾಯ ಬದ್ಧವಾದ ಮೌಢ್ಯ ಜೀವನ ಮೀಮಾಂಸೆಯನ್ನು ಪಾಶ್ಚಾತ್ಯ ಪ್ರಜ್ಞೆಯ ಮೂಲಕ ವಿಮರ್ಶೆಗೆ ಒಳಪಡಿಸುವ ಮೂಲಕ ಸ್ತ್ರೀ ಅಸ್ಮಿತೆಯನ್ನು ಸ್ಥಳೀಯತೆಯ ಬಿಂಬವಾಗಿ ಅನುಸಂಧಾನ ಮಾಡುವುದರಿಂದ ಬಹುಪಾಲು ಈ ಭಾಗದ ಕತೆಗಾರರ ಕತೆಗಳು ಸುಧಾರಣಾವಾದದ ಉಪ ಉತ್ಪನ್ನದಂತೆ ರಚನೆಯಾಗಿರುವುದನ್ನು ಕಂಡುಕೊಳ್ಳಬಹುದು.

ಸ್ಥಳೀಯತೆಯನ್ನು ಕೇಂದ್ರವಾಗಿಸಿಕೊಂಡು ವಸಾಹತುಶಾಹಿಯ ಧೋರಣೆಯನ್ನು ಮೀರಿ ಕನ್ನಡದ ನೆಲದ ಸತ್ವವನ್ನು ಜೀವಪರವಾದ ಅಭಿವ್ಯಕ್ತಿಯಾಗಿಸಿಕೊಂಡು ರಚನೆಯಾದ ಮೊದಲ ತಲೆಮಾರಿನ ಕತೆಗಳ ಸಂವಿಧಾನ ಸ್ಥಳೀಯತೆಯಾಗಿದೆ. ಈ ನೆಲೆಯಲ್ಲಿ ಕತೆಯಲ್ಲಿ ನಿರೂಪಣೆಗೊಂಡ ಸ್ಥಳೀಯತೆಯ ಅಭಿವ್ಯಕ್ತಿ ಹಾಗೂ ತಾತ್ವಿಕತೆಯನ್ನು ಶೋಧಿಸುವುದಾಗಿದೆ.

## ೧.೧ ಅಧ್ಯಯನದ ಉದ್ದೇಶ

ಈ ಅಧ್ಯಯನದಲ್ಲಿ ಮೊದಲ ತಲೆಮಾರಿನ ಕತೆಗಾರರ ಕತೆಗಳಲ್ಲಿ ಸ್ಥಳೀಯತೆಯ ಪರಿಕಲ್ಪನೆ ಭಿನ್ನ ಭಿನ್ನ ಮಾದರಿಯಲ್ಲಿ ರೂಪುಗೊಂಡರೂ ಅದು ಕನ್ನಡದ ಕಥಾ ಪರಂಪರೆಯನ್ನು ಹುಟ್ಟು ಹಾಕಿತು. ವಸಾಹತುಶಾಹಿ ಸಂದರ್ಭದಲ್ಲಿ ರಚನೆಯಾದ ಕಥಾ ಸಾಹಿತ್ಯವನ್ನು ಮುಕ್ತ ಮನಸ್ಸಿನಿಂದ ಅಧ್ಯಯನಕ್ಕೆ ಒಳಪಡಿಸುವ ಜೊತೆಗೆ ಕತೆಗಳ ತಾತ್ವಿಕತೆಯನ್ನು ಶೋಧಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ. ಮೊದಲ ತಲೆಮಾರಿನ ಕತೆಗಳನ್ನು ಅಧ್ಯಯನಕಾರರು ಪಾಶ್ಚಾತ್ಯ ಮಾದರಿಯಲ್ಲಿ ಪಾಶ್ಚಾತ್ಯ ಧೋರಣೆ ಹಾಗೂ ಪ್ರೇರಣೆಗಳ ಟಂಕಸಾಲೆಯಲ್ಲಿ ಶೋಧಿಸಿದ್ದಾರೆ. ಹಾಗೆಯೇ ರಸ ವಿಮರ್ಶೆಯ ನೆಲೆಯಲ್ಲಿ ಕೆಲವು ಕತೆಗಳ ವಸ್ತು, ಪಾತ್ರ, ಆಶಯ, ಕತೆಯ ಘಟನೆಯನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ನವ್ಯದ ಕೆಲವು ವಿಮರ್ಶಕರು 'ಶಿಲ್ಪ ಹಾಗೂ ಬಂಧ' ಪರಿಕಲ್ಪನೆಯ ಅಡಿಯಲ್ಲಿ ಕತೆಗಳನ್ನು ಅಧ್ಯಯನಕ್ಕೆ ಒಳಪಡಿಸಿದರೂ ಇಲ್ಲಿ ಮೊದಲ ತಲೆಮಾರಿನ ಎಲ್ಲಾ ಕತೆಗಳನ್ನು ಬಹುತ್ವದ ನೆಲೆಯಿಂದ ಸಮಗ್ರವಾದ ಅಧ್ಯಯನಗಳಾಗಲಿಲ್ಲ ಎನ್ನಬಹುದು. ಈ ಹಿನ್ನೆಲೆಯಲ್ಲಿ ಮೊದಲ ತಲೆಮಾರಿನ ಕತೆಗಳನ್ನು ಪುನಃ ಪರಿಶೀಲನೆಗೆ ಒಳಪಡಿಸುವ ಜೊತೆಗೆ ಕತೆಗಳಲ್ಲಿ ಅಭಿವ್ಯಕ್ತಗೊಂಡಿರುವ ಸ್ಥಳೀಯತೆಯ ವಿಭಿನ್ನವಾದ ಸ್ವರೂಪವನ್ನು ಸಿದ್ಧಾಂತವಾಗಿ ಅನುಸಂಧಾನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಮೊದಲ ತಲೆಮಾರಿನ ಕತೆಗಾರರು ಬಹುಪಾಲು ಬ್ರಾಹ್ಮಣ ವರ್ಗದವರಾಗಿದ್ದರಿಂದ ವಸಾಹತುಶಾಹಿಯ ಪ್ರೇರಣೆಗೆ ಒಳಗಾದರು ಮತ್ತು ವಸಾಹತುಶಾಹಿಯು ರೂಪಿಸಿದ ಪ್ರಭುತ್ವದ ನೆಲೆಯ ಸಂವಿಧಾನವು ಭಾರತೀಯ ನಂಬಿಕೆ, ಪರಂಪರೆ, ಆಚಾರ, ಧರ್ಮ, ಭಾಷೆ ಹಾಗೂ ಉದ್ಯೋಗದಲ್ಲಿ ಪಲ್ಲಟವನ್ನು ರೂಪಿಸಿದ್ದರಿಂದ ಬ್ರಾಹ್ಮಣ ಸಮುದಾಯದ ಸಾಂಸ್ಕೃತಿಕ ನಡವಳಿಕೆಗಳು ಅಸ್ಮಿತೆಯನ್ನು ಕಳೆದುಕೊಂಡಾಗ ಅದನ್ನು ಮತ್ತೆ ಮರು ರೂಪಿಸಲು ಸ್ಥಳೀಯತೆಯ ಸತ್ವವನ್ನು ವಸಾಹತುಶಾಹಿಯ ಮುಖಾಮುಖಿಯಾಗಿಸಿ ಕತೆಗಳ ಮೂಲಕ ಅನುಸಂಧಾನ ಮಾಡುವಾಗ ಸ್ಥಳೀಯತೆಯ ಸ್ವರೂಪ ಹಾಗೂ ತಾತ್ವಿಕತೆಯ ಅಭಿವ್ಯಕ್ತಿಯು ಒಂದೇಯಾಗಿರದೆ ಭಿನ್ನ ರೂಪದ್ದಾಗಿತ್ತು. ಈ ವಿಭಿನ್ನವಾದ ಸ್ಥಳೀಯತೆಯ ಸ್ವರೂಪವನ್ನು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಮೊದಲ ತಲೆಮಾರಿನ ಕತೆಗಳು ವಸಾಹತುಶಾಹಿಯ ಕಾಲಮಾನದಲ್ಲಿ ರಚನೆಯಾಗಿದ್ದರಿಂದ ಹಾಗೂ ವಸಾಹತುಶಾಹಿಯ ಧೋರಣೆಗೆ ಪ್ರತಿಯಾದ ಪರಿಕಲ್ಪನೆಯಾಗಿ ಸ್ಥಳೀಯತೆ ರೂಪುಗೊಂಡಿದ್ದರಿಂದ ವಸಾಹತುಶಾಹಿಯ ಧೋರಣೆಯನ್ನು ಪ್ರತಿರೋಧಿಸಿದ,

ಸಂಕರವಾಗಿಸಿಕೊಂಡ ಬಗೆಯನ್ನು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

ವಸಾಹತುಶಾಹಿಯ ಸಂದರ್ಭದಲ್ಲಿ ಆಧುನಿಕ ಪ್ರಜ್ಞೆಯು ಭಾರತವನ್ನು ಪ್ರವೇಶ ಪಡೆದಾಗ ಯಂತ್ರ ನಾಗರೀಕತೆ, ವಿಜ್ಞಾನ, ಭೌತವಾದ, ವೈಚಾರಿಕತೆಯಂತಹ ಪರಿಕಲ್ಪನೆಗಳು ನಮ್ಮ ಪರಂಪರೆಯ ಜ್ಞಾನವನ್ನು, ಧಾರ್ಮಿಕ ನಂಬಿಕೆಗಳನ್ನು ಮೆಟ್ಟನಿಂತ ಸಂದರ್ಭದಲ್ಲಿ ಮೊದಲ ತಲೆಮಾರಿನ ಕತೆಗಳು ಆಧುನಿಕತೆಗೆ ಒಡ್ಡಿದ ಸ್ಥಳೀಯತೆಯ ತಾತ್ವಿಕತೆಯನ್ನು ಶೋಧಿಸುವ ಉದ್ದೇಶವಿದೆ.

ಸ್ಥಳೀಯತೆ ಎನ್ನುವುದು ಪ್ರಾದೇಶಿಕ ಸತ್ವವನ್ನು ಬಲವಾಗಿ ಹೊಂದಿರುವುದರಿಂದ ಕನ್ನಡದ ವಿಭಿನ್ನ ಪ್ರಾದೇಶಿಕ ನೆಲೆಗಳಲ್ಲಿ ರಚನೆಯಾದ ಕತೆಗಳ ಸ್ಥಳೀಯತೆಯು ಭಾಷಿಕ ಅಭಿವ್ಯಕ್ತಿಯು ಭಿನ್ನವಾಗಿರುವುದರಿಂದ ಭಿನ್ನತೆಯನ್ನು ಗುರುತಿಸುವುದು ಮತ್ತು ಕತೆಗಾರರು ಪ್ರಾದೇಶಿಕ ಸತ್ತ್ವವನ್ನು ಬಳಸಿಕೊಂಡು ನಿರೂಪಿಸಿರುವ ಸ್ಥಳೀಯ ಜೀವನ ಮೀಮಾಂಸೆಯನ್ನು ಹುಡುಕುವ ಉದ್ದೇಶವಿದೆ.

ಭಾರತದಲ್ಲಿ ರೂಪುಗೊಂಡ ಸುಧಾರಣಾ ಚಳವಳಿ, ವಚನ ಸಾಹಿತ್ಯ, ದಾಸ ಸಾಹಿತ್ಯದ ಪ್ರಜ್ಞೆಯನ್ನು ಮೊದಲ ತಲೆಮಾರಿನ ಕತೆಗಳು ಅನುಸಂಧಾನ ಮಾಡುತ್ತವೆ ಹಾಗೂ ಆಶಯವನ್ನು ಕಾಪಿಟ್ಟುಕೊಂಡು ಸ್ಥಳೀಯತೆಯ ಮಾದರಿಯಲ್ಲಿ ನಿರೂಪಿಸಿದ ಬಗೆಯನ್ನು ಶೋಧಿಸುವ ಉದ್ದೇಶವನ್ನು ಹೊಂದಿದೆ.

ಸಂಪ್ರದಾಯಬದ್ಧ ಸಮಾಜದಲ್ಲಿ ಆಧುನಿಕ ಪ್ರಜ್ಞೆಯ ಶಿಕ್ಷಣವನ್ನು ಪಡೆದುಕೊಂಡ ಕತೆಗಾರ್ತಿಯರು ತಮ್ಮ ಕಥನ ಅಭಿವ್ಯಕ್ತಿಯನ್ನು ಸ್ತ್ರೀ ಸಂವೇದನೆಯನ್ನು ನಿರೂಪಿಸಲು ಬಳಸಿಕೊಂಡರು. ಆ ಸಂದರ್ಭದಲ್ಲಿ ಪಾಶ್ಚಾತ್ಯ ಚಿಂತನೆಯ ಪ್ರಭಾವ, ಸುಧಾರಣ ಚಳವಳಿಯ ಪ್ರೇರಣೆ ಹಾಗೂ ಪುರುಷ ಕೇಂದ್ರಿತ ಕೌಟುಂಬಿಕ ವ್ಯವಸ್ಥೆಯಲ್ಲಿ ಸ್ಥಳೀಯತೆಯನ್ನು ತಮ್ಮ ಲೋಕವನ್ನು ವಿವರಿಸಲು ಹಾಗೂ ಸ್ತ್ರೀ ಅಸ್ಮಿತೆಯನ್ನು ನಿರೂಪಿಸಲು ಬಳಸಿಕೊಂಡ ವಿಭಿನ್ನವಾದ ತಾತ್ವಿಕ ನೆಲೆಗಳನ್ನು ಹುಡುಕುವ ಉದ್ದೇಶವಿದೆ.

ಹೆಚ್.ವಿ. ಸಾವಿತ್ರಮ್ಮ, ವಾಣಿ, ತ್ರಿವೇಣಿ, ಇತರ ಕತೆಗಾರ್ತಿಯರು ವಸಾಹತುಶಾಹಿಯ ನೆಲೆಯಲ್ಲಿ ಕಥಾ ಪರಂಪರೆಯನ್ನು ರೂಪಿಸಿದರು ಹಾಗೂ ಆಧುನಿಕ ಪ್ರಜ್ಞೆಯನ್ನು ಒಪ್ಪಿಕೊಳ್ಳುವ ಸಂಪ್ರದಾಯಬದ್ಧವಾದ ಆಲೋಚನೆಯನ್ನು ಮೀರುವ ನಡುವೆ ಹುಟ್ಟಿಕೊಂಡ ತಾಕಲಾಟವನ್ನು ಸ್ಥಳೀಯತೆಯ ಭೂಮಿಕೆಯಲ್ಲಿ ತಾತ್ವೀಕರಿಸಿದ ನೆಲೆಗಳನ್ನು ಶೋಧಿಸಿ ಅಧ್ಯಯನ ಮಾಡುವ ಉದ್ದೇಶವಿದೆ.

ಒಂದು ಶತಮಾನ ಕಳೆದು ಹೋಗಿರುವ ಮೊದಲ ತಲೆಮಾರಿನ ಕತೆಗಳನ್ನು ಆ

ಕಾಲಮಾನದ ಪರಿಸರ ಹಾಗೂ ಸಾಂಸ್ಕೃತಿಕ ಪ್ರಜ್ಞೆಯನ್ನು ಗಮನದಲ್ಲಿ ಇಟ್ಟುಕೊಂಡು ಕಥಾ ಸಾಹಿತ್ಯದ ಭಾಷೆ, ರೂಪ, ನಿರೂಪಣೆ, ಪಾತ್ರ ಚಿತ್ರಣ ಇತ್ಯಾದಿಗಳನ್ನು ಗುರುತಿಸಿ, ಚರ್ಚಿಸುವ ಉದ್ದೇಶವಿದೆ.

ಈ ಪ್ರಬಂಧದಲ್ಲಿ ಮೊಲದ ತಲೆಮಾರಿನ ಕತೆಗಾರರು ರೂಪಿಸಿದ ಸಂಸ್ಕೃತಿಗಳ ಅಧ್ಯಯನವೇ ಮುಖ್ಯವಾಗುತ್ತದೆ. ಪ್ರಭುತ್ವದ ಸಂಸ್ಕೃತಿಯ ಹಿಡಿತಕ್ಕೆ ಸಿಕ್ಕ ಸ್ಥಳೀಯ ಸಂಸ್ಕೃತಿಯು ಅಸ್ಮಿತೆಯನ್ನು ಕಳೆದುಕೊಂಡು ಗುಲಾಮತೆಯ ಭಾಗವಾದ ಪ್ರಧಾನ ಸಂಸ್ಕೃತಿಯಿಂದ ಬಿಡಿಸಿಕೊಂಡು, ಪ್ರತ್ಯೇಕ ಅಸ್ತಿತ್ವವನ್ನು ಪಡೆಯುವ ಮೂಲಕ ಪ್ರಧಾನ ಸಂಸ್ಕೃತಿಯ ಪ್ರತಿಯಾಗಿ ನಿಲ್ಲುವ ಸಲುವಾಗಿ ತನ್ನ ಸ್ಥಳೀಯ ಸತ್ವವನ್ನು ಬಲಪಡಿಸುವ ಮತ್ತು ಒಟ್ಟುಗೂಡಿಸುವ ನೆಲೆಯಲ್ಲಿ ಮೊದಲ ತಲೆಮಾರಿನ ಕತೆಗಳ ಸ್ಥಳೀಯತೆಯನ್ನು ನಂಬಿಕೆ, ಧರ್ಮ, ಭಾಷೆ, ಆಚಾರ, ಸಂಪ್ರದಾಯ ಹಾಗೂ ಜೀವನ ವಿಧಾನದ ಮೂಲಕ ನಿರೂಪಿಸಿದ ವಿಭಿನ್ನವಾದ ನೆಲೆಗಳ ತಿಳುವಳಿಕೆಯನ್ನು ಸ್ಥಳೀಯತೆಯಾಗಿ ನಿರೂಪನೆಗೊಂಡ ಮೀಮಾಂಸೆಯನ್ನು ಶೋಧಿಸುವ ಉದ್ದೇಶವಿದೆ.

ಒಂದು ಪ್ರದೇಶದ ಸ್ಥಳೀಯವಾದ ಕೃಷಿ ಬದುಕಿನ ನೆಲೆಗಟ್ಟಿನಲ್ಲಿ ರೂಪುಗೊಂಡಿದ್ದ ಜನಜೀವನವು ವಸಾಹತುಶಾಹಿಯ ಧೋರಣೆಗಳಿಗೆ ಒಳಗಾಗಿ ಪಲ್ಲಟಗೊಂಡು, ಔದ್ಯೋಗಿಕ ನೆಲೆಯಲ್ಲಿ ಕೌಟುಂಬಿಕ ವ್ಯವಸ್ಥೆ ಹಾಗೂ ಮೌಲ್ಯರಹಿತವಾದ ಜೀವ ಸಂಬಂಧಗಳು ಅಸ್ಮಿತೆಯನ್ನು ಪಡೆದುಕೊಂಡಾಗ ಮೊದಲ ತಲೆಮಾರಿನ ಕತೆಗಾರರು ತಮ್ಮ ಅನುಭವದ ನೆಲೆಯಲ್ಲಿ ನಮ್ಮ ನೆಲದ ಮೌಲ್ಯ ಹಾಗೂ ಜೀವನ ಸತ್ವವನ್ನು ಸಮಾಜದ ಚಿಕಿತ್ಸೆಯ ಭಾಗವಾಗಿ ಸ್ಥಳೀಯತೆಯ ಪರಿಕಲ್ಪನೆಯಲ್ಲಿ ಅಭಿವ್ಯಕ್ತಿಸಿದ ವಿಭಿನ್ನ ರೂಪಗಳನ್ನು ಕಂಡುಕೊಳ್ಳುವ ಉದ್ದೇಶವಿದೆ.

'ಸ್ಥಳೀಯತೆ' ಪರಿಕಲ್ಪನೆಯು ಸ್ಥಿರವಾದುದ್ದಲ್ಲದೆ, ಚಲನಶೀಲ ಹಾಗೂ ಸೃಜನಶೀಲತೆಯನ್ನು ಮೈಗೂಡಿಸಿಕೊಂಡಿದ್ದರಿಂದ ಕಾಲ, ಪರಿಸರ ಹಾಗೂ ಅನ್ಯ ಸಂಸ್ಕೃತಿಯ ಪ್ರಭಾವದಿಂದ ಸ್ಥಳೀಯವಾದದ್ದು ಆಧುನಿಕವಾಗಿ ರೂಪುಗೊಳ್ಳುವ ಹಾಗೂ ಆಧುನಿಕವಾಗಿದ್ದು ಸ್ಥಳೀಯವಾಗಿ ರೂಪುಗೊಳ್ಳುತ್ತಿದ್ದ ನೆಲೆಯನ್ನು ಮೊದಲ ತಲೆಮಾರಿನ ಕತೆಗಳು ಅನುಸಂಧಾನ ಮಾಡಿದ ಹಾಗೂ ಗುರುತಿಸಿದ ಬಗೆಯನ್ನು ಶೋಧಿಸುವ ಉದ್ದೇಶವನ್ನು ಒಳಗೊಂಡಿದೆ.

### ೧.೨ ಅಧ್ಯಯನದ ಮಹತ್ತ್ವ

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಮೊದಲ ತಲೆಮಾರಿನ ಕತೆಗಳು. ವಸಾಹತುಶಾಹಿಯ ಸಂದರ್ಭದಲ್ಲಿ ರಚನೆಯಾದವುಗಳಾಗಿದ್ದರೂ ವಿವಿಧ ರಾಜಪ್ರಭುತ್ವದ ಪ್ರಭಾವಕ್ಕೆ ಒಳಗಾಗುವ ಮೂಲಕ ವಿಭಿನ್ನವಾದ ಹಾಗೂ ಬಹುಸ್ತರವಾದ ತಿಳುವಳಿಕೆಯನ್ನು ಒಳಗೊಂಡಿವೆ. ಮೊದಲ ತಲೆಮಾರಿನ ಕತೆಗಳು ಆಧುನಿಕ ಕಾಲಮಾನದ ಆರಂಭದ ಕತೆಗಳಾಗಿವೆ ಹಾಗೂ ಕರ್ನಾಟಕದ ಬೇರೆ ಬೇರೆ ಪ್ರಾದೇಶಿಕ ಹಿನ್ನೆಲೆ ಹೊಂದಿರುವ ಕತೆಗಾರರು ಆಯಾ ನೆಲದ ಸತ್ವವನ್ನು ಸಾಂಸ್ಕೃತಿಕ ಬದುಕನ್ನು ಕತೆಯಾಗಿಸಿ, ಕಥಾ ಪರಂಪರೆಯನ್ನು ಹುಟ್ಟು ಹಾಕಿದ್ದರಿಂದ ಮೊದಲ ತಲೆಮಾರಿನ ಕತೆಗಳನ್ನು ವಿಭಿನ್ನ ದೃಷ್ಟಿಕೋನದಿಂದ ಅಧ್ಯಯನ ಮಾಡುವುದು ಮುಖ್ಯವಾಗಿದೆ.

ಈ ಅಧ್ಯಯನದ ದೃಷ್ಟಿಕೋನವು ಮಹತ್ತ್ವವುಳ್ಳದ್ದಾಗಿದೆ. ಒಂದು 'ಸ್ಥಳೀಯತೆ ಹಾಗೂ ತಾತ್ವಿಕತೆ' ಎಂಬ ಎರಡು ಪರಿಕಲ್ಪನೆಯನ್ನು ವಸಾಹತುಶಾಹಿಯ ಸಂದರ್ಭದಲ್ಲಿ ಅಧ್ಯಯನಕ್ಕೆ ಒಳಪಡಿಸಿರುವುದು. ದಕ್ಷಿಣ ಕನ್ನಡ, ಮೈಸೂರು ಕರ್ನಾಟಕ, ಮುಂಬೈ ಕರ್ನಾಟಕ ಹಾಗೂ ಕಲ್ಯಾಣ ಕರ್ನಾಟಕ ಭಾಗದ ಕತೆಗಾರರ ಕತೆಗಳನ್ನು ಸ್ಥಳೀಯತೆಯ ಲೋಕಗ್ರಹಿಕೆಯಲ್ಲಿ ಅಧ್ಯಯನಕ್ಕೆ ಒಳಪಡಿಸಿರುವುದು, ಮೊದಲ ತಲೆಮಾರಿನ ಕತೆಗಳನ್ನು ಈ ಹಿಂದೆ ನವೋದಯ ಹಾಗೂ ನವ್ಯದ ವಿಮರ್ಶಕರು ಹಾಗೂ ಸಂಶೋಧಕರು ಸ್ಥಳೀಯತೆಯ ಪರಿಕಲ್ಪನೆಯಲ್ಲಿ ಪೂರ್ಣವಾದ ಅಧ್ಯಯನ ಮಾಡಿಲ್ಲ. ಹಾಗಾಗಿ ಮೊದಲ ತಲೆಮಾರಿನ ಕತೆಗಳನ್ನು ಸ್ಥಳೀಯತೆಯ ಪರಿಕಲ್ಪನೆಯ ನೆಲೆಯಲ್ಲಿ ಹಾಗೂ ಸ್ಥಳೀಯವಾದ ಪ್ರಾದೇಶಿಕ ತಿಳುವಳಿಕೆಯ ಮೂಲಕ ಅಧ್ಯಯನ ಮಾಡುತ್ತಿರುವುದು ಇದೇ ಮೊದಲು. ಈ ದೃಷ್ಟಿಯಿಂದ ಈ ಅಧ್ಯಯನವು ಮಹತ್ತ್ವದಾಗಿದೆ.

ಸಾಹಿತ್ಯ ಚಳವಳಿಗಳು ಇಲ್ಲದಿರುವ ಈ ಕಾಲಮಾನದಲ್ಲಿ ಒಂದು ಶತಮಾನವನ್ನು ಕಳೆದಿರುವ, ಮೊದಲ ತಲೆಮಾರಿನ ಕಥನ ಸಾಹಿತ್ಯವನ್ನು ಹೊಸ ತಿಳುವಳಿಕೆಯ ಮೂಲಕ ಕತೆಗಾರರನ್ನು ಹಾಗೂ ಕತೆಗಳನ್ನು ಮುಕ್ತವಾಗಿ ಅಧ್ಯಯನಕ್ಕೆ ಒಳಪಡಿಸುವ ಜೊತೆಗೆ ಸ್ಥಳೀಯ ಪ್ರಜ್ಞೆಯು ಪ್ರಾದೇಶಿಕ ಸತ್ವವನ್ನು ಒಳಗೊಂಡು ವಿವಿಧ ನೆಲೆಯಲ್ಲಿ ಅಭಿವ್ಯಕ್ತ ಗೊಂಡಿರುವ ಸ್ವರೂಪವನ್ನು ಶೋಧಿಸುವುದು ಹಾಗೂ ವಸಾಹತುಶಾಹಿ ಧೋರಣೆಯನ್ನು ಅನುಸಂಧಾನ ಮಾಡಿದ ಬಗೆಯನ್ನು ಗುರುತಿಸುವುದಕ್ಕೆ ಈ ಅಧ್ಯಯನವು ಮಹತ್ತ್ವವಾಗುತ್ತದೆ.

ವಸಾಹತುಶಾಹಿಯ ಪ್ರಭುತ್ವದ ಸಂಸ್ಕೃತಿಯನ್ನು ಮೊದಲ ತಲೆಮಾರಿನ ಕತೆಗಾರರು ಒಪ್ಪಿಕೊಂಡ. ತಮ್ಮದಾಗಿಸಿಕೊಂಡ ಸ್ಥಿತಿ ಹಾಗೂ ಸ್ಥಳೀಯತೆಯ ಭಿತ್ತಿಯಲ್ಲಿ

ಮರೆಯಾಗುತ್ತಿರುವ ನಮ್ಮ ನೆಲದ ನಂಬಿಕೆ, ಆಚರಣೆ, ಭಾಷೆ, ಮಾನವ ಸಂಬಂಧ, ಜೀವನ ಮೌಲ್ಯ, ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ಕಳೆದುಕೊಳ್ಳಲಾರದೆ ತನ್ನ ನೆಲದ ಸತ್ವವನ್ನು ಬಲಪಡಿಸುವ ಹಾಗೂ ವಸಾಹತುಶಾಹಿಗೆ ಪ್ರತಿಯಾಗಿ ಸ್ಥಳೀಯ ತಿಳುವಳಿಕೆಯನ್ನು ನಿರೂಪಿಸುವ ನೆಲೆಯಲ್ಲಿ ಸ್ಥಳೀಯತೆಯನ್ನು ಕೇಂದ್ರವಾಗಿಸಿಕೊಂಡು ಕತೆಯ ಸಂವಿಧಾನವನ್ನು ಶೋಧಿಸುವುದು ಮಹತ್ತ್ವವಾಗಿದೆ.

ಸ್ಥಳೀಯತೆಯನ್ನೇ ಕೇಂದ್ರವಾಗಿಸಿಕೊಂಡು ರಚನೆಯಾದ ಕತೆಗಳ ಕಥಾವಸ್ತು, ಪಾತ್ರ ಹಾಗೂ ಘಟನೆಗಳು ಆ ಕಾಲಮಾನದ ಸಾಂಸ್ಕೃತಿಕ ಹಾಗೂ ಸಾಮಾಜಿಕ ಪಲ್ಲಟವನ್ನು ಹೇಗೆ ಒಳಗೊಳ್ಳುತ್ತದೆ ಮತ್ತು ಆಧುನಿಕ ಪಾತ್ರ ಮತ್ತು ಸ್ಥಳೀಯ ಪಾತ್ರಗಳು ಪ್ರಾದೇಶಿಕ ಸತ್ವವನ್ನು ಕಾಪಿಟ್ಟುಕೊಂಡು ಜೀವನ ಮೌಲ್ಯವನ್ನು ಹುಡುಕುವ ನೆಲೆಯ ಈ ಅಧ್ಯಯನವು ಮಹತ್ತ್ವವಾಗಿದೆ.

ಸ್ವಾತಂತ್ರ್ಯಪೂರ್ವ ಕಾಲಮಾನದ ವಸಾಹತುಶಾಹಿಯ ಪ್ರಭುತ್ವದ ಪರಿಸರದಲ್ಲಿ ರಚನೆಯಾದ ಕತೆಗಳನ್ನು ಸ್ಥಳೀಯ ಜ್ಞಾನದ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸುವ ಜೊತೆಗೆ ವಸಾಹತುಶಾಹಿಯ ಧೋರಣೆಯ ಪ್ರಭಾವಕ್ಕೆ ಒಳಗಾಗಿ ಈ ಕಾಲಮಾನದಲ್ಲಿ ರಚನೆಯಾಗಿರುವ ಕತೆಗಳನ್ನು ಆ ನೆಲದ ಸತ್ವದ ನೆಲೆಯಿಂದ ಅಧ್ಯಯನಕ್ಕೆ ಒಳಪಡಿಸಿ ಸ್ಥಳೀಯತೆಯನ್ನು ಶೋಧಿಸುವುದು ಮಹತ್ತ್ವವುಳ್ಳದ್ದಾಗಿದೆ.

ಈ ಪ್ರಬಂಧದ ಅಧ್ಯಯನವು ಶೈಕ್ಷಣಿಕ ಅಗತ್ಯದ ನೆಲೆಯಿಂದ ಮಹತ್ತ್ವದ್ದಾಗಿದೆ. ಸಾಹಿತ್ಯದ ವಿದ್ಯಾರ್ಥಿಗಳಿಗೆ ಮೊದಲ ತಲೆಮಾರಿನ ಕತೆ ಹಾಗೂ ಕತೆಗಾರರ ಕಥನ ಪರಂಪರೆಯನ್ನು ಒಂದೆಡೆ ನಿರೂಪಿಸುವುದರ ಜೊತೆಗೆ ಅದರ ಪ್ರಾಮುಖ್ಯತೆಯನ್ನು ಕಂಡುಕೊಂಡಿದೆ, ವಸಾಹತುಶಾಹಿ ಸಂದರ್ಭದಲ್ಲಿ ಪಶ್ಚಿಮದ ಸಾಹಿತ್ಯ ಹಾಗೂ ಚಿಂತನೆಗಳ ಕನ್ನಡ ಸಾಹಿತ್ಯ ಪರಿಸರವನ್ನು ಪ್ರಭಾವಿಸಿದರೂ ನಮ್ಮ ನೆಲದ ಸತ್ವವನ್ನು ಸ್ಥಳೀಯತೆಯ ಪರಿಕಲ್ಪನೆಯಲ್ಲಿ ಅಭಿವ್ಯಕ್ತಿಸಿದ ವಿಭಿನ್ನ ಲೋಕ ಗ್ರಹಿಕೆಗಳು ಒಂದೇ ಕಡೆಯಲ್ಲಿ ಸಿಗುವುದಿಲ್ಲ. ವಿದ್ಯಾರ್ಥಿಗಳಿಗೆ ಮೊದಲ ತಲೆಮಾರಿನ ಕಥಾ ಪರಂಪರೆಯನ್ನು ತಿಳಿದುಕೊಳ್ಳುವುದಕ್ಕೆ ಈ ಅಧ್ಯಯನವು ಮಹತ್ತ್ವದ್ದಾಗಿದೆ ಮತ್ತು ತುಂಬಾ ಸಹಕಾರಿಯಾಗಬಲ್ಲದು.

ನಮ್ಮ ನೆಲದ ನಂಬಿಕೆ ಹಾಗೂ ಕೃಷಿ ಬದುಕಿನ ಜೀವನ ಮೌಲ್ಯಗಳನ್ನು ಕಾಪಿಟ್ಟುಕೊಂಡು, ಸುಧಾರಣಾವಾದದ ತಿಳುವಳಿಕೆಯನ್ನು, ಪಶ್ಚಿಮದ ಆಲೋಚನಾ ಕ್ರಮವನ್ನು ತಾತ್ವಿಕವಾಗಿ ಅನುಸಂಧಾನಕ್ಕೆ ಒಳಪಡಿಸಿದ ಮೊದಲ ತಲೆಮಾರಿನ ಕತೆಗಳು ಸ್ಥಳೀಯತೆಯನ್ನು ವಸಾಹತುಶಾಹಿಯ ಪ್ರತಿಯಾಗಿ ಕನ್ನಡ ಪ್ರದೇಶದ ಸಾಂಸ್ಕೃತಿಕ

ಅಭಿವ್ಯಕ್ತಿಯ ಕಟ್ಟುವ ಹಾಗೂ ಸ್ವಾತಂತ್ರ್ಯ ಚಳವಳಿಗೆ ಬೆಂಬಲಿಸುವ ಜೊತೆಗೆ ನಮ್ಮ ಪರಂಪರೆ, ಭಾಷೆ, ನಂಬಿಕೆ, ಧರ್ಮ, ಸಂಪ್ರದಾಯ, ಆಚಾರಗಳನ್ನು ಗುಣಾತ್ಮಕವಾದ ನೆಲೆಯಲ್ಲಿ ಅನುಸಂಧಾನ ಮಾಡಿರುವುದರಿಂದ ಈ ಅಧ್ಯಯನವು ಸಾಂಸ್ಕೃತಿಕ ಆಯಾಮದಿಂದ ತಪ್ಪಿಸಿಕೊಂಡಿಲ್ಲವೆಂಬುದು ಮಹತ್ತ್ವದ ಸಂಗತಿಯಾಗಿದೆ.

**೧.೩ ಅಧ್ಯಯನದ ವ್ಯಾಪ್ತಿ – ವೈಧಾನಿಕತೆ**

ಈ ಅಧ್ಯಯನದ ವ್ಯಾಪ್ತಿಯು ವಸಾಹತುಶಾಹಿಯ ಕಾಲಮಾನದಲ್ಲಿ ರಚನೆಯಾದ ಮೊದಲ ತಲೆಮಾರಿನ ಕತೆಗಳನ್ನು ಕಾಲಘಟ್ಟವನ್ನು ಮೀರಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮುಖ್ಯವಾಗಿ ವಸಾಹತುಶಾಹಿಯ ಧೋರಣೆ ಪ್ರೇರಣೆಗೆ ಒಳಗಾಗಿ ಸ್ಥಳೀಯತೆಯ ಸತ್ವವನ್ನು ಒಳಗೊಂಡು ರಚನೆಯಾದ ಕತೆಗಾರರನ್ನು ಹಾಗೂ ಕತೆಗಳನ್ನು ಮುಕ್ತ ಮನಸ್ಸಿನಿಂದ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮೊದಲ ತಲೆಮಾರಿನ ಕತೆಗಾರರನ್ನು, ಕತೆಗಳನ್ನು ಅಧ್ಯಯನಕ್ಕೆ ಒಳಪಡಿಸಿ, 'ವಸಾಹತು ಕಾಲಘಟ್ಟದ ಕನ್ನಡ ಕಥಾ ಸಾಹಿತ್ಯದಲ್ಲಿ ಸ್ಥಳೀಯ ಪ್ರಜ್ಞೆಯ ತಾತ್ವಿಕ ಶೋಧ' ಎಂಬ ವಿಷಯದ ಕುರಿತು ಅಧ್ಯಯನ ಮಾಡಲಾಗಿದೆ. ಈ ಅಧ್ಯಯನಕ್ಕೆ ಬಳಸಿಕೊಂಡ ಮೂಲ ಆಕರಗಳನ್ನು ಈ ಪ್ರಬಂಧದ ಕೊನೆಯ ಭಾಗದಲ್ಲಿ ಲಗತ್ತಿಸಿದ್ದೇನೆ.

ಕನ್ನಡದ ಮೊದಲ ತಲೆಮಾರಿನ ಸುಮಾರು ೬೦-೭೦ ಕತೆಗಳನ್ನು ಬಿಡಿಬಿಡಿಯಾಗಿ ಅಧ್ಯಯನಕ್ಕೆ ಒಳಪಡಿಸುವುದು, ಆ ಕಾಲಮಾನದಲ್ಲಿ ವಸಾಹತುಶಾಹಿಯ ಪ್ರಭಾವದ ನಡುವೆ ತನ್ನ ಪ್ರಾದೇಶಿಕವಾದ ಸ್ಥಳೀಯ ಸತ್ವವನ್ನು ಉಳಿಸಿಕೊಂಡು ಬಂದಿರುವ ಕತೆಗಳನ್ನು ಕತೆಗಾರರ ಕೇಂದ್ರೀತವಾಗಿ, ಕಥನ ಕೇಂದ್ರೀತವಾಗಿ ಹಾಗೂ ಚಾರಿತ್ರಿಕ ನೆಲೆಗಳ ಮೂಲಕ ಸ್ಥಳೀಯ ಸಂಸ್ಕೃತಿಯ ಎಳೆಗಳನ್ನು ವಿಮರ್ಶೆಗೆ ಒಳಪಡಿಸುವ ಮೂಲಕ ವಸ್ತು ಕೇಂದ್ರಿತವಾಗಿ ಸ್ಥಳೀಯತೆಯ ತಿಳುವಳಿಕೆಯನ್ನು ಸಂರಚನವಾದದ ಮೂಲಕ ಅಧ್ಯಯನಕ್ಕೆ ಒಳಪಡಿಸುವುದು ಈ ಪ್ರಬಂಧದ ವೈಧಾನಿಕತೆಯಾಗಿದೆ.

ಮೊದಲ ತಲೆಮಾರಿನ ಕತೆಗಾರ್ತಿಯರ ಕತೆಗಳನ್ನು ಅಧ್ಯಯನಕ್ಕೆ ಒಳಪಡಿಸುವಾಗ ಆ ಕಾಲಮಾನದ ಮಹಿಳೆಯರ ಬದುಕಿನ ವಿನ್ಯಾಸವನ್ನು ಗಮನದಲ್ಲಿ ಇಟ್ಟುಕೊಂಡು ಅವರ ಕತೆಯ ವಸ್ತು, ನಿರೂಪಣೆ ಹಾಗೂ ಮಹಿಳಾ ಸಮಸ್ಯೆಗಳನ್ನು ವಿಮರ್ಶೆಗೆ ಒಳಪಡಿಸುವ ಬಗೆಯನ್ನು ಕತೆಗಾರ್ತಿಯರು, ಮಹಿಳೆಯು ಸಾಮಾಜಿಕ ಅಭಿವ್ಯಕ್ತಿಯನ್ನು ಸ್ಥಳೀಯತೆಯ ಪ್ರಜ್ಞೆಯಲ್ಲಿ ಮಂಡಿಸಿರುವ ತಿಳುವಳಿಕೆಯನ್ನು ಸ್ತ್ರೀವಾದಿ ದೃಷ್ಟಿಕೋನದಲ್ಲಿ

ಅಧ್ಯಯನ ಮಾಡುವ ವಿಧಾನವನ್ನು ಬಳಸಲಾಗಿದೆ.

ಸಾಮಾಜಿಕ, ಕೌಟುಂಬಿಕ, ಆರ್ಥಿಕ, ರಾಜಕೀಯ ಹಾಗೂ ಔದ್ಯೋಗಿಕ ನೆಲೆಗಳನ್ನು ಅನುಸಂಧಾನ ಮಾಡುವುದರ ಜೊತೆಗೆ ಯಜಮಾನಿಕೆ ಹಾಗೂ ದುಡಿಯುವ ವರ್ಗಗಳ ಸಂಬಂಧವನ್ನು ಮೊದಲ ತಲೆಮಾರಿನ ಕತೆಗಳು ಸ್ಥಳೀಯತೆಯ ನೆಲೆಯಲ್ಲಿ ಗುಣಾತ್ಮಕವಾದ ಅಭಿವ್ಯಕ್ತಿಯನ್ನು ಹೊಂದಿರುವುದರಿಂದ ಸಾಹಿತ್ಯಕ ಮತ್ತು ಸಂಸ್ಕೃತಿ ನೆಲೆಯ ಅಧ್ಯಯನ ವಿಧಾನವನ್ನು ಒಳಗೊಂಡಿದೆ.

ಅಧ್ಯಾಯ - ೨

## ೨.೧ ಸ್ಥಳೀಯತೆಯ ಚರ್ಚೆಯ ಪೂರ್ವ ಅವಲೋಕನ

ಸ್ಥಳೀಯತೆಯ ಲೋಕ ದೃಷ್ಟಿಕೋನವು ಒಂದೊಂದು ಕಾಲಘಟ್ಟದಲ್ಲಿ ಸಾಹಿತ್ಯದ ಕೇಂದ್ರ ಸತ್ವವಾಗಿ ಅಭಿವ್ಯಕ್ತಗೊಂಡಿದೆ. ಆಧುನಿಕ ಸಂದರ್ಭದಲ್ಲಿ ಸ್ಥಳೀಯತೆಯ ಪ್ರಜ್ಞೆಯನ್ನು ಗುರುತು ಮಾಡುವ ಮತ್ತು ಶೋಧಿಸುವ ಕಾರ್ಯವನ್ನು ಅನೇಕ ಚಿಂತಕರು ಮಾಡಿದರು. ಸ್ಥಳೀಯತೆಯ/ದೇಸೀಯತೆಯನ್ನು ವಿಭಿನ್ನ ನೆಲೆಯಲ್ಲಿ ಕನ್ನಡದ ಸಾಹಿತ್ಯದ ಸಂದರ್ಭವನ್ನು ಇಟ್ಟುಕೊಂಡು ಚರ್ಚೆ ಮಾಡಲಾದ ಕೃತಿಗಳ ತಾತ್ವಿಕತೆಯನ್ನು ಗಮನದಲ್ಲಿಟ್ಟುಕೊಂಡು ಈ ಮಹಾಪ್ರಬಂಧದಲ್ಲಿ ಸ್ಥಳೀಯತೆ ಸ್ವರೂಪವನ್ನು ಮೊದಲ ತಲೆಮಾರಿನ ಕಥಾ ಪರಂಪರೆ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಗಾಂಧೀಜಿಯವರ 'ದಿ ಹಿಂದೂ ಸ್ವರಾಜ್' ಕೃತಿಯು ಸ್ಥಳೀಯತೆಯ ಸತ್ವವನ್ನು ರಾಷ್ಟ್ರೀಯ ನೆಲೆಯಲ್ಲಿ ಚರ್ಚಿಸುತ್ತದೆ. ಗಾಂಧೀಜಿಯವರು ವಸಾಹತುಶಾಹಿ ಚಿಂತನ ಕ್ರಮ ಮತ್ತು ಆಧುನಿಕ ಪರಿಸರದ ಆಡಳಿತ ಕ್ರಮಕ್ಕೆ ಮುಖಾಮುಖಿಯಾಗಿ ಭಾರತೀಯತೆಯನ್ನು ಅತ್ಯಂತ ನಾಜೂಕಾಗಿ ನಿರೂಪಿಸುತ್ತಾರೆ. ಸಂಭಾಷಣೆಯ ನೆಲೆಯಲ್ಲಿ ಅಭಿವ್ಯಕ್ತವಾಗಿರುವ ಈ ಕೃತಿಯು ಭಾರತೀಯ ಸ್ಥಳೀಯ ಆಲೋಚನೆಯನ್ನು ರಚನಾತ್ಮಕವಾಗಿ ಮಂಡಿಸುತ್ತದೆ, ವಸಾಹತುಶಾಹಿಯ ಪರಿಣಾಮದಿಂದ ಭಾರತದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ವಿಸ್ತರತೆ ಹಾಗೂ ಆಧುನಿಕ ಅಭಿವೃದ್ಧಿ ಮಾದರಿಗಳು ಭಾರತೀಯ ಜನ-ಸಂಸ್ಕೃತಿಯ ಮೇಲೆ ಬಹು ತಲ್ಲಣವನ್ನು ಹುಟ್ಟು ಹಾಕಿತು. ಭಾರತಕ್ಕೆ ಪಾಶ್ಚಾತ್ಯ ವಸಾಹತುಶಾಹಿಯ ಆಗಮನ ಮತ್ತು ಅಧಿಪತ್ಯದ ನಂತರದಲ್ಲಿ ನಮ್ಮ ಸ್ಥಳೀಯ ಜೀವನ ಸತ್ವಗಳು ತನ್ನ ಅಸ್ಮಿತೆಯನ್ನು ಕಳೆದುಕೊಂಡು ವಿಭಜನೆಗೆ ಒಳಗಾಗಿದ್ದವು. ಈ ಸಂದರ್ಭದಲ್ಲಿ ಸ್ಥಳೀಯ ಪರಂಪರೆಯನ್ನು ವಸಾಹತುಶಾಹಿಯ ಪರಂಪರೆಯ ಪ್ರತಿಯಾಗಿ

ನಿಲ್ಲಿಸುವ ಮತ್ತು ವಸಾಹತುಶಾಹಿಯ ವಿರುದ್ಧ ಚಳುವಳಿಯನ್ನು ರೂಪಿಸುವ ತಾತ್ವಿಕತೆಯನ್ನು ಗಾಂಧೀಜಿಯವರು ಈ ಕೃತಿಯಲ್ಲಿ ಮಂಡಿಸುತ್ತಾರೆ. ಈ ಕೃತಿಯು ಸ್ಥಳೀಯತೆಯ ಸತ್ವವೇ ಭೂಮಿಕೆಯಾಗಿಸಿಕೊಂಡು ಯಂತ್ರ ನಾಗರಿಕತೆಯನ್ನು ವಿರೋಧಿಸುವ ಮತ್ತು ಆಧುನಿಕತೆಯೊಂದಿಗಿನ ನಾಗರೀಕತೆಗೆ ಪರ್ಯಾಯವಾದ ಸ್ವರಾಜ್ಯ ಮತ್ತು ಸ್ವದೇಶಿ ಪರಿಕಲ್ಪನೆಯನ್ನು ಮಂಡಿಸುತ್ತದೆ. ಕೃತಿಯಲ್ಲಿ ಸ್ಥಳೀಯತೆಯ ಸ್ವರೂಪವು ಸ್ವದೇಶಿ ಹಾಗೂ ಸ್ವರಾಜ್ಯಗಳ ಪರಿಕಲ್ಪನೆಯ ನೆಲೆಯಲ್ಲಿ ಅಭಿವ್ಯಕ್ತಗೊಂಡಿದೆ.

ಪ್ರೊ. ಸಿ.ಆರ್. ಯರವಿನ ತೆಲಿಮಠ ದೇಸೀಯತೆ ಮತ್ತು ದೇಶೀವಾದ ಕೃತಿಯಲ್ಲಿ ಸ್ಥಳೀಯತೆ/ದೇಸೀಯತೆಯನ್ನು ಪ್ರಾಚೀನ, ಮಧ್ಯಕಾಲೀನ, ವಸಾಹತುಶಾಹಿ ಕಾಲ ಹಾಗೂ ವಸಾಹತ್ತೋತ್ತರ ಕಾಲದ ನೆಲೆಯಲ್ಲಿ ಶೋಧಿಸುತ್ತಾರೆ. ಈ ಕೃತಿಯು ಸಮಗ್ರವಾದ ದೇಸೀಯತೆಯ ಚಿತ್ರಣವನ್ನು ಒದಗಿಸುತ್ತದೆ. ಸ್ಥಳೀಯತೆ/ದೇಸೀಯತೆ ಎಂಬುದನ್ನು ಅನ್ಯಸಂಸ್ಕೃತಿಯ ಆಕ್ರಮಣದ ನಂತರದಲ್ಲಿ ಹುಟ್ಟಿಕೊಳ್ಳುವ ಪರಿಕಲ್ಪನೆ ಎಂಬಂತೆ ಚರ್ಚೆಗೆ ಒಳಪಡಿಸುವ ಈ ಕೃತಿಯು ಸ್ಥಳೀಯತೆಯನ್ನು ಹೀಗೆ ಗುರುತಿಸುತ್ತದೆ, "ಸ್ಥಳೀಯತೆಯು ಒಂದು ಗುಣ ನಿರ್ದೇಶಕ ಪದವಾಗಿರದೆ, ಒಂದು ನಿರ್ದಿಷ್ಟ ಸಂಸ್ಕೃತಿಯಲ್ಲಿ ನಿರ್ಮಿಸಲ್ಪಟ್ಟ ಒಳ್ಳೆಯ ಹಾಗೂ ಕೆಟ್ಟ ವಿಚಾರಗಳ ಸಾಮಾನ್ಯ ತತ್ವವಾಗಿದೆ" ಎಂದು ವ್ಯಾಖ್ಯಾನಿಸುವ ಯರವಿನ ತೆಲಿಮಠ ಅವರು ಸ್ಥಳೀಯತೆ ಉಗಮದ ನೆಲೆಯನ್ನು ಸಂಸ್ಕೃತಿಯ ಕೇಂದ್ರೀಕೃತ ನೆಲೆಯಲ್ಲಿ ನಿರೂಪಿಸುತ್ತಾರೆ. ಮುಖ್ಯವಾಗಿ ಇವರ ಪ್ರಕಾರ ಸ್ಥಳೀಯತೆ ಹುಟ್ಟಿಕೊಳ್ಳುವುದು: **೧. ಪರರಾಷ್ಟ್ರೀಯ ಸಂಸ್ಕೃತಿಯ ಸಂಪರ್ಕವಿಲ್ಲದೆ ಇರುವ ಸಂದರ್ಭ, ೨. ರಾಜ್ಯಶಾಹಿ ಸಂದರ್ಭ, ೩. ವಸಾಹತುಶಾಹಿ ಸಂದರ್ಭ** ಎಂದು ಗುರುತಿಸುವ ಮೂಲಕ ಸಂಸ್ಕೃತಿಗಳ ಸಂಪರ್ಕ ಸಂಘರ್ಷಗಳು ಸ್ಥಳೀಯತೆಯ ಅಸ್ಮಿತೆಯನ್ನು ನಿರೂಪಿಸುತ್ತದೆ ಎನ್ನುವ ತಾತ್ವಿಕತೆಯನ್ನು ಕಟ್ಟುತ್ತಾರೆ. "ವಸಾಹತುಶಾಹಿಯ ಮುಖ್ಯಗುರಿ ದೇಶೀಯ ಸಂಸ್ಕೃತಿಯ ಬಹುಮುಖತ್ವ ಮತ್ತು ವೈವಿಧ್ಯತೆಯನ್ನು ನಾಶಮಾಡಿ ಅವುಗಳನ್ನು ಸಾಂಸ್ಕೃತಿಕವಾಗಿ ಮಾರ್ಪಡಿಸುವುದಾಗಿದ್ದಿತು. ಇಂಥ ಸಂದರ್ಭದಲ್ಲಿ ಪರಸ್ಪರ ವಿನಿಮಯದ ಬದಲು ಯಜಮಾನಿಕೆಯೇ ಪ್ರಮುಖ ಪಾತ್ರವಹಿಸುತ್ತದೆ. ವಸಾಹತುಶಾಹಿಯ ಉದ್ದೇಶ ಪೂರ್ತಿ ಈಡೇರದಿದ್ದರೂ ಅದರ ಪ್ರಭಾವದಡಿಯಲ್ಲಿ ನಮ್ಮ ದೇಶೀಯ ಸಂಸ್ಕೃತಿಯಲ್ಲಿ ಅನೇಕ ಏರು ಪೇರುಗಳಾಗುತ್ತವೆ. ಇಂಥ ಸಂದರ್ಭದಲ್ಲಿ ದೇಶೀವಾದಿ ನಿಲುವು ಹುಟ್ಟಿಕೊಳ್ಳುತ್ತದೆ" ಎಂಬ ಮಾತು ವಸಾಹತುಶಾಹಿಯ ಸಂದರ್ಭದಲ್ಲಿ ಭಾರತದಲ್ಲಿ ದೇಸೀಯತೆಯ ಬೇರು ಬಹು ಆಯಾಮವನ್ನು ಪಡೆದುಕೊಂಡು ಅಭಿವ್ಯಕ್ತಗೊಂಡವು ಎಂಬುವುದನ್ನು ಈ

ಕೃತಿಯು ನಿರೂಪಿಸುತ್ತದೆ.

ದೇಶಿ ಮತ್ತು ಮಾರ್ಗವೆಂಬ ನೆಲೆಯಲ್ಲಿ ಸ್ಥಳೀಯತೆಯ ಸ್ವರೂಪವನ್ನು ಗುರುತಿಸುವ ಮತ್ತು ಪರಿಕಲ್ಪನೆಯಾಗಿಸುವ ಕಡೆಗೆ ನಡೆಯುತ್ತದೆ. ಕನ್ನಡದ ಅನೇಕ ಚಿಂತಕರು ಚರ್ಚಿಸಿದಂತೆ ಮಾರ್ಗದೇಶಿ ಮಾದರಿಯನ್ನು ಚಂಪೂ ಸಾಹಿತ್ಯ, ವಚನ ಸಾಹಿತ್ಯ, ಮಧ್ಯಕಾಲೀನ ಸಾಹಿತ್ಯ ಸಂದರ್ಭ ಹಾಗೂ ದಾಸ ಸಾಹಿತ್ಯದ ಅಭಿವ್ಯಕ್ತಿಯ ಪರಿಸರದಲ್ಲಿ ಗುರುತಿಸುತ್ತದೆ. ಸ್ಥಳೀಯತೆ ಎನ್ನುವುದು ಸಾಹಿತ್ಯ ಪರಿಸರದ ಬಿಕ್ಕಟ್ಟುಗಳಲ್ಲಿ, ಪರಂಪರೆಯ ಮಾದರಿಯ ದಾಟುವಿಕೆ ಮತ್ತು ಹೊಸ ಶೋಧನೆಗಳಲ್ಲಿ ಜನ್ಮ ಪಡೆಯುವ ನೆಲಮುಖಿಯಾದ ತಾತ್ವಿಕತೆ ಸ್ಥಳೀಯತೆ ಎಂಬುವುದು ಸಾಹಿತ್ಯ ಕೃತಿಯ ಉದಾಹರಣೆಯ ಮೂಲಕ ನಿರೂಪಿಸುತ್ತದೆ.

'ವಸಾಹತುಶಾಹಿ ಮತ್ತು ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯದಲ್ಲಿ ದೇಶಿ' ಎಂದು ಚರ್ಚಿಸುವ ಸಂದರ್ಭದಲ್ಲಿ ಯರವಿನ ತೆಲಿಮಠ ಅವರು ವಸಾಹತುಶಾಹಿ ಸಂಸ್ಕೃತಿ, ವಸಾಹತು ಸಂಸ್ಕೃತಿ ಮತ್ತು ಕನ್ನಡ ಸಾಹಿತ್ಯ ಪರಂಪರೆಯನ್ನು ಮುಖಾಮುಖಿ ಮಾಡುವ ಮೂಲಕ ಒಂದು ಸಮುದಾಯದ ಜೀವನ ಮೀಮಾಂಸೆ ಮತ್ತು ಸ್ಥಳೀಯ ಅಭಿವ್ಯಕ್ತಿಯ ನೆಲೆಗಳು ಸಾಹಿತ್ಯದ ಭೂಮಿಕೆಯಾಗುವ ಸಂದರ್ಭವನ್ನು ಕಾರಂತ, ಕುವೆಂಪು, ಮಾಸ್ತಿ, ಲಂಕೇಶ, ಸಿದ್ಧಲಿಂಗಯ್ಯ ಹಾಗೂ ಚಂಪಾ ಇತ್ಯಾದಿ ಲೇಖಕರ ಕೃತಿಯ ಅಭಿವ್ಯಕ್ತಿಯ ಬಿಂದುಗಳಿಂದ ಸ್ಥಳೀಯತೆಗೆ ರೂಪವನ್ನು ಒದಗಿಸಲು ಪ್ರಯತ್ನಿಸಿದ್ದಾರೆ. ಒಟ್ಟಿನಲ್ಲಿ ದೇಸೀಯತೆ ಮತ್ತು ದೇಶೀಯ ಕೃತಿ ಭಾರತೀಯ ಸಂದರ್ಭದಲ್ಲಿ ಸ್ಥಳೀಯತೆ ಎಂಬ ಪರಿಕಲ್ಪನೆಯು ಹೇಗೆ ಉದಯವಾಯಿತು ಮತ್ತು ಅದು ಪಡೆದುಕೊಂಡ ಬಹು ಆಯಾಮವನ್ನು ವಿಮರ್ಶೆಯ ನೆಲೆಯು ಚರ್ಚಿಸಿದೆ.

ಪ್ರೊ. ಹಿ.ಚಿ. ಬೋರಲಿಂಗಯ್ಯ ಅವರ 'ದೇಶೀ ಕನ್ನಡ ಪರಂಪರೆ' ಎಂಬ ಕೃತಿಯು ಜಾನಪದ ಲೋಕದ ತಾತ್ವಿಕತೆಯ ನೆಲೆಯಿಂದ ಸ್ಥಳೀಯತೆಯ ಅಭಿವ್ಯಕ್ತಿಯನ್ನು ಗುರುತಿಸುತ್ತದೆ. ದೇಶೀ ಎಂದರೇನು? ಮತ್ತು ಅದರ ಸ್ವರೂಪದ ಬಗೆಯನ್ನು ಚರ್ಚಿಸುವಾಗ ಹಿ.ಚಿ. ಬೋರಲಿಂಗಯ್ಯ ಅವರ ಪ್ರಾಚೀನ ಸಾಹಿತ್ಯದ ದೇಸೀ ಮಾರ್ಗದ ಕಲ್ಪನೆ, ವೈದಿಕ ಪರಂಪರೆಯ ನೆಲೆ ಹಾಗೂ ವಸಾಹತುಶಾಹಿ ನೆಲೆಯಲ್ಲಿ ರೂಪುಗೊಂಡ ಸ್ಥಳೀಯ ಬದುಕಿನ ಪರಂಪರೆಯನ್ನು ಶೋಧಿಸುವ ಮೂಲಕ ಸ್ಥಳೀಯತೆಯನ್ನು ವಿವರಿಸಿದ್ದಾರೆ. ಸ್ಥಳೀಯತೆ ಎನ್ನುವುದನ್ನು ಭಾಷಾ ಸಮುದಾಯವೊಂದರ ಅಭಿವ್ಯಕ್ತಿ ಎಂದು ಗುರುತಿಸುವ ಇವರು ಸ್ಥಳೀಯತೆಯನ್ನು ಹೀಗೆ ವ್ಯಾಖ್ಯಾನಿಸಿಸುತ್ತಾರೆ, 'ಸಂಸ್ಕೃತೊ ಸಾಹಿತ್ಯ ಪರಿಕಲ್ಪನೆಯ

ಪ್ರಕಾರ ಪ್ರತಿಯೊಂದು ಸಂಸ್ಕೃತಿಗೂ ತನ್ನದೇ ಆದ ಕೆಲವು ಲಕ್ಷಣಗಳು, ಚರ್ಯೆಗಳು ಇರುತ್ತವೆ. ಈ ಲಕ್ಷಣಗಳು ಆ ಸಂಸ್ಕೃತಿಯ ಒಡಲಾಳದಲ್ಲಿರುವ ಸತ್ವಶೀಲತೆಯೊಂದರ ದ್ಯೋತಕಗಳಾಗಿರುತ್ತವೆ. ಈ ಸತ್ವಶೀಲತೆ ಕೆಲವು ನಿರ್ದಿಷ್ಟವಾದ ಕಾಲಮಾನದಲ್ಲಿ ಪ್ರಕಟವಾಗಿ ಬಿಡುವಂತಹದಲ್ಲ, ಚರಿತ್ರೆಯು ತರಬಹುದಾದ ಎಲ್ಲಾ ಬೆಳವಣಿಗೆ ಮತ್ತು ಬದಲಾವಣೆಯ ಮಧ್ಯೆ ನಿರಂತರವಾಗಿ ಉಳಿದುಕೊಂಡು ಬರುವಂಥ ಸತ್ವಶೀಲತೆಯ ನೆಲೆಯೇ ಸ್ಥಳೀಯತೆ' ಎಂದು.

ಈ ಕೃತಿಯು ಸ್ಥಳೀಯತೆಯನ್ನು ಜಾನಪದ ಲೋಕದ ಮೂಲಕ ಪ್ರವೇಶ ಮಾಡುವುದರಿಂದ ಒಂದು ಪ್ರಾದೇಶಿಕ ಸಂಸ್ಕೃತಿಯೊಳಗೆ ಶಿಷ್ಟ ಪರಂಪರೆಯ ವಿರುದ್ಧ ಜಾನಪದ ಸಂಸ್ಕೃತಿಯ ಒಳಸುಳಿಯನ್ನು ಸಮರ್ಥಿಸುವ ಧೋರಣೆಯೇ ಸ್ಥಳೀಯತೆಯ ಉಗಮಕ್ಕೆ ಕಾರಣವೆನ್ನುವ ನಿಲುವನ್ನು ವಚನ ಸಾಹಿತ್ಯ, ಅನುಭಾವಿ ಸಾಹಿತ್ಯ ಹಾಗೂ ಜಾನಪದ ಮಹಾಕಾವ್ಯದ ಲೋಕ ದೃಷ್ಟಿಯಲ್ಲಿ ನಿರೂಪಿಸುತ್ತಾರೆ.

'ಅನಕ್ಷರಸ್ಥರಾದರೂ ನಮ್ಮ ಅನುಭವ ಹಾಗೂ ನೆನಪಿನ ಶಕ್ತಿಯಲ್ಲಿ ಲೋಕಾನುಭವದ ಕಾವ್ಯ ಕಟ್ಟಿದ ಹಳ್ಳಿಗರಿಗೆ ತಮ್ಮ ಮೌಖಿಕ ಶಕ್ತಿಯೇ ದೇಶಿ'ಯಾಗಿ ಅಸ್ಮಿತೆಯನ್ನು ಗುರುತಿಸಿತು ಎಂದು ಚರ್ಚಿಸುವ ಈ ಕೃತಿಯು ಸ್ಥಳೀಯವನ್ನು ಕನ್ನಡ ಪರಂಪರೆಯ ಒಡಲಿನಿಂದ ಮೌಖಿಕ ಪರಿಸರದಿಂದ ತಾತ್ವೀಕರೀಸುವ ಮೂಲಕ ಸ್ಥಳೀಯತೆಯ ಸ್ವರೂಪಕ್ಕೆ ನಿರ್ದಿಷ್ಟತೆಯನ್ನು ಒದಗಿಸುತ್ತದೆ.

ಕೆ. ಶಿವರಾಮ ಐತಾಳ ಅವರ 'ದಕ್ಷಿಣ ಕನ್ನಡದ ಜನಪದ ಸಾಹಿತ್ಯ' ಎಂಬ ಕೃತಿಯಲ್ಲಿ "ಜನಪದ ಸಾಹಿತ್ಯದ ಸ್ವರೂಪ" ಎಂಬ ಅಧ್ಯಾಯದಲ್ಲಿ ಮಾರ್ಗ-ದೇಶಿ ಸಮಸ್ಯೆ ಎಂದು ಚರ್ಚಿಸುವಾಗ ಜಾನಪದ ಸಾಹಿತ್ಯವನ್ನೆ ಸ್ಥಳೀಯತೆ ಎಂದು ಬಹು ವ್ಯಾಪ್ತಿಯ ನೆಲೆಯಲ್ಲಿ ನಿರೂಪಿಸುತ್ತಾರೆ. ಪ್ರಾಚೀನ ಸಂಸ್ಕೃತಿ ಪ್ರಧಾನವಾದ ಸಾಹಿತ್ಯ ಸಂದರ್ಭದಲ್ಲಿ ಶಿಷ್ಟವಾದ ಸಾಹಿತ್ಯ ಮಾದರಿಯನ್ನು ಗೌರವಯುತವಾಗಿ ಕಾಣುವ ಮೂಲಕ ಅದಕ್ಕೊಂದು ಕಾವ್ಯ ಮೀಮಾಂಸೆಯನ್ನು ರೂಪಿಸಿ ಜಾನಪದ ಲೋಕವನ್ನು ಕೀಳಾಗಿ ಕಂಡರಲ್ಲದೆ ಜಾನಪದವನ್ನು ಸಾಹಿತ್ಯವಲ್ಲವೆಂಬ ಧೋರಣೆಯನ್ನು ಹುಟ್ಟು ಹಾಕಿದ ಸಂದರ್ಭದಲ್ಲಿ ಹಾಡುಗಬ್ಬವಾಗಿ ಜನರ ಮೀಮಾಂಸೆಯ ನಾಡಿ ಮಿಡಿತವನ್ನು ಗುರುತಿಸಿ ಸ್ಥಳೀಯತೆಯನ್ನು ಕಟ್ಟುವ ಕಡೆಗೆ ಈ ಕೃತಿ ಮುಖ ಮಾಡುತ್ತದೆ. ದೇಶಿ ಎಂದರೆ ಸ್ಥಳೀಯ ಅಥವಾ ಇಹಕ್ಕೆ ಸಂಬಂಧಿಸಿದ್ದು, ಅಡ್ಡದಾರಿ, ಲೋಕಾನುರಂಜಕ, ದೇಶ ರೀತಿಗಳನ್ನುಳ್ಳದ್ದು ಲೌಕಿಕ, ಅಪವಿತ್ರವೆಂದೆಲ್ಲ ಕರೆಯುವುದೆಲ್ಲ ಸ್ಥಳೀಯತೆ ಎಂದು

ಕೆ. ಶಿವರಾಮ ಐತಾಳ ನಿರೂಪಿಸುತ್ತಾರೆ.

ಜಾನಪದ ಮಾದರಿಯಿಂದಲೇ ಸ್ಥಳೀಯತೆಯನ್ನು ನಿರೂಪಿಸುವ ಕೆ. ಶಿವರಾಮ ಐತಾಳರು 'ಕನ್ನಡ ಸಾಹಿತ್ಯದಲ್ಲಿ ಕಾಲ-ಕಾಲಕ್ಕೆ ಕಾಣಬಹುದಾದ ರೂಪ ವೈವಿಧ್ಯದ ಭಾರತದ ಯಾವುದೇ ಭಾಷಾ ಸಾಹಿತ್ಯದಲ್ಲೂ ಕಾಣಲು ಸಾಧ್ಯವಿಲ್ಲ' ಎನ್ನುವುದು ಎಳ್ಳಷ್ಟು ಅಭಿಮಾನದ ಮಾತಲ್ಲ. ಯಾವುದೇ ಸಾಮಾನ್ಯವಾದ ಸಾಹಿತ್ಯ ಚರಿತ್ರೆಯ ತೇಲುನೋಟದಲ್ಲಿ ನೋಡಿದರೂ ಎದ್ದು ಕಾಣುವ ಅಂಶ ಇದು (ಫಾರ್ಮ್) ವನ್ನು ಇನ್ನೊಂದು ರೂಪ, ಬಹುವೇಳೆ ದೇಶಿಯಿಂದ ಪ್ರೇರಣೆಗೊಂಡ ರೂಪ ಎದುರಿಸಿ ದಾಳಿಯಿಟ್ಟು ಕ್ರಮೇಣ ಓಡಿಸುತ್ತದೆ. ಮಾಯವಾದ ಮೊದಲಿನ ರೂಪ ಮತ್ತೆ ಯಾವಾಗಲೋ ಮೈದೋರಿ, ಎದುರಿಸಲೆಳಸಿ, ನಿಲ್ಲಲಾರದೆ ಬಿದ್ದು ಹೋಗುತ್ತದೆ. ಈ ವಿಷಯ ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯ ರಚನೆಯಲ್ಲಿ ಈ ಸಂಸ್ಕೃತಿಯನ್ನು ರೂಪಗೊಳಿಸುವುದರಲ್ಲಿ ಜನಪದ ಬೀರಿದ ಪ್ರಭಾವ – ಪ್ರೇರಣೆ – ಪ್ರಚೋದನೆಗಳಿಂದ ದೇಸಿಯತೆ ಬಹುಮುಖತ್ವವನ್ನು ಹೊಂದಿತು ಎಂದು ಗುರುತಿಸುವುದನ್ನು ಈ ಕೃತಿಯಲ್ಲಿ ಗಮನಿಸಬಹುದು.

ಪ್ರೊ. ನಟರಾಜ ಹುಳಿಯಾರ್ ಅವರ ಆಫ್ರಿಕ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ' ಎಂಬ ಕೃತಿಯಲ್ಲಿ "ವಸಾಹತೀಕರಣಕ್ಕೆ ದೇಶೀ ಪರಂಪರೆಗಳ ಪ್ರತಿಕ್ರಿಯೆ : ಮುಖ್ಯ ಮಾದರಿಗಳು" ಎಂಬ ವಿಚಾರವನ್ನು ಚರ್ಚಿಸುವಾಗ ದೇಸೀಯತೆ ಎಂಬುದು ವಸಾಹತುಶಾಹಿ ಪರಿಸರದಲ್ಲಿ ಹೇಗೆ ಜನ್ಮ ತಾಳಿತು ಮತ್ತು ಸಾಂಸ್ಕೃತಿಕ ರೂಪವನ್ನು ಪಡೆದುಕೊಂಡಿತು ಎಂಬುದನ್ನು ನಿರೂಪಿಸುತ್ತಾರೆ. ನಟರಾಜ ಹುಳಿಯಾರ್ ಅವರು ಸ್ಥಳೀಯ ಲಕ್ಷಣವನ್ನು ವಸಾಹತುಶಾಹಿಯ ಭೂಮಿಕೆಯಲ್ಲಿ ಈ ಕೆಳಗಿನಂತೆ ಗುರುತಿಸುತ್ತಾರೆ "ವಸಾಹತು ವಾದಕ್ಕೆ ಭಾರತೀಯ ಪರಂಪರೆಗಳು ತೋರಿದ ಪ್ರತಿಕ್ರಿಯೆಗಳ ಬಹುಮುಖ್ಯ ಲಕ್ಷಣವೆಂದರೆ, ಆರಂಭದ ಘಟ್ಟದಲ್ಲಿ ವಸಾಹತುಕಾರ ಭಾರತವನ್ನು ಕುರಿತು ಎತ್ತಿದ ಪ್ರಶ್ನೆಗಳ ಆಧಾರದ ಮೇಲೆಯೇ ತಮ್ಮ ಸಂಸ್ಕೃತಿಯ ಸ್ವ-ವ್ಯಾಖ್ಯಾನವನ್ನು ಆರಂಬಿಸಿದ್ದು. ದೇಸೀಯತೆಯ ಭೂಮಿಕೆಯನ್ನು ನಿರ್ಮಾಣ ಮಾಡುತ್ತದೆ." ಕನ್ನಡದಲ್ಲಿ ಗುಲ್ವಾಡಿ ವೆಂಕಟರಾಯ, ಕುವೆಂಪು, ಕಾರಂತರಂಥ ಆರಂಭದ ಬರಹಗಾರರು ಸ್ಥಳೀಯ ಸತ್ವವನ್ನು ವಸಾಹತುಶಾಹಿತ್ವದ ಪರಿಸರದಲ್ಲಿ ಸ್ವ-ವಿಮರ್ಶೆ ಮಾಡುವ ಹಾಗೂ ಪ್ರಶ್ನಿಸುವ ಕಾರ್ಯವನ್ನು ತಮ್ಮ ಕೃತಿಗಳಲ್ಲಿ ಮಾಡಿದರು. ಇಂತಹ ಪ್ರಶ್ನೆಗಳೇ ದೇಸೀಯತೆಯ ಎಳೆಗಳಾಗಿ ಪ್ರತಿಕ್ರಿಯೆಗೊಂಡವು ಎಂದು ವಿಮರ್ಶಿಸುವ ನಟರಾಜ ಹುಳಿಯಾರ್ ಅವರು ವಸಾಹತುಶಾಹಿಯ ಮೌಲ್ಯಗಳನ್ನು ಭೂತ-ವರ್ತಮಾನದ ನೆಲೆಯಲ್ಲಿ ಸೂಕ್ಷ್ಮವಾಗಿ

ವಿಭಜಿಸುವ ಮೂಲಕ ಸ್ಥಳೀಯತೆಯ ಮೌಲ್ಯಗಳನ್ನು ಗ್ರಹಿಸಲು ಪ್ರಯತ್ನಿಸಿದ್ದಾರೆ. ಸ್ಥಳೀಯತೆಯನ್ನು ವಸಾಹತುಶಾಹಿಯ ವಿರೋಧಿ ಅಭಿವ್ಯಕ್ತಿಯಾಗಿ ಹಾಗೂ ಸ್ವದೇಸೀಯ ವಿಮರ್ಶೆಯ ಮಾದರಿಯಾಗಿಯು ಈ ಕೃತಿಯು ನಿರೂಪಿಸುತ್ತದೆ.

ಡಾ. ಅರವಿಂದ ಮಾಲಗತ್ತಿಯವರ 'ಪುರಾಣ ಜಾನಪದ ಮತ್ತು ದೇಶೀವಾದ' ಎಂಬ ಕೃತಿಯು ಸ್ಥಳೀಯತೆಯ ಸ್ವರೂಪ ಮತ್ತು ಅಭಿವ್ಯಕ್ತಿಯ ನೆಲೆಗಳನ್ನು 'ಜಾನಪದ ದೇಶಿ' ಎಂಬ ಪರಿಕಲ್ಪನೆಯ ಮೂಲಕ ಚರ್ಚಿಸುತ್ತಾರೆ. 'ದೇಶಿ ಎಂಬ ಪದ ಸಾಹಿತ್ಯ ಮತ್ತು ಸಾಹಿತ್ಯೇತರ ಎರಡು ವಲಯಕ್ಕೆ ಸಂಬಂಧಪಡುವಂತಹುದು. ಇದರಲ್ಲಿ ಸಾಂಸ್ಕೃತಿಕ ಸಂದರ್ಭವೇ ಪ್ರಧಾನವಾಗುತ್ತದೆ' ಈ ಸಂಸ್ಕೃತಿಯೇ ಸ್ಥಳೀಯತೆಯ ಪ್ರತಿಬಿಂಬವಾಗಿದೆ ಎಂಬ ನೆಲೆಯನ್ನು ಗುರುತಿಸುತ್ತಾರೆ. ಪಾಶ್ಚಾತ್ಯ ಚಿಂತನ ಕ್ರಮವು ಭಾರತೀಯ ಜಾನಪದ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಿದ ನೆಲೆ ನಮ್ಮದಲ್ಲ. ಹಾಗಾಗಿ ನಮ್ಮ ಏಕಕಾಲದ ಸಾಹಿತ್ಯ, ಸಮಾಜ, ಸಂಸ್ಕೃತಿ, ರಾಜಕೀಯ, ಧರ್ಮ, ಅರ್ಥ, ಭಾಷೆ ಎಲ್ಲವನ್ನು ದೇಸೀಯ ನೆಲೆಯಲ್ಲಿ ಸುಟ್ಟು, ಸೋಸಿ, ಹಿಡಿದು–ಹೊಡೆದು ಬಗ್ಗಿಸಿ ಆಕೃತಿಗೆ ಒಗ್ಗಿಸಿಕೊಂಡಾಗ ನಿಜವಾದ ಸತ್ವ ತೆರೆದುಕೊಳ್ಳುತ್ತದೆ ಎಂಬ ಅರವಿಂದ ಮಾಲಗಿತ್ತಿಯವರ ಮಾತು, ಜಾನಪದದ ಜೀವನಾಡಿಯನ್ನು ಹಿಡಿಯಲು ದೇಸೀಯತೆ ಪ್ರಧಾನವಾದ ಮತ್ತು ಸೂಕ್ತವಾದ ಮಾದರಿ ಎನ್ನುವುದನ್ನು ಧ್ವನಿಸುತ್ತದೆ.

ಇವರ ಪ್ರಕಾರ ಸ್ಥಳೀಯತೆ ಎಂದರೆ, 'ಒಂದು ಜನಾಂಗದ ಹಾಗೂ ನೆಲೆನಿಂತ ಮಣ್ಣಿನ ವಾಸನೆಯಿಂದ ಹೊರಬಂದ ಸೂತ್ರಬದ್ಧವಾದ ಎಲ್ಲಾ ಮೊತ್ತವನ್ನು ದೇಸೀಯತೆ ಎಂದು ಕರೆದಿದ್ದಾರೆ. ಮಾನವನ ಮೂಲ ಅಭಿವ್ಯಕ್ತಿಯ ರೂಪ ಜಾನಪದ, ಈ ಜಾನಪದ ಉಳಿಸಿಕೊಂಡ ಸತ್ವವೇ ಸ್ಥಳೀಯತೆಯ ಮೀಮಾಂಸೆ, ಭಾರತದಲ್ಲಿ ಸ್ಥಳೀಯತೆ ಎನ್ನುವುದು ಜೀವ ಪಡೆದದ್ದು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಎಂಬುವುದನ್ನು ಹೇಳುವ ಜೊತೆಗೆ ಎರಡು ಹಂತದ ದೇಸೀಯ ನೆಲೆಗಳನ್ನು ಅಭಿವ್ಯಕ್ತಿಸುತ್ತಾರೆ: ೧. **ಉದಾರತಾ ಸಮಾಜವಾದಿ ನಿಲುವು. ೨. ಸಮಾನತಾ ಸಮಾಜವಾದಿ ನಿಲುವು.**

ಸ್ಥಳೀಯತೆಯ ಸ್ವರೂಪವನ್ನು ಚರ್ಚಿಸುವಾಗ ನವೋದಯದ ದೇಸೀಯತೆ, ಸ್ವದೇಶಿ ಅಥವಾ ರಾಷ್ಟ್ರೀಯತೆ ಎನ್ನುವುದು ಅಥವಾ ದೇಸೀಯತೆ ಎನ್ನುವುದು ವ್ಯಾಮೋಹ, ಭಕ್ತಿ, ಆವೇಶ, ಅನನ್ಯತೆಯೆಡೆಗೆ ಮುಖ ಮಾಡಿ ನಿಲ್ಲುವ ಸ್ವರೂಪವಾಗಿದೆ. ದೇಸೀವಾದ ಈ ಕಟ್ಟೆಯನ್ನು ಒಡೆದು ಹೊರಬರುವಂತಹದ್ದು ಸಂವಾದಿಸುವಂತಹದು. ತಪ್ಪು–ಒಪ್ಪುಗಳೆರಡನ್ನು ತನ್ನದೆಂದು ಸ್ವೀಕರಿಸಿ ಹೆರವರ ತಟ್ಟೆಯನ್ನು ಆಕ್ರಮಿಸದೆ ತನ್ನ ತಟ್ಟೆಯನ್ನು

ಇತರರಿಂದ ಆಕ್ರಮಿಸದಂತೆ ಎಚ್ಚರವಹಿಸಿ ಅಭಿವೃದ್ಧಿಯ ಪಥವನ್ನು ಕಾಣುವ 'ಅಭಿವ್ಯಕ್ತಿಯ ಮಾಧ್ಯಮವೇ ಸ್ಥಳೀಯತೆ' ಎಂಬ ಸ್ವರೂಪವನ್ನು ಈ ಕೃತಿಯು ಗುರುತಿಸುತ್ತದೆ. ಒಟ್ಟಿನಲ್ಲಿ ಜಾನಪದ ಲೋಕದ ಪ್ರತಿನಿಧಿಯಂತೆ ದೇಸೀಯತೆಯನ್ನು ಶೋಧಿಸುವ ಮಾದರಿಯು ಕೃತಿಯ ತಾತ್ವಿಕತೆಯಾಗಿ ಅಭಿವ್ಯಕ್ತವಾಗುತ್ತದೆ.

ರಾಜೇಂದ್ರ ಚೆನ್ನಿ ಅವರು 'ದೇಶೀವಾದ–ಕೆಲವು ಮೂಲಭೂತ ಪ್ರಶ್ನೆಗಳು' ಎಂಬ ಲೇಖನದಲ್ಲಿ ಸ್ಥಳೀಯತೆ/ದೇಸೀಯತೆಯನ್ನು ಸ್ವಾತಂತ್ರ್ಯ ಪರಿಕಲ್ಪನೆಯಾಗಿ ನೋಡುವ ಬಗ್ಗೆ ಗುರುತಿಸಬಹುದು. ದೇಸೀಯತೆ ಎಂಬುದನ್ನು ಕನ್ನಡ ಸಾಹಿತ್ಯ, ವಸಾಹತುಶಾಹಿ ಸಂದರ್ಭ ಹಾಗೂ ಸಾಂಸ್ಕೃತಿಕ ಲೋಕದ ನೆಲೆಯಲ್ಲಿ ಶೋಧಿಸುವ ಕಡೆಗೆ ರಾಜೇಂದ್ರ ಚೆನ್ನಿ ವಿಮರ್ಶಿಸುತ್ತಾರೆ. ದೇಸೀಯತೆ/ಸ್ಥಳೀಯತೆ ಎಂದರೆ 'ಸಾಹಿತ್ಯಕ್ಕಿರುವ ತನ್ನದೇ ಆದ ಸ್ವಾಯತ್ತತೆಯನ್ನು ಗುಣಾತ್ಮಕವೆಂದು ಒಪ್ಪಿಕೊಳ್ಳುವ ಧೋರಣೆ ಅಥವಾ ಸಿದ್ಧಾಂತವೆಂದು ಗುರುತಿಸುತ್ತಾರೆ. ಲೇಖನವು ಸ್ಥಳೀಯತೆಯನ್ನು ಭಾಷಾ ಸಮುದಾಯ ಭಾಗವಾಗಿ, ಪ್ರಾದೇಶಿಕ ಸಂಸ್ಕೃತಿಯ ಭಾಗವಾಗಿ ಗ್ರಹಿಸುತ್ತದೆ ಮತ್ತು ಅನ್ಯ ಸಂಸ್ಕೃತಿಯ ಆಕ್ರಮಣದ ಸಂದರ್ಭದಲ್ಲಿ ಜನ್ಮ ಪಡೆಯುವ ನಮ್ಮ ಪರಂಪರೆಯ ಗುಣಾತ್ಮಕ ಬಿಂಬಗಳೇ ಸ್ಥಳೀಯ ಭೂಮಿಯನ್ನು ಒದಗಿಸುತ್ತದೆ ಎಂಬ ನಿರ್ಧಾರಕ್ಕೆ ರಾಜೇಂದ್ರ ಚೆನ್ನಿ ಬರುತ್ತಾರೆ.

'ದೇಶೀ ವಾದವೆಂದರೆ ಅನನ್ಯವಾದ ಮತ್ತು ನಿರಂತರವಾದ ಸೃಷ್ಟಿಶೀಲತೆಯನ್ನು ಹುಡುಕಿ ಪೊರೆಯಬೇಕೆನ್ನುವ ನಿಲುವು. ನಿರಂತರವಾಗಿ ಹರಿದು ಬರುವ ಈ ಸತ್ವಶೀಲತೆಯ ಒಂದು ಬಹುಮುಖ್ಯ ಅಭಿವ್ಯಕ್ತಿಯೆಂದರೆ ಆಯಾ ಸಂಸ್ಕೃತಿಯ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಪರಂಪರೆಯಾಗಿದೆ' ಎಂದು ಗುರುತಿಸುವ ಜೊತೆಗೆ ಸ್ಥಳೀಯ ವಿಶಿಷ್ಟ ಲಕ್ಷಣಗಳನ್ನು ಈ ಕೆಳಗಿನಂತೆ ಗುರುತಿಸುತ್ತಾರೆ.

೧. ದೇಶೀವಾದ ಪರಿಕಲ್ಪನೆಯು ಯಾವಾಗಲೂ ದ್ವಂದ್ವಾತ್ಮಕವಾಗಿರುತ್ತದೆ.

೨. ಅನ್ಯವೆಂದು ಹೇಳುವ ರಚನೆಯನ್ನು ಗುರುತಿಸುತ್ತದೆ.

೩. ನಿರಂತರವಾದ ಮತ್ತು ಸೃಜನಶೀಲವಾದ ಪ್ರಕ್ರಿಯೆ ಆಗಿದೆ.

೪. ಸಂಸ್ಕೃತಿ ಮತ್ತು ಸಾಹಿತ್ಯ ಸಂದರ್ಭದಲ್ಲಿ ಕೆಲವು ಪರಿಕರಗಳು ಮಾತ್ರ ಸ್ವೀಕೃತಗೊಂಡಿರುತ್ತದೆ.

ಇವುಗಳ ಜೊತೆಗೆ ಸ್ಥಳೀಯತೆಯ ಉಗಮದ ನೆಲೆಯನ್ನು ವಸಾಹತುಶಾಹಿ ಸಂದರ್ಭದಲ್ಲಿ ವಿಮರ್ಶಿಸುತ್ತಾರೆ. ಸ್ಥಳೀಯತೆ ಎನ್ನುವುದು ಪ್ರಧಾನ ಸಂಸ್ಕೃತಿಯ ಪ್ರತಿಯಾಗಿ ತನ್ನ ಅನನ್ಯತೆಯನ್ನು ಮಾತ್ರ ಸಮರ್ಥಿಸದೆ ಅನ್ಯ ಸಂಸ್ಕೃತಿಯ ಸ್ವೀಕರಣದ ಬಗೆಯೊಂದನ್ನು

ಹೊಂದಿದೆ ಎಂಬ ನಿಲುವನ್ನು ವಿಜ್ಞಾನ ಮತ್ತು ಸಾಹಿತ್ಯದ ಪರಿಸರದಲ್ಲಿ ಚರ್ಚಿಸುತ್ತಾರೆ. ಸ್ಥಳೀಯತೆಯನ್ನು ವಸಾಹತುಶಾಹಿ ಸಂದರ್ಭದಲ್ಲಿ ಗ್ರಹಿಸಲು ಹೆಚ್ಚು ಪ್ರಾಧಾನ್ಯತೆಯನ್ನು ನೀಡಿದರು. ಪಂಪನ ಚಂಪೂ ಕಾವ್ಯ ಮಾದರಿಯು ಮಾರ್ಗ ದೇಸೀಯ ಚರ್ಚೆಯನ್ನು ಲೇಖನ ಒಳಗೊಳ್ಳುತ್ತದೆ.

ಚಂದ್ರಶೇಖರ ಟಿ.ಆರ್. ಅವರು 'ದೇಸೀ ಪರಂಪರೆ ಮತ್ತು ದಲಿತ ಸಾಹಿತ್ಯ' ಎಂಬ ಲೇಖನದಲ್ಲಿ 'ದಲಿತ' ಸಾಹಿತ್ಯ ಹುಟ್ಟು, ಬೆಳವಣಿಗೆ, ಪ್ರಭಾವ-ಪ್ರೇರಣೆ ಮತ್ತು ಒಟ್ಟು ಸಾಹಿತ್ಯ ಮೀಮಾಂಸೆಯನ್ನು ಕೇಂದ್ರೀಕರಿಸಿರುವ ಈ ಲೇಖನವು ದೇಸೀಯತೆಯನ್ನು ಅತ್ಯಂತ ಸೂಕ್ಷ್ಮವಾಗಿ ಬೆನ್ನೆಲುಬಾಗಿ ರೂಪಿಸಿಕೊಂಡಿದೆ. ವೈದಿಕ ಪರಂಪರೆಯ ವರ್ಣ ವ್ಯವಸ್ಥೆಯಿಂದ ದಲಿತವೆಂಬ ಸಮುದಾಯವು ಅತ್ಯಂತ ಕೀಳುವೆಂಬ ಸಾಮಾಜಿಕ ಸ್ಥಾನವನ್ನು ಹಾಗೂ ತನ್ನ ಸಂವೇದನೆಯ ಅಭಿವ್ಯಕ್ತಿಯನ್ನು ಕಳೆದುಕೊಂಡು ದುಡಿಯುವ ವರ್ಗವಾಗಿ ಹಿಂಸೆಗೆ ಒಳಪಡುತ್ತಿದ್ದ ಈ ಸಮುದಾಯವು ವೈದಿಕ ಹಾಗೂ ಮೇಲುವರ್ಗ ಸಂಸ್ಕೃತಿ, ಭಾಷೆ, ದೈವಿಕ ಆಲೋಚನೆಗಳನ್ನು ತಮ್ಮದೆಂದು ಒಪ್ಪಿಕೊಳ್ಳುವಂತೆ ಒತ್ತಡವನ್ನು ರೂಪಿಸಲಾಗಿತ್ತು. ದಲಿತ ಪ್ರಜ್ಞೆಯು ಜಾಗೃತಗೊಂಡ ಮೇಲೆ ವೈದಿಕ ಸಂಸ್ಕೃತಿ ಮತ್ತು ಪರಂಪರೆಯ ಪ್ರಭುತ್ವವನ್ನು ದಾಟುವ ಮತ್ತು ಹೊಸಬಗೆ ದಲಿತ ಚರಿತ್ರೆಯನ್ನು ತನ್ನ ಸಂವೇದನೆಯ ನೆಲೆಯಲ್ಲಿ ಕಟ್ಟುವ ಕಾರ್ಯ ಆರಂಭವಾಗಿ ಮೇಲ್ವರ್ಗದ ಪರಂಪರೆ ಮತ್ತು ಸಂಸ್ಕೃತಿಯನ್ನು ವಿರೋಧಿಸುವ ಮೂಲಕ ತನ್ನ ಅಸ್ಮಿತೆಯನ್ನು ಕಟ್ಟಿಕೊಳ್ಳುವ ಕಡೆಗೆ ತನ್ನ ಸ್ಥಳೀಯ ಬದುಕಿನ ಎಳೆಗಳನ್ನು ದುಡಿಸಿಕೊಳ್ಳುತ್ತದೆ. ಈ ಲೇಖನದಲ್ಲಿ ನೇರವಾಗಿ ದೇಸೀಯತೆ ಎಂಬುದನ್ನು ಚರ್ಚಿಸಿದ ಲೇಖಕರು ದಲಿತ ಮೀಮಾಂಸೆಯನ್ನು ದೇಸೀಯ ಭೂಮಿಕೆಯಲ್ಲಿ ಮಂಡಿಸುತ್ತಾರೆ. ಸ್ಥಳೀಯತೆ ಎನ್ನುವುದು ಎರಡು ಸಂಸ್ಕೃತಿಗಳ ಸಂಘರ್ಷ ಸಂಪರ್ಕದಿಂದ ಹುಟ್ಟಿಕೊಂಡಿದೆ ಮತ್ತು ಒಂದು ಸಮುದಾಯದ ನೆಲದ ಪರಂಪರೆಯ ಗುಣಾತ್ಮಕವಾದ ಸಂಕಲನ ಎಂಬುದನ್ನು ಮನಸ್ಸಿನಲ್ಲಿ ಇಟ್ಟು ಕೊಂಡರೇ ವೈದಿಕ ಸಂಸ್ಕೃತಿಯ ಪ್ರಭುತ್ವದ ನಡುವಿನ ಸಂಘರ್ಷದಿಂದ ದಲಿತ ಎನ್ನುವ ಪ್ರಜ್ಞೆಯು ತನ್ನ ಸಮುದಾಯದ ಜೀವನ ವಿನ್ಯಾಸ, ಪರಂಪರೆ, ನಂಬಿಕೆ, ದುಡಿಮೆ, ದೈವ, ಆಚಾರ-ಭಾಷೆಗಳೆಲ್ಲವು ದಲಿತ ಎಂಬ ನೆಲೆಯಲ್ಲಿ ಪರಿಕಲ್ಪನೆಯಾಗಿ ರೂಪುಗೊಳ್ಳುತ್ತದೆ, ಇದನ್ನೇ ದೇಸೀ/ ಸ್ಥಳೀಯತೆ ಎಂದು ಗುರುತಿಸಬಹುದು.

ರಾಜಾರಾಂ ಹೆಗಡೆ ಅವರ ದೇಶೀಯ ಇತಿಹಾಸದ ಹುಡುಕಾಟ ಎಂಬ ಲೇಖನವು ಚಾರಿತ್ರಿಕ ನೆಲೆಯಲ್ಲಿ ಸ್ಥಳೀಯತೆಯ ಅಭಿವ್ಯಕ್ತಿಯ ಮಾದರಿಯನ್ನು ಗುರುತಿಸುತ್ತದೆ,

ಭಾರತೀಯ ಚರಿತ್ರೆಯನ್ನು ಪೌರತ್ಯರಿಂದ ಹಿಡಿದು ಭಾರತೀಯ ಇತಿಹಾಸಕಾರರು ಪಾಶ್ಚಾತ್ಯ ಮಾದರಿಯ ರಾಜಕೇಂದ್ರಿತ ನೆಲೆಯ ಚರಿತ್ರೆಯನ್ನೆ ರೂಪಿಸಿಕೊಂಡು ಬಂದಿದ್ದಾರೆ. ಈ ಚಾರಿತ್ರಿಕ ರಚನಾ ಮಾದರಿಗೆ ಪ್ರತಿಯಾಗಿ ದೇಸೀಯ ನೆಲೆಯ ಮೂಲಕ ಚರಿತ್ರೆಯನ್ನು ಕಟ್ಟಬೇಕಾದ ಅಗತ್ಯ, ಅದರ ಸ್ವರೂಪ ಮತ್ತು ತಾತ್ವಿಕತೆಯನ್ನು ಲೇಖನವು ಒಳಗೊಂಡಿದೆ. ದೇಶದ ಚರಿತ್ರೆಯನ್ನು ನಿರೂಪಿಸುವಾಗ ರಾಷ್ಟ್ರದ ಸಾಂಸ್ಕೃತಿಕ ಅನನ್ಯತೆಯನ್ನು ಕಟ್ಟಿಕೊಡುವ ಆಧುನಿಕ ಇತಿಹಾಸಕಾರರು ದೇಸೀಯತೆಯನ್ನು ಉದ್ದೇಶಿಸುತ್ತಾರೆ. ಆದರೆ ಈ ಉದ್ದೇಶವು ಆಧುನಿಕ ಪೂರ್ವಕಾಲದಲ್ಲಿ ಇರಲಿಲ್ಲ ಎಂಬ ಚಾರಿತ್ರಿಕ ಪ್ರಜ್ಞೆಯನ್ನು ಗುರುತಿಸುವ ಲೇಖನವು ಸ್ಥಳೀಯತೆ ಚರಿತ್ರೆಯ ಕಡೆಗೆ ಬದಲಾಗುವ ಬಗೆಯನ್ನು ಸೂಕ್ಷ್ಮವಾಗಿ ನಿರೂಪಿಸುತ್ತದೆ, ಹಾಗೂ ಸ್ಥಳೀಯತೆ ಎಂದರೇನು ಎನ್ನುವುದನ್ನು ರಾಜಾರಾಂ ಹೆಗಡೆ ಅವರು 'ಒಂದು ಸಾಂಸ್ಕೃತಿಕ ರಾಜಕೀಯದ ಪ್ರಭುತ್ವದ ಗತಿಯನ್ನು ಅವಲಂಬಿಸಿ ಅವು ತಮ್ಮ ಅರ್ಥವನ್ನು ಹಾಗೂ ಸಮಸ್ಯೆಗಳ ಆಯಾಮವನ್ನು ಪ್ರಕಟಿಸುತ್ತದೆ. ಇದನ್ನೆಲ್ಲ ಒಳಗೊಂಡ ಕಟ್ಟೇ ದೇಸೀಯತೆ' ಎಂದು ಗುರುತಿಸುತ್ತಾರೆ.

ಚರಿತ್ರೆಯ ಬರವಣಿಗೆಯು ದೇಶೀಯ ನೆಲೆಯ ಅಭಿವ್ಯಕ್ತಿಯಾದಾಗ ಬದುಕಿನ ನಿಜವಾದ ಸತ್ವ ಹುಡುಕಲು ಸಾಧ್ಯ. ಒಂದು ವೇಳೆ ಅದನ್ನು ಕಳೆದುಕೊಂಡರೇ ನಮ್ಮ ಜೀವನ ಸಂಸ್ಕೃತಿ ಬಡವಾದಂತೆ ಎಂಬ ನಿಲುವನ್ನು ಈ ಲೇಖನ ಗುರುತಿಸುತ್ತದೆ 'ರಾಷ್ಟ್ರಕ್ಕೆ ಸೇರಿದ ಹಾಗೂ ಅದು ಕಳೆಯಬಾರದೆಂಬ ಹಂಬಲವು ಕಾಣುತ್ತದೆ. ಈ ರೀತಿಯ ಪೂರ್ವ ಮತ್ತು ಪಶ್ಚಿಮಗಳ ದ್ವಂದ್ವದಲ್ಲಿ ಹುಟ್ಟುವ ದೇಶೀಯ ಪ್ರಜ್ಞೆ ವಸಾಹತುಶಾಹಿಯು ನಿರ್ಮಿಸಿದ ಪ್ರಮುಖ್ಯತೆಯನ್ನು ಹೊಂದಿದೆ' ಎಂಬ ನಿಲುವನ್ನು ಲೇಖನ ಗುರುತಿಸುತ್ತದೆ.

ಡಾ. ಓ.ಎಲ್. ನಾಗಭೂಷಣ ಸ್ವಾಮಿಯವರ 'ದೇಸೀಯತೆಯ ಪ್ರಶ್ನೆ' ಎಂಬ ಲೇಖನವು ದೇಸೀಯತೆಯ ಹುಡುಕಾಟದ ಬಗ್ಗೆ, ಕನ್ನಡ ಸಾಹಿತ್ಯ, ಭಾಷೆ ಹಾಗೂ ಸಾಂಸ್ಕೃತಿಕ ಪರಿಸರವೂ ಸ್ಥಳೀಯತೆಯ ಸ್ವರೂಪವನ್ನು ಶೋಧಿಸುತ್ತದೆ, ಸ್ಥಳೀಯತೆಯ ಹುಟುಕಾಟವೆಂದರೆ ನಮ್ಮ ತನದ ಹುಡುಕಾಟದ ಒಂದು ಭಾಗವೇ ಆಗಿದೆ ಎಂದು ಗುರುತಿಸುವ ಲೇಖನವು, ದೇಸೀತನವನ್ನು ಆಧುನಿಕ ಬದುಕಿನ ವಿನ್ಯಾಸದೊಂದಿಗೆ ಹುಡುಕುವ ಮತ್ತು ಯಾವುದು ದೇಶಿ ಎಂಬ ಪ್ರಶ್ನೆಯನ್ನು ಎತ್ತುವ ಮೂಲಕ ಈಗ ನಿರೂಪಿತಗೊಂಡಿರುವ ದೇಸಿ ಎಂಬ ಪರಿಕಲ್ಪನೆಯ ಮರು ಅಧ್ಯಯನ ಮಾಡುವ ಮತ್ತು ಶುದ್ಧ ದೇಸಿಯನ್ನು ಹುಡುಕಿಕೊಳ್ಳುವ ಮಾದರಿಯನ್ನು ಚಿಂತಿಸುತ್ತದೆ. ಅಕ್ಷರವಂತ

ಜನರು ಸ್ಥಳೀಯತೆಯನ್ನು ಕನ್ನಡ ಸಾಹಿತ್ಯ, ವಿಮರ್ಶೆಯ ಅಭಿವ್ಯಕ್ತಿಯ ಮೂಲಕ ಅರ್ಥ ಮಾಡಿಕೊಳ್ಳುತ್ತಾರೆ ಹಾಗೂ ಸ್ಥಳೀಯ ರಚನೆಗಳನ್ನು ಕಟ್ಟಿಕೊಳ್ಳುತ್ತಾರೆ. ಆದರೆ ಅಕ್ಷರ ಜ್ಞಾನವಿಲ್ಲದ ಸಮುದಾಯದ ದೇಸೀಯತೆ ನಿಲುವುಗಳನ್ನು ಕಂಡು ಕೊಳ್ಳುವುದು ಅಗತ್ಯವೆಂಬುದನ್ನು ಲೇಖನವು ತಾತ್ವೀಕರಿಸುತ್ತದೆ.

ಸ್ಥಳೀಯತೆಯನ್ನು ಸಂಸ್ಕೃತಿಯ ಒಳಗೆ ಅಂದರೆ ಪರಸಂಸ್ಕೃತಿಯ ಸಂಪರ್ಕವಿಲ್ಲದ ಸಂದರ್ಭದ ಜೀವನ ವಿಧಾನ ನೆಲದ ಪರಂಪರೆ ಹಾಗೂ ಸಾಂಸ್ಕೃತಿಕ ವಿನ್ಯಾಸವನ್ನು ಶುದ್ಧ ದೇಸೀ ಎಂದು ಗ್ರಹಿಸಿದರೆ ಆನಂತರದ ಕಾಲದಲ್ಲಿನ ಸಾಂಸ್ಕೃತಿಕ ಸಂಘರ್ಷ ಸಂಕರ, ಸಂಪರ್ಕದ ನೆಲೆಯಲ್ಲಿ ಸ್ಥಳೀಯತೆಯನ್ನು ಅದರ ರಚನೆ, ಚರಿತ್ರೆ, ಪರಂಪರೆಯನ್ನು ಗುರುತಿಸುವ ಮೂಲಕ ಯಾವುದು ದೇಸಿ, ದೇಸಿ ಎಂದರೇನು? ಎಂಬ ಪ್ರಶ್ನೆಗಳನ್ನು ಕನ್ನಡ ಸಾಂಸ್ಕೃತಿಕ ಸಂದರ್ಭದಲ್ಲಿ ಮುಖಾಮುಖಿ ಮಾಡುವ ಅಗತ್ಯವಿದೆ ಎಂಬ ನಿಲುವನ್ನು ಹೇಳುವ ಲೇಖನವು 'ಸಾಹಿತ್ಯ ವಿಮರ್ಶೆ'. ಇದುವರೆಗೆ ಯಾವುದನ್ನು ಕನ್ನಡ ಪರಂಪರೆ ಎಂದು ಭಾವಿಸಲಾಗುತ್ತ ಬಂದಿದೆಯೋ ಅದನ್ನು ಮರುಪರಿಶೀಲಿಸಿ ದೇಸಿಯ ಬಗೆಯನ್ನು ಆವಿಷ್ಕರಿಸಿಕೊಳ್ಳಬೇಕಾಗಿದೆ ಎಂದು ಈ ಲೇಖನವು ಸ್ಥಳೀಯ ನೆಲೆಗಳನ್ನು ನಿರೂಪಿಸುವ ಮೂಲಕ ಅನೇಕ ಪ್ರಶ್ನೆಗಳನ್ನು ಸ್ಥಳೀಯತೆಯ ನೆಲೆಯಲ್ಲಿ ಎತ್ತುವ ಮೂಲಕ ಸ್ಥಳೀಯ ಲೋಕವನ್ನು ಗುರುತಿಸುತ್ತದೆ.

ರಾಜೇಂದ್ರ ಚೆನ್ನಿ ಅವರ 'ದೇಶೀಯವಾದ' ಎಂಬ ಕೃತಿಯು ಸ್ಥಳೀಯತೆಯ ನೆಲೆಗಳನ್ನು ದೇಶೀಯ ಎಂಬ ಪರಿಕಲ್ಪನೆಯಲ್ಲಿ ಚರ್ಚೆ ಮಾಡುತ್ತದೆ. ರಾಜೇಂದ್ರ ಚೆನ್ನಿಯವರು ದೇಸೀಯತೆಯ ವಸಾಹತುಶಾಹಿಯ ಪ್ರಜ್ಞೆ, ಪ್ರಭಾವ ಹಾಗೂ ಪ್ರೇರಣೆಯಿಂದ ಉದಯವಾದ ಬಗ್ಗೆ, ಅದರ ಸ್ವರೂಪ ಹಾಗೂ ದೇಸೀಯತೆ ಎಂದು ಯಾವುದನ್ನು ಗುರುತಿಸುತ್ತೇವೆ ಎಂಬ ಸಮಗ್ರವಾದ ದೇಶೀ ಪರಿಕಲ್ಪನೆಯನ್ನು ನಿರೂಪಿಸುತ್ತಾರೆ. 'ವಸಾಹತು ಸಂದರ್ಭದ ಪ್ರಭುತ್ವದ ಸಂಸ್ಕೃತಿಯು ಸ್ಥಳೀಯ ಸಂಸ್ಕೃತಿಯೊಂದಿಗೆ ಕೊಡುಕೊಳ್ಳುವಿಕೆ ನಡೆಸಿ, ನಂತರದಲ್ಲಿ ವಸಾಹತು ಸಂಸ್ಕೃತಿಯನ್ನು ಕೀಳೆಂದು ಭಾವಿಸಿ, ತನ್ನ ಅಧೀನಕ್ಕೆ ಒಳಪಡಿಸಿಕೊಂಡು ಪ್ರಭುತ್ವದ ಸಂಸ್ಕೃತಿಯೇ ಪ್ರಧಾನವೆಂಬ ಧೋರಣೆಯನ್ನು ತನ್ನ ಅಭಿವೃದ್ಧಿಯ ನೆಲೆ, ಆಧುನಿಕತೆ, ಕಾನೂನು, ಭಾಷೆ, ಶಿಕ್ಷಣ ಸಾಹಿತ್ಯದಲ್ಲಿ ಪ್ರತಿಪಾದಿಸಿದಾಗ ನಮ್ಮ ಸ್ಥಳೀಯ ಜನರಲ್ಲಿ ತನ್ನ ಭಾಷೆ, ದೇಶ, ಧರ್ಮ, ಜಾತಿ, ನಂಬಿಕೆ, ಪರಿಸರ ಇತ್ಯಾದಿಗಳ ಬಗ್ಗೆ ನಮ್ಮದೆಂಬ ಪ್ರಜ್ಞೆ ಮೂಡುತ್ತದೆ. ಅದೆ ದೇಸೀಯತೆ ಎಂದು ಗುರುತಿಸುವ ಮೂಲಕ 'ಪ್ರಧಾನ ಸಂಸ್ಕೃತಿಯ ಅಡಿಗೆ ಸಿಲುಕಿರುವ ಎಲ್ಲಾ ರೀತಿಯ ಸಾಂಸ್ಕೃತಿಕ ಪರಿಕರಗಳನ್ನು

ದೇಶಿ ಎಂದು ರಾಜೇಂದ್ರ ಚೆನ್ನಿ ನಿರೂಪಿಸುತ್ತಾರೆ. ಈ ಲೇಖನವು ಸ್ಥಳೀಯ ಮಾದರಿಯನ್ನು ನಮ್ಮ ನೆಲದ ಸತ್ವದೊಂದಿಗೆ ಅಭಿವ್ಯಕ್ತಿಸುತ್ತದೆ, ಇಂಗ್ಲಿಷ್ ಭಾಷೆಯ ಪ್ರತಿಯಾಗಿ ಕನ್ನಡವನ್ನು ದೇಸಿ ಎಂದೂ ಸಂಸ್ಕೃತ ಸಾಹಿತ್ಯ, ಭಾಷೆಗೆ ಮುಖಾಮುಖಿಯಾಗಿ ಕನ್ನಡ ಭಾಷೆ, ಸಾಹಿತ್ಯ ದೇಸಿ ಎಂದು ಬ್ರಾಹ್ಮಣರಿಗೆ ದಲಿತ ಸಮುದಾಯವು ದೇಸಿ ಎಂದು, ಭಾರತೀಯ ಸಂಸ್ಕೃತಿಗೆ ಬುಡಕಟ್ಟು ಸಂಸ್ಕೃತಿಯು ದೇಸಿ ಎಂಬ ನೆಲೆಯನ್ನು ಸಂಕೀರ್ಣ ಸಂವೇದನೆಯಲ್ಲಿ ಅಭಿವ್ಯಕ್ತಿಸುತ್ತದೆ.

ಈ ಕೃತಿಯು ಒಟ್ಟಿನಲ್ಲಿ ಸ್ಥಳೀಯತೆಯ ಪರಿಕಲ್ಪನೆಗೆ ಮೀಮಾಂಸೆಯನ್ನು ಒದಗಿಸುವ ಜೊತೆಗೆ ಸ್ಪಷ್ಟವಾದ ಒಂದು ಪರಿಕಲ್ಪನೆಯನ್ನು ಒದಗಿಸುತ್ತದೆ. ಈ ಹಿನ್ನೆಲೆಯಲ್ಲಿ ನನ್ನ ಮಹಾಪ್ರಬಂಧದಲ್ಲಿ ಹೆಚ್ಚು ಭಾಗದಲ್ಲಿ ಸೂಕ್ತವೆನಿಸಿದ ಚಿಂತನೆಯನ್ನು ಉಲ್ಲೇಖಿಸಿದ್ದೇನೆ.

ವಿಜಯ ಶಂಕರ ಅವರ 'ಕನ್ನಡ ಸಾಹಿತ್ಯದಲ್ಲಿ ದೇಸೀಯತೆ ಪ್ರಜ್ಞೆ' ಎಂಬ ಲೇಖನವು ಸ್ಥಳೀಯತೆಯ ಸ್ವರೂಪವನ್ನು ಹಾಗೂ ನೆಲೆಗಳನ್ನು ಪ್ರಾಚೀನ ಸಾಹಿತ್ಯದಿಂದ ಆಧುನಿಕ ಸಾಹಿತ್ಯದ ಅಭಿವ್ಯಕ್ತಿಯ ನೆಲೆಯಲ್ಲಿ ಗುರುತಿಸುತ್ತದೆ. ಮುಖ್ಯವಾಗಿ ರಾಜಕೀಯ ಮತ್ತು ಸಾಹಿತ್ಯಿಕ ಬಿಕ್ಕಟ್ಟನ್ನು ಹುಟ್ಟು ಹಾಕಿದ ಹೊಸ ಪ್ರಕಾರವೇ ದೇಸಿ ಎಂದು ಗುರುತಿಸುತ್ತಾರೆ. ಇವರ ಸಂಪೂರ್ಣ ದೇಶೀಯ ಚರ್ಚೆಯಲ್ಲಿ ಮಾರ್ಗ-ದೇಶಿ, ಲೌಖಿಕ ಅಲೌಖಿಕ, ದೇವರ ಭಾಷೆ, ಜನರ ಭಾಷೆ, ಶಿಷ್ಠ-ಜಾನಪದ ಎಂಬ ವಿಭಿನ್ನ ನೆಲೆಯಲ್ಲಿ ದೇಶಿಯ ಪ್ರಜ್ಞೆಯನ್ನು ಗುರುತಿಸುತ್ತಾರೆ.

ಡಾ. ಕೆ.ಸಿ. ಶಿವಾ ರೆಡ್ಡಿಯವರ 'ಹಾಡು-ಪಾಡು' ಎಂಬ ಪ್ರಕಟಿತ ಮಹಾಪ್ರಬಂಧದಲ್ಲಿ ವಸಾಹತುಶಾಹಿ ಮತ್ತು ನವೋದಯ ಸಾಹಿತ್ಯದ ಉಗಮ ಎಂಬ ಪರಿಕಲ್ಪನೆಯನ್ನು ಚರ್ಚಿಸುವಾಗ ಸ್ಥಳೀಯ ರೂಪವನ್ನು ಗುರುತಿಸುತ್ತಾರೆ. 'ವಸಾಹತುಶಾಹಿಯ ಆಲೋಚನಾ ಮಾದರಿಗಳೇ ಸ್ಥಳೀಯತೆಯನ್ನು ಹುಟ್ಟು ಹಾಕಿದವು' ಎಂಬ ನಿಲುವನ್ನು ಗುರುತಿಸುತ್ತ ಸ್ಥಳೀಯತೆ ಎಂದರೆ 'ವಸಾಹತುಶಾಹಿ ಆಡಳಿತದ ಪರಿಣಾಮದಿಂದ ಕಳೆದು ಹೋದ ಬದುಕಿನ ಲಯ ಅಥವಾ ಸಂಸ್ಕೃತಿಯ ಎಳೆಯನ್ನು ಮರುಸಂಘಟಿಸುವ ಆಲೋಚನೆಯೇ ಸ್ಥಳೀಯತೆ' ಎಂದು ವ್ಯಾಖ್ಯಾನಿಸುತ್ತಾರೆ. ಸ್ಥಳೀಯತೆ/ದೇಸೀಯತೆ ಎಂಬ ಪರಿಕಲ್ಪನೆಯ ಸ್ವರೂಪ ಹಾಗೂ ನೆಲೆಗಳನ್ನು ಶೋಧಿಸುವ ಮೂಲಕ ವಿಭಿನ್ನವಾದ ಚಿಂತನೆಯನ್ನು ವಿದ್ವಾಂಸರು ಮಂಡಿಸುತ್ತಾರೆ. ಸಾಮಾನ್ಯವಾಗಿ ಸ್ಥಳೀಯತೆ ಎನ್ನುವುದು 'ವಸಾಹತುಶಾಹಿಯ ಉಪ ಉತ್ಪನ್ನದಂತೆ ಎಲ್ಲಾ ಕೃತಿಗಳು ಗೋಚರಗೊಳ್ಳುತ್ತದೆ. ಸ್ಥಳೀಯತೆಯನ್ನು ಪರಿಕಲ್ಪನೆಯಾಗಿ ನಿರೂಪಿಸಲು ರಚಿತವಾಗಿರುವ ಕೃತಿಗಳಲ್ಲಿ ಸ್ಥಳೀಯತೆಯ ಸ್ವರೂಪವನ್ನು

ಹೇಳುವ ನೆಲೆ, ಅಭಿವ್ಯಕ್ತಿಯ ನೆಲೆಗಳನ್ನು ನಿರೂಪಿಸುವ ಬಗೆ, ಸ್ಥಳೀಯತೆಯ ಗ್ರಹಿಸುವ ಪರಿಸರ, ತಾತ್ವಿಕತೆಯ ನೆಲೆಗಳು ಲೇಖಕರಿಂದ ಲೇಖಕರಿಗೆ ವಿಭಿನ್ನತೆಗಳು ಕಂಡರು ಸಂಸ್ಕೃತಿ ಎನ್ನುವ ಮೂಲ ನೆಲೆಯು ಎಲ್ಲಾ ಲೇಖನದ ಭೂಮಿಕೆಯಂತೆ ನಿರೂಪಣೆಗೊಂಡಿದೆ.

ಈ ಮಹಾಪ್ರಬಂಧದಲ್ಲಿ ಸ್ಥಳೀಯ ಎಂದರೇನು? ಹಾಗೂ ಸ್ಥಳೀಯತೆಯ ಸ್ವರೂಪ, ನೆಲೆ, ರಚನೆ, ಭೂವಿಕ ಹಾಗೂ ಅಭಿವ್ಯಕ್ತಿಯ ನೆಲೆಯನ್ನು ಶೋಧಿಸುವಾಗ ಈ ಮೇಲಿನ ಚಿಂತಕರ ಚಿಂತನೆಯನ್ನು ಗಮನದಲ್ಲಿ ಇಟ್ಟುಕೊಂಡು ಸೂಕ್ತ ಮತ್ತು ಹತ್ತಿರವೆನಿಸಿದ್ದನ್ನು ಉಲ್ಲೇಖಿಸಿದ್ದೇನೆ. ಸ್ಥಳೀಯತೆ ಎಂಬ ಪರಕಲ್ಪನೆಯು ನಿರಂತರವಾದ ಸಾಂಸ್ಕೃತಿಕ ಸಂಪರ್ಕ, ಸಂಕರ, ಸಂಘರ್ಷದ ಅಭಿವ್ಯಕ್ತಿಯಾಗಿದ್ದು ನಮ್ಮ ಸಂಸ್ಕೃತಿ ಪರಸಂಸ್ಕೃತಿಯ ಪ್ರಭುತ್ವಕ್ಕೆ ಒಳಗಾಗಿ ತನ್ನ ಮೂಲ ನೆಲದ ಪರಂಪರೆಯ ಸತ್ವಗಳನ್ನು ಕಳೆದುಕೊಂಡು ತದನಂತರದಲ್ಲಿ ಜೀವ ಪಡೆದು ಮರುರೂಪಗೊಳ್ಳುವ ಜ್ಞಾನವಾಗಿದೆ. ಒಂದು ಸಮುದಾಯದ ಜನರ ಬದುಕಿನ ವಿನ್ಯಾಸ, ಭಾಷೆ, ಪರಂಪರೆ, ಧರ್ಮ, ಚರಿತ್ರೆ, ಮಾನವ ಸಂಬಂಧ, ಜಾತಿ ನೆಲದ ಸತ್ವವನ್ನು ಗುಣಾತ್ಮಕವೆಂದು ಹಾಗೂ ಋಣಾತ್ಮಕವೆಂದು ನಿರೂಪಿಸುವ, ತನ್ನ ಸಂಪರ್ಕಕ್ಕೆ ಒಳಗೊಂಡ ಇನ್ನೊಂದು ಸಂಸ್ಕೃತಿಯೊಂದಿಗೆ ನಡೆಯುವ ಸಂಘರ್ಷ, ಸಂಕರದ ನೆಲೆಯಿಂದ ಹುಟ್ಟಿಕೊಳ್ಳುವ ನಮ್ಮ ನೆಲದ ಜೀವಪರವಾದ ಸಂಕಲಿತ ಮೌಲ್ಯ ಸ್ಥಳೀಯವಾಗಿದೆ ಎಂದು ಗುರುತಿಸಿಕೊಂಡು ಮೊದಲ ತಲೆಮಾರಿನ ಕಥಾಸಾಹಿತ್ಯ ತಾತ್ವಿಕವಾಗಿ ಚರ್ಚೆಗೆ ಒಳಗಾಗಿಸುವುದೇ ಈ ಮಹಾಪ್ರಬಂಧದ ಉದ್ದೇಶವಾಗಿದೆ.

## ೨.೨ ವಸಾಹತುಶಾಹಿ ಸಂದರ್ಭ ಮತ್ತು ಕನ್ನಡ ಕತೆಗಳ ಉದಯ

ಭಾರತದ ಸಂದರ್ಭದಲ್ಲಿ ಸಾಹಿತ್ಯ ಹಾಗೂ ಸಂಸ್ಕೃತಿಯು ಪರಕೀಯ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಹಿತ್ಯದೊಂದಿಗೆ ಸಂಪರ್ಕ ಸಂಘರ್ಷ ಸಂಕರವಾದ ನೆಲೆಯಲ್ಲಿ ಮುಖಾಮುಖಿಯಾಗುತ್ತ ತನ್ನ ಸ್ಥಳೀಯ ಸತ್ವವನ್ನು ಉಳಿಸಿಕೊಂಡು ಬಂದಿರುವುದನ್ನು ಚರಿತ್ರೆಯ ಮೂಲಕ ಗುರುತಿಸಬಹುದು. ವಸಾಹತುಶಾಹಿ ಎನ್ನುವುದು ಯುರೋಪ್ ಕೇಂದ್ರಿತವಾದ ಪರಿಕಲ್ಪನೆಯಾಗಿದ್ದು, ೧೮ನೇ ಶತಮಾನದ ಸಂದರ್ಭದಲ್ಲಿ ಭಾರತವನ್ನು ಪ್ರವೇಶ ಪಡೆದು ಇದು ಭಾರತವನ್ನು ತನ್ನ ವಸಾಹತುವಾಗಿ ನಿರ್ಮಿಸಿಕೊಂಡು 'ವಸಾಹತುಶಾಹಿ ಎನ್ನುವುದರ ನೋಟ ಕ್ರಮವಾಗಿದ್ದು, ಇದು ಧರ್ಮ, ಸಂಸ್ಕೃತಿ, ಯಜಮಾನಿಕೆ, ವ್ಯಾಪಾರ, ಶಿಕ್ಷಣ, ಆಧುನಿಕ ವಿಜ್ಞಾನ, ಅದೃಶ್ಯ ನಿಯಂತ್ರಣ ಇವೆಲ್ಲವೂ ಕೂಡಿ ರೂಪುಗೊಂಡ ವ್ಯವಸ್ಥೆ.[೧] ಈ ವ್ಯವಸ್ಥೆಗೆ ಭಾರತವು ಒಳಗೊಂಡ ಮೇಲೆ ಸಾಂಸ್ಕೃತಿಕ, ರಾಜಕೀಯ ಸಾಮಾಜಿಕ ಆರ್ಥಿಕವಾದ ಪಲ್ಲಟಗಳು ಜರುಗಿದವು.

೧೬೦೦ರ ಕಾಲಘಟ್ಟದಲ್ಲಿ ವ್ಯಾಪಾರದ ಉದ್ದೇಶದಿಂದ ಭಾರತವನ್ನು ಪ್ರವೇಶ ಮಾಡಿದ ಆಂಗ್ಲರು ಯುರೋಪಿನಲ್ಲಿ ಉದಯಿಸಿದ ಪುನರುಜ್ಜೀವನ, ವೈಜ್ಞಾನಿಕ ಶೋಧನೆಗಳ ಪ್ರಯೋಗ ಹಾಗೂ ವಿಸ್ತಾರತೆಗೆ ಭೂಮಿಕೆಯಾಗಿಸಿಕೊಂಡರಲ್ಲದೆ, ಭಾರತವನ್ನು ರಾಜಕೀಯವಾಗಿ ನಿಯಂತ್ರಣ ಮಾಡುವುದರ ಕಡೆಗೆ ಹೆಜ್ಜೆ ಹಾಕಿತು. ಪ್ಲಾಸಿ, ಬಕ್ಸಾರ್, ಕರ್ನಾಟಿಕ್, ಪಾಣಿಪತ್ ಯುದ್ಧಗಳನ್ನು ಮಾಡುವ ಮೂಲಕ ಭಾರತದ ಬಹುಭಾಗವನ್ನು

---

೧. ನಟರಾಜ ಹುಳಿಯಾರ್–'ಆಫ್ರಿಕ ಮತ್ತು ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ' ಪು.೮

ತನ್ನ ಪ್ರಭುತ್ವಕ್ಕೆ ಒಳಪಡಿಸಿತಲ್ಲದೆ, ಈಗಾಗಲೆ ಭಾರತದಲ್ಲಿ ನೆಲೆಯಾಗಿದ್ದ ಫ್ರೆಂಚ್, ಡಚ್ಚ್ ಹಾಗೂ ಪೋರ್ಚುಗೀಸರನ್ನು ಭಾರತದಿಂದ ಹೊರಹಾಕಿ ಏಕಚಕ್ರಾಧಿಪತಿಯಾಗಿ ಆಂಗ್ಲ ಪ್ರಭುತ್ವವು ರೂಪುಗೊಂಡಿತು.

"ಭಾರತೀಯರ ನೆರವಿನಿಂದಲೇ ಇಲ್ಲಿ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಲು ತೊಡಗಿದರು. ಕಲೆ, ಸಾಹಿತ್ಯ, ತತ್ವಜ್ಞಾನ, ಧರ್ಮ ಮುಂತಾದ ನೆಲೆಗಳಲ್ಲಿ ಭಾರತೀಯ ಸಾಂಸ್ಕೃತಿಕ ಸಂಪತ್ತು ಹೊಂದಿದ್ದರೂ ಆರ್ಥಿಕ ಮತ್ತು ರಾಜಕೀಯ ನೆಲೆಗಳ ಶೈಲಿ ಅತ್ಯಂತ ಪುರಾತನವಾಗಿದ್ದವು. ಯೂರೋಪಿನ ಪುನರುಜ್ಜೀವನ ಹಾಗೂ ಕೈಗಾರಿಕೀಕರಣ ದಿಂದ ದತ್ತವಾದ ಸಾಹಸ ಹಾಗೂ ಪರಸ್ಪರ ಸ್ಪರ್ಧೆಗಳು ಹೊಸ ಹೊಸ ಭೂಭಾಗಗಳ ಸಂಪತ್ತನ್ನು ತಮ್ಮದನ್ನಾಗಿ ಮಾಡಿಕೊಳ್ಳಲು ಸಹಜವಾಗಿಯೇ ಅವರನ್ನು ಪ್ರೇರೇಪಿಸಿದವು. ಇಂತಹ ಪ್ರೇರಣೆಗೆ ಭಾರತ ಬಲಿಯಾದದ್ದು ಒಂದು ರೀತಿಯಲ್ಲಿ ದುರಂತವೂ ವರವೂ ಆಯಿತು'.[೨] ಹೀಗೆ ಆಂಗ್ಲರ ವಸಾಹತುವಾದ ಭಾರತ ತನ್ನೆಲ್ಲ ಸತ್ವಪರಂಪರೆಯನ್ನು ವಸಾಹತುಶಾಹಿ ಪ್ರಭುತ್ವ ನೆಲೆಯಲ್ಲಿ ಕಾಣುವ ಸಂದರ್ಭವು ಹುಟ್ಟಿಕೊಂಡಿತು.

ಕರ್ನಾಟಕ ಮತ್ತು ಕನ್ನಡ ಭಾಷೆ, ಸಾಹಿತ್ಯದ ಸಂದರ್ಭಕ್ಕೆ ವಸಾಹತುಶಾಹಿಯ ಪ್ರಭುತ್ವ ಪ್ರವೇಶ ಪಡೆದ ಬಗೆಯನ್ನು ವಿವೇಚಿಸುವುದಾದರೆ ವಿಜಯನಗರ ಸಾಮ್ರಾಜ್ಯದ ಪತನದ ನಂತರದಲ್ಲಿ ಕನ್ನಡ ಭಾಷೆ, ಕನ್ನಡ ಜನ, ಕನ್ನಡ ಪ್ರದೇಶವು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಸ್ಥಿತಿ ನಿರ್ಮಾಣವಾಯಿತು. ಚಾರಿತ್ರಿಕವಾಗಿ ವಿಜಯನಗರದ ನಂತರದಲ್ಲಿ ಅದಿಲ್‌ಶಾಹಿಗಳ ಆಳ್ವಿಕೆಯು ಮುಸ್ಲಿಂ ಧರ್ಮ ಮತ್ತು ದಖ್ಖನ್ನಿ ಭಾಷೆಯನ್ನು ಕನ್ನಡ ಸಂಸ್ಕೃತಿ ಹಾಗೂ ಪ್ರದೇಶದ ಮೇಲೆ ಹೇರಿತಲ್ಲದೆ ಕನ್ನಡ ಜನರು ಕನ್ನಡ ಭಾಷೆ ಮತ್ತು ಆಚರಣೆಯನ್ನು ಕದ್ದು ಮುಚ್ಚಿ ಆಡುವಂತಹ ಪರಿಸ್ಥಿತಿ ಉತ್ತರ ಕರ್ನಾಟಕದ ಭಾಗದಲ್ಲಿ ನಿರ್ಮಾಣವಾಯಿತು.

ದಕ್ಷಿಣ ಕರ್ನಾಟಕದ ಭಾಗದಲ್ಲಿ ಮೈಸೂರು ರಾಜ ಶಾಹಿಯ ನೆಲೆಯಲ್ಲಿ ಕನ್ನಡ ಸಂಸ್ಕೃತಿ ಹಾಗೂ ಸಾಹಿತ್ಯ ಪರಂಪರೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಮುನ್ನಡೆಯುತ್ತಿರುವಾಗ ಹೈದರ್ ಅಲಿ ಹಾಗೂ ಟಿಪ್ಪು ಸುಲ್ತಾನ ಆಳ್ವಿಕೆ ಒಳಪಟ್ಟನಂತರ ಕನ್ನಡ ಭಾಷೆ, ಸಾಹಿತ್ಯ, ಜನಪರಂಪರೆಯು ಏರುಮುಖಿಯಾಗಿ ಬೆಳೆಯಲಿಲ್ಲ. ೧೭೬೯ರಲ್ಲಿ

---

೨. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ಪುಟ-೧೦

ಟಿಪ್ಪು ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಮರಣ ಹೊಂದಿದ ಮೇಲೆ ಆಂಗ್ಲ ವಸಾಹತುಶಾಹಿಯು ಕರ್ನಾಟಕದ ಪ್ರದೇಶವನ್ನು ತನಗೆ ಬೇಕಾದ ರೀತಿಯಲ್ಲಿ ಬಳಸಿಕೊಂಡಿತು. ಟಿಪ್ಪು ಸುಲ್ತಾನನಿಂದ ಪಡೆದ ಮೈಸೂರು ಸಾಮ್ರಾಜ್ಯವನ್ನು ನಾಲ್ಕು ಭಾಗವಾಗಿಸಿ ಹಂಚಿಕೆ ಮಾಡಿದ ವಸಾಹತುಶಾಹಿಯು ತನ್ನ ನಿಯಂತ್ರಣ ಸಾಧಿಸಲು ಎಲ್ಲಾ ರೀತಿಯ ಪ್ರಯತ್ನವನ್ನು ಮಾಡಿತು. ಮಲಬಾರಿನ ಪ್ರದೇಶವನ್ನು 'ಕೆನರಾ' ಎಂಬ ನೆಲೆಯಿಂದು ಗುರುತಿಸಿ ವಸಾಹತುಶಾಹಿಯ ನೇರ ಆಳ್ವಿಕೆಗೆ ಒಳಪಡಿಸಿತು. ೧೭೯೯ರಲ್ಲಿ ಉಡುಪಿ, ಮಂಗಳೂರು, ಉಪ್ಪಿನಂಗಡಿ ಮತ್ತು ಕಾಸರಗೋಡುಗಳನ್ನು ದಕ್ಷಿಣ ಕನ್ನಡ ಪ್ರದೇಶವೆಂದು ವಿಭಾಗಿಸಲಾಯಿತು. ಥಾಮಸ್ ಮುನ್ರೋ ಎಂಬ ಅಧಿಕಾರಿ ೧೮೦೦ರಲ್ಲಿ 'ಕೆನರಾ' ಪ್ರಾಂತ್ಯವನ್ನು ದಕ್ಷಿಣ ಕನ್ನಡ ಹಾಗು ಉತ್ತರ ಕನ್ನಡವಾಗಿ ವಿಭಾಗಿಸಿದರು. ರಾಜಕೀಯ ಹಾಗೂ ಆರ್ಥಿಕ ಕಾರಣಗಳಿಂದ ಉತ್ತರ ಕನ್ನಡ ಪ್ರದೇಶವನ್ನು ಮುಂಬೈ ಪ್ರಾಂತ್ಯ ಅಧೀನಕ್ಕೆ ಒಳಪಡಿಸಲಾಯಿತು.

೧೮೦೦ರಲ್ಲಿ ಬಳ್ಳಾರಿ ಭಾಗವನ್ನು ನೇರ ಆಳ್ವಿಕೆಗೆ ಒಳಪಡಿಸಿಕೊಂಡ ಆಂಗ್ಲ ವಸಾಹತುಶಾಹಿಯು ಮದರಾಸ್ ಪ್ರಾಂತ್ಯಕ್ಕೆ ಸೇರಿಸಿಕೊಂಡಿತು. ಕೊಡಗು ಪ್ರದೇಶವನ್ನು ಕೊಡಗಿನ ರಾಜರಿಂದ ೧೮೩೪ರಲ್ಲಿ ವಶಕ್ಕೆ ಪಡೆದು ಮದರಾಸು ಸರ್ಕಾರದ ನಿಯಂತ್ರಣದಲ್ಲಿ ಕಮಿಶನರುಗಳ ಆಳ್ವಿಕೆಗೆ ಒಳಪಡಿಸಲಾಯಿತು. ಹೀಗೆ ಕರ್ನಾಟವು ವಸಾಹತುಶಾಹಿಯ ಪ್ರಭುತ್ವಕ್ಕೆ ಒಳಪಟ್ಟ ಮೇಲೆ ೨೨ ಘಟಕಗಳಾಗಿ ವಿಭಾಗ ಹೊಂದಿ ಆಳ್ವಿಕೆಗೆ ಒಳಪಟ್ಟಿತು. ಆಂಗ್ಲರ ವಸಾಹತುವಾಗಿ ಭಾರತ ರೂಪುಗೊಂಡ ಮೇಲೆ ಭಾರತವನ್ನು ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಬಗ್ಗಿಸುವ ಮತ್ತು ಪ್ರಭುತ್ವದ ನೆಲೆಯಲ್ಲಿ ವಸಾಹತುಶಾಹಿಯು ತನ್ನ ಜ್ಞಾನ, ಜೀವನ, ಮೌಲ್ಯ, ಆದರ್ಶ, ಸಾಂಸ್ಕೃತಿಕ ಪರಂಪರೆ, ಇಂಗ್ಲಿಷ್ ಭಾಷೆ ಹಾಗು ಆಡಳಿತ ವ್ಯವಸ್ಥೆಯನ್ನು ಜಾರಿಗೊಳಿಸುವ ಮತ್ತು ಪ್ರಯೋಗಿಸುವಂತಹ ಕಾರ್ಯವನ್ನು ಆರಂಭಿಸಿತು. ಇದರ ಫಲವಾಗಿ ವಸಾಹತುಶಾಹಿಯು ಭಾರತದ ಸಂಪತ್ತನ್ನು ಅಧಿಕಾರವನ್ನು ಪಡೆಯುವುದರೊಂದಿಗೆ ಪಶ್ಚಿಮದ ಭೂಮಿಕೆಯಿಂದ ಅನೇಕ ಬದಲಾವಣೆಗಳನ್ನು ರೂಪಿಸಿತು. ಇದು ಭಾರತೀಯರಲ್ಲಿ ಸ್ಥಳೀಯ ಪ್ರಜ್ಞೆ, ಚಾರಿತ್ರಿಕ ವಿವೇಚನೆ, ಹೊಸ ಬಗೆಯ ಸಾಹಿತ್ಯದ ಮಾದರಿಯನ್ನು, ಅಭಿವ್ಯಕ್ತಿ ವೈಚಾರಿಕತೆ, ಮನೋಧರ್ಮ ಇತ್ಯಾದಿ ಚಿಂತನಾ ಕ್ರಮಗಳನ್ನು ಹುಟ್ಟು ಹಾಕಿತು.

ವಸಾಹತುಶಾಹಿ ಮತ್ತು ಪಾಶ್ಚಾತ್ಯ ಸಾಹಿತ್ಯ ಚಿಂತನೆಗಳನ್ನು ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಪರಂಪರೆಯು ಸಂಪರ್ಕಕ್ಕೆ ಒಳಗಾದಾಗ ಸಂಘರ್ಷ ಹಾಗೂ ಸಂಕರತೆಯ

ನೆಲೆಯಲ್ಲಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಬಹು ಮಾದರಿಯ ಪಲ್ಲಟಗಳು ಹುಟ್ಟಿಕೊಂಡವು. ಈ ಪಲ್ಲಟಗಳಿಗೆ ಒಳಗಾದ ಕನ್ನಡದ ಸಾಹಿತ್ಯ ಪ್ರಕಾರಗಳಲ್ಲಿ ಕಥಾ ಸಾಹಿತ್ಯವು ಮುಖ್ಯವಾದದ್ದು. ಸಣ್ಣಕತೆ ಎನ್ನುವ ಮಾದರಿ, ರಚನೆಯ ಲಕ್ಷಣಗಳು ಪ್ರಾಚೀನ ಮತ್ತು ಮಧ್ಯಕಾಲೀನ ಸಾಹಿತ್ಯದಲ್ಲಿ ಇದ್ದರೂ ಸಹ ಆಧುನಿಕವಾದ ವಸಾಹತುಶಾಹಿ ಧೋರಣೆಯ ದಟ್ಟವಾದ ಪ್ರಭಾವವಿದೆ. ವಸಾಹತುಶಾಹಿ ಪರಿಸರವು ಮೊದಲ ತಲೆಮಾರಿನ ಕತೆಗಾರರಿಗೆ ಪ್ರಭಾವವನ್ನು ಪ್ರೇರಣೆಯನ್ನು ಒದಗಿಸಿ ಹೊಸಕಥಾ ಪರಂಪರೆಯ ಹುಟ್ಟಿಗೆ ಕಾರಣವಾಯಿತು.

ವಸಾಹತುಶಾಹಿಯು ಭಾರತದಲ್ಲಿ ತನ್ನ ಆಡಳಿತ ಸ್ವರೂಪವನ್ನು ಬಲಪಡಿಸುವ ದೃಷ್ಟಿಯಿಂದ ಪಾಶ್ಚಾತ್ಯ ಶಿಕ್ಷಣ ಪದ್ಧತಿಯನ್ನು ರೂಪಿಸಲು ಮುಂದಾಯಿತು. ೧೮೩೫ರಲ್ಲಿ ಟಿ.ಬಿ. ಮೆಕಾಲೆಯ ಶಿಫಾರಸಿನ ಮೇರೆಗೆ ಇಂಗ್ಲಿಷ್ ಭಾಷೆಯ ಮೂಲಕ ಪಾಶ್ಚಾತ್ಯ ಶಿಕ್ಷಣ ಪದ್ಧತಿಯನ್ನು ಜಾರಿಗೊಳಿಸಿತು. ಈ ನಡುವೆ ಭಾರತದಲ್ಲಿ ಅಸ್ತಿತ್ವದಲ್ಲಿ ಇದ್ದಂತಹ ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆ ಹಿನ್ನೆಲೆಗೆ ಸರಿಯಿತ್ತಲ್ಲದೆ ಸ್ಥಳೀಯ ಸತ್ವವನ್ನು ಹೊಂದಿದ್ದ ಭಾಷೆ, ಪಠ್ಯ, ಜ್ಞಾನ ವಿಕಾಸದ ಮಾದರಿಗಳು ತನ್ನ ಅಸ್ತಿತ್ವವನ್ನು ಕಳೆದುಕೊಂಡವು. ಇಂಗ್ಲಿಷ್ ಭಾಷೆ ಹಾಗೂ ಪಶ್ಚಿಮದ ಪಠ್ಯ ವಿಷಯಗಳು ಶಾಲೆ-ಕಾಲೇಜು ವ್ಯವಸ್ಥೆಯ ಮೂಲಕ ಪ್ರವೇಶ ಪಡೆದವು. ವಸಾಹತುಶಾಹಿಯು ಭಾರತೀಯರಿಗೆ ಉನ್ನತ ಮಟ್ಟದ ಶಿಕ್ಷಣವನ್ನು ನೀಡಿ ಬುದ್ಧಿವಂತರನ್ನಾಗಿ ಮಾಡುವ ಉದ್ದೇಶವನ್ನು ಹೊಂದದೆ, ಬದಲಿಗೆ ಭಾರತೀಯರನ್ನು ತಮ್ಮ ಆಡಳಿತ ವ್ಯವಸ್ಥೆಗೆ ಸಹಾಯಕರನ್ನಾಗಿ ರೂಪಿಸುವುದರ ಜೊತೆಗೆ ಸ್ಥಳೀಯ ಜ್ಞಾನ ಪರಂಪರೆಯೊಂದಿಗೆ ಭಾರತೀಯರಿಗಿದ್ದ ಕೊಂಡಿಯನ್ನು ತಪ್ಪಿಸಿ, ಪಶ್ಚಿಮ ಭಾಷೆ, ಜ್ಞಾನ ಪರಂಪರೆಯನ್ನು ಪ್ರಧಾನವೆಂದು ಒಪ್ಪಿಕೊಳ್ಳುವಂತೆ ಮಾಡುವುದೇ ಆಗಿತ್ತು.

ವಸಾಹತುಶಾಹಿ ಪ್ರಭುತ್ವವು ಶಿಕ್ಷಣದ ಭಾಗವಾಗಿ ಇಂಗ್ಲಿಷ್ ಸಾಹಿತ್ಯ, ವಿಜ್ಞಾನ, ಚರಿತ್ರೆ, ಸಮಾಜಶಾಸ್ತ್ರ ಹಾಗೂ ಭೌತಜ್ಞಾನವು ಭಾರತೀಯ ನೆಲೆಯಲ್ಲಿ ಅನುಸಂಧಾನ ಗೊಂಡಿತು. ಭಾರತೀಯರು ಹೊಸ ಮಾದರಿಯ ವಿಚಾರಗಳಿಗೆ ಹಾಗೂ ಜ್ಞಾನ ಪರಂಪರೆಗೆ ಆಕರ್ಷಿತರಾಗಿ ಆಸಕ್ತಿಯಿಂದ ಅಧ್ಯಯನಕ್ಕೆ ಒಳಪಡಿಸಿಕೊಂಡಿತು. ಇದೇ ಸಂದರ್ಭದಲ್ಲಿ ಯುರೋಪ್ ಕೇಂದ್ರಿತ ಪೌರಾತ್ಯವಾದವು ವಸಾಹತುಶಾಹಿಯ ಆಳ್ವಿಕೆ, ಧರ್ಮ, ಭಾಷೆ ಮತ್ತು ಸಾಂಸ್ಕೃತಿಕ ಪರಂಪರೆಯು ಶ್ರೇಷ್ಠವೆಂದು ನಿರೂಪಿಸುವ ನೆಲೆಯಲ್ಲಿ ಪೌರಾತ್ಯವಾದದ ಚಿಂತಕರಾದ ಎಸ್.ಎಸ್. ಮಿಲ್, ಜೇಮ್ಸ್ ಮಿಲ್, ಮ್ಯಾಕ್ಸ್ ಮುಲ್ಲರ್ ಇತ್ಯಾದಿ ಚಿಂತಕರು ಯುರೋಪ್ ಪ್ರಧಾನವಾದ ಚರಿತ್ರೆಯನ್ನು ಹಾಗೂ ಜ್ಞಾನ ಪರಂಪರೆಯನ್ನು ಭಾರತೀಯರಿಗೆ

ಪ್ರತಿಯಾಗಿ ಮಂಡಿಸಿದರಲ್ಲದೆ ಅದನ್ನು ಒಪ್ಪಿಕೊಳ್ಳುವಂತೆ ವಸಾಹತುಶಾಹಿಯ ಪ್ರಭುತ್ವದ ಮೂಲಕ ಒತ್ತಡ ರೂಪಿಸಿದರು. ಪೌರಾತ್ಯವಾದವು ಭಾರತೀಯ ಜ್ಞಾನಪರಂಪರೆ, ಧರ್ಮ, ಭಾಷೆ, ಜನಾಂಗ ಹಾಗೂ ಸಂಸ್ಕೃತಿಯನ್ನು ನಿಂದಿಸುವ ಜೊತೆಗೆ ಅನಾಗರಿಕ ಎಂದು ಬಿಂಬಿಸಿ ಕರೆಯಲಾರಂಭಿಸಿತು. ಈ ರೀತಿಯ ವಸಾಹತುಶಾಹಿಯ ಧೋರಣೆಯು ಭಾರತೀಯರಲ್ಲಿ ಸ್ಥಳೀಯ ಸತ್ವವನ್ನು ನೆನಪು ಮಾಡಿತು ಹಾಗೂ ಪಶ್ಚಿಮದ ಶ್ರೇಷ್ಠ ಜ್ಞಾನವನ್ನು ಸಾಹಿತ್ಯ ಮಾದರಿಯನ್ನು ಒಳಗೊಳ್ಳುವಂತಹ ಪರಿಸರ ನಿರ್ಮಾಣವಾಯಿತು. ಈ ಪರಿಸರವೇ ಸಣ್ಣ ಕತೆಯ ಭೂಮಿಯನ್ನು ಹುಟ್ಟು ಹಾಕಿ, ಕಥಾ ಪರಂಪರೆಯ ಉಗಮಕ್ಕೆ ದಾರಿ ಮಾಡಿಕೊಟ್ಟಿತು.

ಭಾರತದಲ್ಲಿ ಕ್ರೈಸ್ತ ಧರ್ಮವನ್ನು ಪ್ರಚಾರ ಮಾಡುವ ಮೂಲಕ ಧಾರ್ಮಿಕ ಅಸ್ಮಿತೆಯನ್ನು ಹುಟ್ಟು ಹಾಕಲು ೧೯ನೇ ಶತಮಾನದ ಮಧ್ಯದ ಕಾಲದ ಸರಿಸುಮಾರಿಗೆ ನಾಲ್ಕು ಮಿಶನ್ ಸಂಸ್ಥೆಗಳು ಪ್ರವೇಶ ಪಡೆದವು. ಜರ್ಮನ್ ಬಾಸೆಲ್ ಹಾಗೂ ಬ್ರಿಟಿಷ್ ಬಾಸೆಲ್ ಮಿಶನ್ ಕರ್ನಾಟಕದ ಅನೇಕ ಭಾಗದಲ್ಲಿ ದೀರ್ಘಕಾಲ ನೆಲೆನಿಂತು, ಶಿಕ್ಷಣ, ಮುದ್ರಣ, ಮತ ಪ್ರಚಾರಕ್ಕೆ ತನ್ನದೆ ಆದ ಕೊಡುಗೆಯನ್ನು ನೀಡಿದೆ. ಕ್ರಿಸ್ತ ಮಿಶನರಿಗಳು ವಸಾಹತುವಿನಲ್ಲಿ ಧರ್ಮವನ್ನು ಅದರ ಸಿದ್ಧಾಂತವನ್ನು ಜನಮುಖಿಯಾಗಿಸಲು ಶಿಕ್ಷಣ, ಮುದ್ರಣ, ಪತ್ರಿಕೆಯನ್ನು ತನ್ನ ಅಸ್ತ್ರವನ್ನಾಗಿ ಬಳಸಿಕೊಂಡಿತು. ಒಂದು ಕೈಯಲ್ಲಿ ಬೈಬಲ್ ಅದರ ಬೆನ್ನಿಗೇ ಮುದ್ರಣ ಸಾಮಗ್ರಿ ಇವನ್ನು ಹಿಡಿದುಕೊಂಡು ಬಂದ ಮಿಶನರಿಗಳು ಸ್ವಮತ ಪ್ರಸಾರದ ಕಾರ್ಯದಲ್ಲಿ ತೊಡಗಿದ್ದು, ಆ ನಿಮಿತ್ತದಿಂದ ಸಾಹಿತ್ಯ, ಶಿಕ್ಷಣ ಕ್ಷೇತ್ರಗಳಲ್ಲಿ ನೇರವಾಗಿ ಪ್ರವೇಶಿಸಿದರು.[೩]

ಪಶ್ಚಿಮ ಸಾಂಸ್ಕೃತಿಕ ವಿಚಾರ ಹಾಗೂ ಕ್ರಿಸ್ತ ಧಾರ್ಮಿಕ ಮೀಮಾಂಸೆಯನ್ನು ಶಿಕ್ಷಣದ ಮೂಲಕ ಭಾರತದಲ್ಲಿ ಬಿತ್ತರಿಸಲು ಆರಂಭಿಸಿದ ೭ ಮಿಶನರಿ ಸಂಸ್ಥೆಗಳು ಅನೇಕ ಧಾರ್ಮಿಕ, ಸಾಮಾಜಿಕ, ಆರ್ಥಿಕ ಹಾಗೂ ಸಾಹಿತ್ಯಿಕ ಕಾರ್ಯವನ್ನು ನಿರೂಪಿಸಿದರು. ಕ್ರಿಸ್ತ ಧರ್ಮವನ್ನು ಸ್ಥಳೀಯ ಜನರ ಬದುಕಿನೊಳಕ್ಕೆ ಒಳಗೊಳ್ಳುವಂತೆ ಮಾಡಲು ಸ್ಥಳೀಯ ಭಾಷೆಯಲ್ಲಿ ಕ್ರಿಸ್ತನ ಜೀವನ ಹಾಗೂ ಪವಾಡವನ್ನು ಭಾರತೀಯ ಸಮಾಜದ ಸುಧಾರಣೆಯ ಭಾಗವೆಂಬಂತೆ ಉಪನ್ಯಾಸ ಮಾಡಿದರಲ್ಲದೆ, ಸ್ಥಳೀಯ ಭಾಷೆಯಲ್ಲಿ ಬೈಬಲ್ ಗ್ರಂಥವನ್ನು ಕ್ರಿಸ್ತನ ಬೋಧನೆಗಳನ್ನು ಅಚ್ಚುಹಾಕಿ ಹಂಚಿದರು. "ಮಿಶನರಿಗಳು ಯಾವುದೇ ಸಾಮಾಜಿಕ,

೩. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ಪುಟ-೪

ಶೈಕ್ಷಣಿಕ, ಸಾಹಿತ್ಯಿಕ ಕಾರ್ಯವನ್ನು ತೆಗೆದುಕೊಳ್ಳಲಿ, ಅದರ ಹಿಂದೆ ಕ್ರೈಸ್ತ ಧರ್ಮ ಪ್ರಸಾರ ಮತ್ತು ಮತಾಂತರ ಏಕಮೇವ ಪ್ರಚೋದನೆಯಾಗಿತ್ತು". ಈ ನಿಲುವಿನಿಂದ ಕ್ರೈಸ್ತ ಮಿಶನರಿಗಳು ತಮ್ಮ ಧಾರ್ಮಿಕ ಚಿಂತನೆಯನ್ನು ಭಾರತೀಯ ಸಮಾಜ ಒಳಗೆ ಭದ್ರವಾಗಿಸಿಕೊಳ್ಳಬೇಕಾದರೆ, 'ಭಾರತೀಯ ಧರ್ಮ, ನಂಬಿಕೆ, ಜೀವನ ಮೀಮಾಂಸೆ, ಮೌಲ್ಯ, ಪುರಾಣ, ಸಾಹಿತ್ಯ ಇತ್ಯಾದಿಗಳನ್ನು ತಿಳಿದುಕೊಳ್ಳುವ ಅಗತ್ಯ ಉಂಟಾಯಿತು. ಈ ಅಗತ್ಯತೆಯನ್ನು ಮನಗಂಡ ಮಿಶನರಿಗಳು ಪುರಾತತ್ವ ಎನ್ನುವ ಸಂಸ್ಥೆಯನ್ನು ಹುಟ್ಟುಹಾಕುವ ಮೂಲಕ ಭಾರತದ ಬಗೆಗಿನ ಅಧ್ಯಯನವನ್ನು ಆರಂಭಿಸಿದರು. ಈ ಅಧ್ಯಯನಕ್ಕೆ ದೇಶಿ ವಿದ್ವಾಂಸರನ್ನು ನೇಮಕ ಮಾಡುವ ಮೂಲಕ ಸ್ಥಳೀಯ ಜೀವನ ಮೀಮಾಂಸೆ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಒಟ್ಟುಗೂಡಿಸಿದರು ಮತ್ತು ಭಾರತೀಯ ಅಮೂಲ್ಯ ಸಾಹಿತ್ಯ ಕೃತಿಗಳನ್ನು ವಸಾಹತುಶಾಹಿಯ ಭಾಷೆಗೆ ಅನುವಾದಿಸಿಕೊಂಡರು. ಈ ಸಂದರ್ಭದಲ್ಲಿ ಮುದ್ರಣ, ಕೃತಿ ರಚನೆ, ಪತ್ರಿಕೆ ಹಾಗೂ ಹೊಸ ಶಿಕ್ಷಣ ನೆಲೆಗಳು ಭಾರತೀಯರ ಮೇಲೆ ಅದಮ್ಯ ಪ್ರೇರಣೆಯನ್ನು ಉಂಟು ಮಾಡಿತು. ಹೊಸ ಶಿಕ್ಷಣದ ಪರಿಣಾಮವಾಗಿ ನವೀನ ವಿಚಾರವು ಅಂದಿನ ವಿದ್ಯಾವಂತರಲ್ಲಿ ಮಥನಗೊಂಡವು. ಮಿಶನರಿ ಜನರ ಮುದ್ರಿತ ಪ್ರಕಟನೆಗಳ ಅನಿರ್ಬಂಧ ಪ್ರಸಾರದಿಂದಾಗಿ ವಾಚನಾಭಿರುಚಿಯು ಕುದುರಿತು. ತಾವು ಬರೆಯಬೇಕು; ಬರೆದು ಪ್ರಕಟಿಸಬೇಕು ಎಂಬ ಒತ್ತಾಸೆ ಮೇಲೆದ್ದಿತು. ಹಾಗೂ ಮುದ್ರಣ ಯಂತ್ರದ ಸೌಲಭ್ಯವು ಹೊಸತಾಗಿ ದೊರಕಿದ್ದಿತಲ್ಲ. ಇಂತು ಸಾಮಾನ್ಯ ವಿದ್ಯಾವಂತನೂ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗುವಂತಾಯಿತು.'[೪]

ಮಿಶನರಿಗಳು ಧರ್ಮ ಹಾಗೂ ಮತಾಂತರ ಕಾರ್ಯದಲ್ಲಿ ಮುಂದುವರಿಯುವಾಗ ಭಾರತೀಯ ಧರ್ಮ, ನಂಬಿಕೆ, ಪುರಾಣ ಹಾಗೂ ಸಾಂಸ್ಕೃತಿಕ ಪರಿಕರಗಳನ್ನು ಕೀಳೆಂದು ನಿರಾಕರಿಸುತ್ತ ತಮ್ಮ ಧರ್ಮದ ನಿಲುವುಗಳನ್ನು ಶ್ರೇಷ್ಠವೆಂದು ಪ್ರಚಾರ ಮಾಡಿದರೂ ಈ ನಡುವೆ ವಸಾಹತುಶಾಹಿ ಧಾರ್ಮಿಕ ತತ್ವಗಳಿಗೂ ಭಾರತದ ಪರಂಪರೆಯ ನಡುವಿನ ಸಂಘರ್ಷವು ಸ್ಥಳೀಯತೆ ಎಂಬ ಭೂಮಿಕೆಯನ್ನು ಹುಟ್ಟು ಹಾಕಿತು. ಇದೇ ಕತೆಗಳ ಹುಟ್ಟಿಗೆ ಪ್ರೇರಕವಾಯಿತು.

---

೪. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ಪುಟ-೧೭೮

ದಕ್ಷಿಣ ಕನ್ನಡ ಭಾಗದಲ್ಲಿ ಪ್ರಸಾರ ಕಾರ್ಯನಿರ್ವಹಿಸುತ್ತಿದ್ದ ಬಾಸೆಲ್ ಮಿಷನ್ ಧರ್ಮ ಕಾರ್ಯದಲ್ಲಿ ಮತ್ತು ಪಶ್ಚಿಮದ ಜ್ಞಾನವನ್ನು ಬಿತ್ತುವುದರಲ್ಲಿ ಉನ್ನತವಾದ ಕೆಲಸವನ್ನು ಮಾಡಿತು. ಇಂಗ್ಲಿಷ್ ಪ್ರಧಾನವಾದ ಅನೇಕ ಶಾಲೆಗಳನ್ನು ತೆರೆಯುವ ಮೂಲಕ ವಸಾಹತುಶಾಹಿಯ ಧೋರಣೆಗಳನ್ನು ಜನಮುಖಿಗೊಳಿಸುವ ಕಡೆಗೆ ಹೆಜ್ಜೆ ಹಾಕಿತು. ಈ ರೀತಿಯ ಬಾಸೆಲ್ ಮಿಶನಿನ ಕಾರ್ಯಚಟುವಟಿಕೆಯು ಪಶ್ಚಿಮ ಸಂಸ್ಕೃತಿ, ಭಾಷೆ, ಆಚಾರ–ವಿಚಾರದ ಬಗ್ಗೆ ಭಾರತೀಯರಲ್ಲಿ ಒಲವು ಮೂಡುವಂತೆ ಮಾಡಿತು. ಇಂಗ್ಲಿಷ್ ಭಾಷೆ ಮತ್ತು ಕ್ರೈಸ್ತ ಧರ್ಮವನ್ನು ಒಪ್ಪಿಕೊಳ್ಳುವ ಭಾರತೀಯರಿಗೆ ಸನ್ಮಾನ, ದಾನ, ಹುದ್ದೆ, ಭೂಮಿ ಇತ್ಯಾದಿಗಳನ್ನು ಬಾಸೆಲ್ ಮಿಶನ್ ಒದಗಿಸಿತು. ಈ ರೀತಿಯ ಬೆಳವಣಿಗೆಗಳು ಭಾರತದಲ್ಲಿ ಹೊಸದಾದ ಸಾಂಸ್ಕೃತಿಕ ವರ್ಗವನ್ನು ಹುಟ್ಟು ಹಾಕಿತು.

ವಸಾಹತುಶಾಹಿ ಪ್ರಭುತ್ವವು ಇಂಗ್ಲಿಷ್ ಮಾದರಿಯ ಪಾಶ್ಚಾತ್ಯ ಶಿಕ್ಷಣದ ಮೂಲಕ ಇಂಗ್ಲಿಷ್ ಭಾಷೆ ಹಾಗೂ ಅದರಲ್ಲಿ ಜ್ಞಾನ ಪರಂಪರೆಯು ಪ್ರಧಾನವೆಂಬ ತಿಳುವಳಿಕೆಯನ್ನು ಹುಟ್ಟುಹಾಕಿತು. ಬಾಸೆಲ್ ಮಿಶನ್ ಕ್ರೈಸ್ತ ಧರ್ಮದ ಪ್ರಚಾರದ ನೆಲೆಯಲ್ಲಿ ಕ್ರೈಸ್ತ ಧಾರ್ಮಿಕ ಮೀಮಾಂಸೆಯನ್ನು ಹಾಗೂ ಅದರ ಲೋಕಜ್ಞಾನವನ್ನು ಭಾರತೀಯ ಧರ್ಮದ ವಿರುದ್ಧ ನಿಲ್ಲಿಸಿತು. ಇದೇ ಸಂದರ್ಭದಲ್ಲಿ ವಸಾಹತು ಶಾಹಿಯು ಹುಟ್ಟು ಹಾಕಿದ ಪೌರತ್ಯವಾದವು ಭಾರತೀಯ ಚರಿತ್ರೆ, ಭಾಷೆ, ಜನಾಂಗ, ನಂಬಿಕೆಗಳನ್ನು ಅನಾಗರೀಕವೆಂದು ಬಿಂಬಿಸಿತು. ಈ ನಡುವೆ ಭಾರತೀಯ ಶಿಕ್ಷಣವಂತ ವರ್ಗವು ಸೂಕ್ಷ್ಮವಾಗಿ ಸ್ಥಳೀಯ ಸತ್ವ ಪರಂಪರೆಯನ್ನು ವಸಾಹತುಶಾಹಿಯ ಪ್ರತಿಯಾಗಿ ಕಟ್ಟಿಕೊಳ್ಳಲು ಆರಂಭಿಸಿತು. ಈ ಆರಂಭಿಕೆಯ ಮೊದಲ ತಲೆಮಾರಿನ ಕತೆಗಳ ಹುಟ್ಟಿಗೆ ಪ್ರೇರಣೆಯ ಜೊತೆಗೆ ಪರಿಸರವನ್ನು ಒದಗಿಸಿತು. ಈ ರೀತಿಯ ಸಂದರ್ಭವು ಕನ್ನಡ ಭಾಷಾ ಪರಿಸರಕ್ಕೆ ಮಾತ್ರ ಒದಗಿದಲ್ಲದೆ ಆಫ್ರಿಕಾದ ಕಿಸ್ವಾಹಿಲ ಭಾಷೆಯಲ್ಲೂ ಈ ರೀತಿಯ ಬದಲಾವಣೆಯು ಹುಟ್ಟಿಕೊಂಡಿತು ಎಂಬುವುದನ್ನು ಆಫ್ರಿಕಾದ ಲೇಖಕ ಗೂಗಿ ವಿವರಿಸುತ್ತಾರೆ.

'ವಸಾಹತು ಶಾಹಿಯು ತನ್ನ ಧಾರ್ಮಿಕ ಪ್ರಚಾರವನ್ನು ಹರಡುತ್ತಾ ದೇಶೀಯ ಸಾಂಸ್ಕೃತಿಕ ಸತ್ವವನ್ನು ದುರ್ಬಲಗೊಳಿಸುವ ಕೆಲಸ ಮಾಡಿತು. ಈ ಸಾಂಸ್ಕೃತಿಕ ಸನ್ನಿವೇಶಕ್ಕೆ ಸ್ಥಳೀಯ ಬರಹಗಾರರು ಕತೆಗಳ ಮೂಲಕ ಪ್ರತಿಕ್ರಿಯಿಸಿದರು".[೫] ಪಂಜೆ, ಕುವೆಂಪು,

---

೫. ಶಿವರಾಮ ಪಡಿಕಲ್, ನಾಡುನುಡಿಯ ರೂಪಕ, ಪುಟ–೬೦

ಮಾಸ್ತಿ, ಕಾರಂತರಂತಹ ಇತರ ಬರಹಗಾರರ ಕಥನ ಭೂಮಿಕೆಯಲ್ಲಿ ಧಾರ್ಮಿಕ ಸಂಘರ್ಷ, ವೈಚಾರಿಕತೆ, ಮತಾಂತರದ ಚಿಹ್ನೆ, ಸ್ಥಳೀಯ ನಂಬಿಕೆ, ದೈವ, ಆಚಾರಗಳ ಗುಣಾತ್ಮಕ ನಿರೂಪಣೆಗಳನ್ನು ಕಾಣಬಹುದು.

ಕೃಷಿ ಪ್ರಧಾನವಾದ ಭಾರತದಂತಹ ದೇಶವು ಇಂಗ್ಲೆಂಡ್‌ನಂತಹ ಕೈಗಾರಿಕಾ ಪ್ರಧಾನವಾದ ರಾಷ್ಟ್ರದ ವಸಾಹತುವಾದ ಭಾರತದಲ್ಲಿನ ಸಾಮಾಜಿಕ ವ್ಯವಸ್ಥೆ, ಆರ್ಥಿಕ ವ್ಯವಸ್ಥೆಗಳು ಪಲ್ಲಟವಾದವು. ಇಂಗ್ಲೆಂಡ್‌ನಲ್ಲಿ ಉಂಟಾದ ಕೈಗಾರಿಕಾ ಕ್ರಾಂತಿಯ ಮುಂದುವರಿದ ಭಾಗವಾಗಿ ವಸಾಹತುಶಾಹಿಯು ಭಾರತದಲ್ಲಿ ಕೈಗಾರಿಕಾ ಪರಿಸರವನ್ನು ನಿರ್ಮಾಣ ಮಾಡಿತು. ವಸಾಹತುಶಾಹಿಗೆ ಬ್ರಿಟಿಷ್ ಸಾಮ್ರಾಜ್ಯವನ್ನು ಕಟ್ಟುವ ಹಾಗೂ ಭಾರತದಲ್ಲಿ ವ್ಯಾಪಾರದ ವಿಸ್ತರತೆಯಿಂದ ಲಾಭವನ್ನು ಗಳಿಸುವ, ಆರ್ಥಿಕ ಏಕಸ್ವಾಮ್ಯತೆಯನ್ನು ಸಾಧಿಸುವ ಉದ್ದೇಶದಿಂದ ಭಾರತದಲ್ಲಿ ಕೈಗಾರಿಕೆಯ ಸ್ವರೂಪವನ್ನು, ಕೈಗಾರಿಕೆಯ ನೀತಿಯನ್ನು ಜಾರಿಗೆ ತಂದಿತು. ಈ ನೆಲೆಯಲ್ಲಿ ಭಾರತವು ವಸಾಹತುಶಾಹಿಗೆ ಕಚ್ಚಾವಸ್ತುವನ್ನು ಒದಗಿಸುವ ಮತ್ತು ಸಿದ್ಧವನ್ನು ಮಾರಾಟ ಮಾಡುವ ಸ್ಥಳವಾಗಿ ರೂಪಿಗೊಂಡಿತಲ್ಲದೆ ಭಾರತ ಆರ್ಥಿಕ ಅಸ್ಮಿತೆಯನ್ನು ಕಳೆದುಕೊಂಡು ಪರಾವಲಂಬಿಯಾಗುವ ಕಡೆಗೆ ಹೆಜ್ಜೆ ಹಾಕಿತು. ಭಾರತದ ಬಹುಪಾಲು ಜನರು ತಮ್ಮ ಬದುಕಿನ ಮೀಮಾಂಸೆಯನ್ನು ಕಟ್ಟಿಕೊಂಡಿದ್ದು ಕೃಷಿ ಸಂಸ್ಕೃತಿಯ ನೆಲೆಯಲ್ಲಿಯೇ. ಅಚಾರ, ನಂಬಿಕೆ, ಧರ್ಮ, ದೈವ, ಪರಂಪರೆ, ಮಾನವ ಸಂಬಂಧ, ಆಟ-ಊಟಗಳೆಲ್ಲ ಕೃಷಿ ಭೂಮಿಕೆಯಲ್ಲಿ ರೂಪುಗೊಂಡು ಸ್ವಾವಲಂಬಿ ಬದುಕನ್ನು ಭಾರತೀಯರು ಹೊರದಿದ್ದರೂ ಯಾವಾಗ ವಸಾಹತುಶಾಹಿಯು ಭಾರತೀಯ ಸಾಮಾಜಿಕ ವ್ಯವಸ್ಥೆಯೊಳಗೆ ಕೈಗಾರಿಕೆ ಮತ್ತು ಕೈಗಾರಿಕಾ ಸಂಬಂಧಿ ಸಂಸ್ಕೃತಿಯನ್ನು ಪ್ರವೇಶ ಪಡಿಸಿದ ನಂತರದಲ್ಲಿ ಭಾರತದ ಆರ್ಥಿಕ ವ್ಯವಸ್ಥೆಯ ರಚನೆಗಳು ವಸಾಹತುಶಾಹಿ ಕೇಂದ್ರಿತವಾಯಿತಲ್ಲದೆ ಹೊಸಬಗೆಯ ಕೈಗಾರಿಕಾ ಪ್ರವೇಶ ಸಂಸ್ಕೃತಿಗಳು ಜೀವಪಡೆದವು.

ಕೈಗಾರಿಕಾ ಸಮಾಜವು ಉದ್ಯೋಗ ನೀಡುವುದರ ಜೊತೆಗೆ ಭಾರತೀಯರಿಗೆ ಆಕರ್ಷಕವಾದ ಪರಿಸರವಾಯಿತು. ಕೈಗಾರಿಕಾ ಪ್ರದೇಶಗಳಿಗೆ ದುಡಿಯಲು ಸೇರಿಕೊಂಡ ಎಲ್ಲಾ ಸಮುದಾಯದ, ಭಿನ್ನ ಪ್ರದೇಶದ ಜನರು ನಗರವಾಸಿಗಳಾದರೂ ಅಲ್ಲಿನ ಪಾಶ್ಚಾತ್ಯ ಸಂಸ್ಕೃತಿಯ ಸತ್ವವನ್ನು ತಮ್ಮ ಬದುಕಿನ ಭಾಗವಾಗಿಸಿಕೊಂಡರು. ಈ ರೀತಿಯ ಬೆಳವಣಿಗೆಯು ಹೆಚ್ಚು ಕಾಲ ತೃಪ್ತಿಯನ್ನು ಒದಗಿಸಲಿಲ್ಲ. ತನ್ನ ಸ್ಥಳೀಯ ಭಾಷೆ, ಆಚಾರ, ನಂಬಿಕೆಯ ಪರಂಪರೆಯನ್ನು ಬಿಟ್ಟಿರಲಾರದೆ ಮತ್ತು ಪಾಶ್ಚಾತ್ಯ ಸಂಸ್ಕೃತಿಯ ಬಿಕ್ಕಟ್ಟು ಹುಟ್ಟಿಕೊಂಡಿತು. ಈ ಬಿಕ್ಕಟ್ಟಿನ ಪರಿಸರವೇ ಮುಂದೆ ಕನ್ನಡ ಸಣ್ಣಕತೆಗಳ

ಭೂಮಿಕೆಗೆ ಸತ್ವವನ್ನು ಒದಗಿಸಿತು.

ಕೈಗಾರಿಕಾ ನೆಲೆಯು ನಗರವನ್ನು ರೂಪಿಸಿದ ಮೇಲೆ ನಗರಗಳು ಪಶ್ಚಿಮದ ಜೀವನ ವಿಧಾನದ ಆಕರ್ಷಣೀಯ ಕೇಂದ್ರವಾದವು. ಭೌತಿಕ ಚಿಂತನೆಯೇ ಮಾನವನ ಜೀವನದ ಗುರಿ ಹಾಗೂ ದಾರಿಯಾಗಿ ಅಸ್ತಿತ್ವವನ್ನು ಪಡೆಯಿತು. ವ್ಯವಹಾರಿಕ ಸಂಬಂಧಗಳು, ವಿಭಕ್ತ ಕುಟುಂಬ ವ್ಯವಸ್ಥೆ, ಸ್ವಕೇಂದ್ರಿತ ಚಿಂತನೆ, ಮನೋರಂಜನೆಯಂತಹ ಬದುಕಿನ ವಿನ್ಯಾಸಗಳು ಹುಟ್ಟಿಕೊಂಡವು. ಈ ನಡುವೆ ನಗರಗಳು ಬೆಳೆದಂತೆ ರಸ್ತೆ, ಸಾರಿಗೆ, ಸಂಪರ್ಕ, ಹೊಟೇಲ್. ಪಾರ್ಕ್, ಸಿನೇಮಾ, ಕ್ಲಬ್ ಇತ್ಯಾದಿ ಪಾಶ್ಚಾತ್ಯ ಪರಂಪರೆಯ ಜೀವನ ಮಾದರಿಗಳು ಶರೀರವನ್ನು ಪಡೆದುಕೊಂಡು ಮಾನವನನ್ನು ತೃಪ್ತಿಪಡಿಸಿದವು. ಈ ನಾಗರಿಕ ಪರಿಸರವು ರೂಪಿಸಿದ ಲೋಕಜ್ಞಾನ ಹಾಗೂ ವೈಚಾರಿಕ ಚಿಂತನೆಯು ಭಾರತೀಯ ಯುವ ಸಮುದಾಯಕ್ಕೆ ಹತ್ತಿರವೆನಿಸಿತು. ಹೀಗಾಗಿ ಇವುಗಳನ್ನು ಅನುಕರಣೆ ಮಾಡಲು ಆರಂಭಿಸಿದರು. ಭಾರತೀಯರ ಈ ಬಗೆಯ ಪಾಶ್ಚಾತ್ಯ ಜೀವನ ಪರಂಪರೆಯ ಅನುಕರಣೆಯು ತನ್ನ ನೆಲದ ಭಾಷೆ, ಆಚಾರ, ಸಾಂಸ್ಕೃತಿಕ ಪರಂಪರೆಯನ್ನು ತನ್ನೊಂದಿಗೆ ಸಂಕರವಾಗುವಂತೆ ಮಾಡಿತು. ಪಾಶ್ಚಾತ್ಯ ಗುಣಾತ್ಮಕ ಅಂಶಗಳನ್ನು ತನ್ನ ಪರಂಪರೆಯೊಂದಿಗೆ ಮುಂದುವರಿಸಿಕೊಂಡು ಹೋಗುವ ನೆಲೆಯಲ್ಲಿ ಸಾಂಸ್ಕೃತಿಕ ಪರಿಸರವು ನಿರ್ಮಾಣವಾಯಿತು. ಕೈಗಾರಿಕಾ ಸಂಸ್ಕೃತಿಯ ನಿಲುವು ಹಾಗೂ ಧೋರಣೆಗಳು ಮತ್ತು ಭಾರತೀಯ ಕೃಷಿ ಪರಂಪರೆಯ ನಡುವಿನ ಸಂಘರ್ಷಗಳೂ ಸಾಹಿತ್ಯದ ಅಭಿವ್ಯಕ್ತಿಯನ್ನು ನಿರ್ಮಾಣ ಮಾಡಿದವು. ಕುವೆಂಪು, ಮಾಸ್ತಿ, ಬಾಗಲೋಡಿ ದೇವರಾಯರಂತಹ ಕತೆಗಾರರು ಸ್ಥಳೀಯ ಹಾಗೂ ನಗರ ಲೋಕವನ್ನು ಮುಖಾಮುಖಿಯಾಗಿಸುವ ಕಥನ ತಾತ್ವಿಕತೆಯನ್ನು ರೂಪಿಸಿದನ್ನು ಗುರುತಿಸಬಹುದು.

ಕೈಗಾರಿಕೆ ಪರಿಸರವು ಅಸ್ತಿತ್ವವನ್ನು ಪಡೆದ ಮೇಲೆ ಕಾರ್ಮಿಕವೆಂಬ ದುಡಿಯುವ ವರ್ಗವು ರೂಪುಗೊಂಡಿತು. ಈ ಕಾರ್ಮಿಕ ವರ್ಗವು ಪಶ್ಚಿಮದ ಜೀವನ ಶೈಲಿಯನ್ನು ಮೈಗೂಡಿಸಿಕೊಂಡಿತ್ತಲ್ಲದೆ ತನ್ನ ಸ್ಥಳೀಯ ಬದುಕಿನಲ್ಲಿ ಇದ್ದ ಜಾತಿ, ಧರ್ಮ, ಮೌಲ್ಯ ಸಂಪ್ರದಾಯದಂತಹ ಸಾಮಾಜಿಕ ವ್ಯವಸ್ಥೆಯನ್ನು ನಿರಾಕರಿಸಿತು. ಹೊಸ ಜೀವನ ಮಾದರಿಯನ್ನು ಅಪ್ಪಿಕೊಂಡು ಬದುಕಲಾರಂಭಿಸಿತು. ಆದರೆ ಈ ಹೊಸದಾರಿಯು ಯಶಸ್ವಿಯಾಗಿ ರೂಪುಗೊಳ್ಳಲಿಲ್ಲ. ಅನೇಕ ಅಡೆ ತಡೆಗಳು ಸಾಮಾಜಿಕ, ಸಾಂಸ್ಕೃತಿಕವಾಗಿ ರೂಪುಗೊಂಡವು. ಈ ಕಾರ್ಮಿಕ ಸಮುದಾಯ ಪಶ್ಚಿಮದ ಜೀವನ ಕ್ರಮದಲ್ಲಿ ಮುಂದುವರಿಯಲು ಆಗದೆ ಭಾರತೀಯ ಸಾಂಪ್ರದಾಯಿಕ ಜೀವನ ಮಾದರಿಗೂ ವಾಪಸ್ಸು,

ಬರಲಾಗದ ಇಬ್ಬಂಧಿತನವನ್ನು ಎದುರಿಸಬೇಕಾದ ಸ್ಥಿತಿ ನಿರ್ಮಾಣವಾಯಿತು. ಇಂತಹ ಸಂದರ್ಭವು ಕನ್ನಡ ಕತೆಗಳ ಅಭಿವ್ಯಕ್ತಿಗೆ ಮಾದರಿಯನ್ನು ನಿರ್ಮಿಸಿತು.

ವಸಾಹತುಶಾಹಿಯು ತಾನು ಕೈಗಾರಿಕೆಯ ಮೂಲಕ ಉತ್ಪಾದಿಸಿದ ವಸ್ತುಗಳನ್ನು ಭಾರತದಲ್ಲಿ ವ್ಯಾಪಾರ ಮಾಡುವ ಉದ್ದೇಶವನ್ನು ಹೊಂದಿತಲ್ಲದೆ ಭಾರತವನ್ನು ತನ್ನ ಉತ್ಪಾದಿತ ವಸ್ತುಗಳಿಗೆ ಮಾರುಕಟ್ಟೆಯನ್ನಾಗಿ ನಿರ್ಮಿಸಿತು. ಈ ಸಂದರ್ಭದಲ್ಲಿ ಸ್ಥಳೀಯ ಉತ್ಪನ್ನಗಳಿಗೆ ತೆರಿಗೆಯನ್ನು ವಿಧಿಸಿತಲ್ಲದೆ ಈ ಸಂದರ್ಭದಲ್ಲಿ ದೇಶೀಯ ಗೃಹ ಕೈಗಾರಿಕೆಗಳು ಹಾಗೂ ದೇಶಿಯ ಮಾರುಕಟ್ಟೆಯು ನೆಲಕಚ್ಚುವಂತಹ ಸ್ಥಿತಿ ಉಂಟಾಯಿತು. ಸಣ್ಣ ಪ್ರಮಾಣದ ಮತ್ತು ಗುಡಿ ಕೈಗಾರಿಕೆಗಳು ಅವನತಿಯ ಅಂಚಿಗೆ ಸರಿಯಲು ಯುರೋಪಿನ ಕೈಗಾರಿಕಾ ಬಂಡವಾಳವೇ ಮೂಲ ಕಾರಣ. ಯುರೋಪಿನ ಬಂಡವಾಳವು ಭಾರತೀಯ ಅರ್ಥವ್ಯವಸ್ಥೆಯ ಮೇಲೆ ಹೆಚ್ಚಿನ ಹಿಡಿತ ಸಾಧಿಸಿದ್ದೇ ಅಲ್ಲದೆ ಅದನ್ನು ಛಿದ್ರಗೊಳಿಸಿತು. ಕೈಗಾರಿಕಾ ಕ್ರಾಂತಿಯ ನಂತರ ಸ್ಥಳೀಯ ಕೈಗಾರಿಕೆಗಳು ಮೂಲೆಗುಂಪಾಗಿ ಅವುಗಳಲ್ಲಿ ಕೆಲಸ ಮಾಡುತ್ತಿದ್ದ ಕುಶಲಕರ್ಮಿಗಳು ನಿರುದ್ಯೋಗಿಗಳಾಗುವಂತಾಯಿತು.[೬] ವಸಾಹತು ಶಾಹಿಗೆ ಪ್ರತಿಯಾಗಿ ದೇಶಿಯ ಸತ್ವವನ್ನು ಒಟ್ಟುಗೂಡಿಸುವ ಮೂಲಕ ಸ್ವಾತಂತ್ರ್ಯ ಹೋರಾಟದ ನೆಲೆಗಳು ಗಾಂಧೀಜಿಯಂತಹ ನಾಯಕರಿಂದ ಆರಂಭವಾಗಿ ವಸಾಹತು ಶಾಹಿಯ ವಸ್ತುಗಳನ್ನು ನಿರಾಕರಿಸುವ ಹಾಗೂ ಗೃಹ ಕೈಗಾರಿಕೆಯ ಸ್ಥಳೀಯ ವಸ್ತುಗಳನ್ನು ಬಳಸುವಂತಹ ಸ್ವದೇಶಿ ಚಿಂತನೆಗಳು ಹುಟ್ಟಿಕೊಂಡವು. ಸ್ವಾತಂತ್ರ್ಯ ಹೋರಾಟದ ದೇಶಿಯ ಪ್ರಜ್ಞೆಯ ಭಾಗವಾಗಿಯೇ ಕನ್ನಡದಲ್ಲಿ ಕತೆಗಳು ಜೀವ ಪಡೆಯಲು ಆರಂಭವಾಯಿತು. ಶಾಂತರಸ, ಬಾಗಲೋಡಿ ದೇವರಾಯ, ಸೇಡಿಯಾಪು ಕೃಷ್ಣ ಭಟ್ಟರಂತಹ ಕತೆಗಾರರು ಇಂತಹ ಸಂದರ್ಭವನ್ನು ಅಭಿವ್ಯಕ್ತಿಸುತ್ತಾರೆ.

ವಸಾಹತುಶಾಹಿಯು ಭಾರತವನ್ನು ಸಂಪೂರ್ಣವಾಗಿ ತನ್ನ ನಿಯಂತ್ರಣದಲ್ಲಿ ಇಟ್ಟುಕೊಳ್ಳುವ ಹಾಗೂ ಪಾಶ್ಚಾತ್ಯವಾಗಿಸುವ ಉದ್ದೇಶದಿಂದ ಭಾರತದ ಕೃಷಿ ವ್ಯವಸ್ಥೆಯನ್ನು ವಾಣಿಜ್ಯೀಕರಣಕ್ಕೆ ಪಲ್ಲಟಿಸಲು ಪ್ರಯತ್ನಿಸಿತು. ಇದರ ಹಿಂದಿನ ವಸಾಹತುಶಾಹಿಯ ಉದ್ದೇಶವು ಕೈಗಾರಿಕೆಗಳಿಗೆ ಕಚ್ಚಾವಸ್ತು ಪೂರೈಕೆ ಮಾಡುವ ಉದ್ದೇಶದಿಂದ ಕೃಷಿ ವ್ಯವಸ್ಥೆಗೆ ವಾಣಿಜ್ಯ ಬೆಳೆಗಳನ್ನು ಪರಿಚಯಿಸಿತು. ಕೃಷಿಯ ವಾಣಿಜ್ಯೀಕರಣವು ಬಂಡವಾಳಶಾಹಿತ್ವವನ್ನು

---

೬ ಮೋಹನ ಕೃಷ್ಣ ರೈ, ವಸಾಹತುಶಾಹಿ ಮತ್ತು ನಗರೀಕರಣ, ಪುಟ–೫೩

ಹುಟ್ಟುಹಾಕುವ ಮೂಲಕ ಕೈಗಾರಿಕಾ ಕೇಂದ್ರಿತ ಕೃಷಿ ವ್ಯವಸ್ಥೆ ರೂಪುಗೊಂಡಿತು. ಪಶ್ಚಿಮ ಘಟ್ಟದ ದಟ್ಟ ಅರಣ್ಯ ಪ್ರದೇಶವು ರಬ್ಬರ್, ಕಾಫಿ, ಟೀ ತೋಟಗಳಾಗಿ ಪರಿವರ್ತನೆಯಾದವು. ಈ ಪರಿವರ್ತನೆಯು ಸ್ಥಳೀಯ ಪ್ರಾಣಿ ಸಂಕುಲವನ್ನು, ಗಿಡ ಮರ ಔಷಧಿ ಸಂಪತ್ತನ್ನು ನಾಶ ಮಾಡಿತ್ತಲ್ಲದೆ ಕೃಷಿ ಬದುಕಿನೊಂದಿಗಿನ ಭಾವನಾತ್ಮಕ ಸಂಬಂಧವು ಕಳೆದು ವ್ಯವಹಾರಿಕ ಸಂಬಂಧವು ರೂಪುಗೊಂಡಿತು. ಈ ಬಗೆಯ ಬೆಳವಣಿಗೆಯು ಕೃಷಿ ಪರಂಪರೆಯೊಳಗೆ ಕೈಗಾರಿಕಾ, ಯಾಂತ್ರಿಕ ಉಪಕರಣಗಳ ಪ್ರವೇಶ ಪಡೆದಿದ್ದರಿಂದ ಹೊಸದಾದ ಸಾಂಸ್ಕೃತಿಕ ಪ್ರಜ್ಞೆಯು ಹುಟ್ಟಿಕೊಂಡಿತು. ಈ ಪ್ರಜ್ಞೆಯ ಮೊದಲ ತಲೆಮಾರಿನ ಕತೆಗಾರರ ಅಭಿವ್ಯಕ್ತಿಯ ಭಾಗವಾಯಿತು ಎನ್ನಬಹುದು.

ವಸಾಹತುಶಾಹಿಯು ವಿಜ್ಞಾನ ಮತ್ತು ಪಾಶ್ಚಾತ್ಯ ಸಾಹಿತ್ಯವನ್ನು ವಸಾಹತುವಿನ ಮೇಲೆ ಪ್ರಯೋಗಿಸಿತು. ಶಿಕ್ಷಣದ ನೆಲೆಯಲ್ಲಿ ಭಾರತವನ್ನು ಪ್ರವೇಶ ಪಡೆದ ವಿಜ್ಞಾನವೆಂಬ ಲೋಕ ಗ್ರಹಿಕೆಯು ಭಾರತೀಯ ಚಿಂತನಾ ಕ್ರಮವನ್ನೆ ಬದಲಾಯಿಸಿತು. ಭಾರತೀಯ ಚಿಂತನಾ ಕ್ರಮವು ಧರ್ಮ ಹಾಗೂ ಮೌಲ್ಯದ ನೆಲೆಯಿಂದ ರೂಪುಗೊಂಡಿದ್ದು ಯಾವಾಗ ವೈಜ್ಞಾನಿಕವಾದ, ಭೌತಿಕ ಚಿಂತನೆಯು ವಿಜ್ಞಾನ ಎಂಬ ಪಾಶ್ಚಾತ್ಯ ಚಿಂತನಾ ಕ್ರಮದ ಮೂಲಕ ನಮ್ಮೊಳಗೆ ಸೇರಿಕೊಂಡ ಮೇಲೆ ಯುವ ಸಮುದಾಯವು ಅತ್ಯಂತ ನಿಷ್ಠೆಯಿಂದ ವಿಜ್ಞಾನದ ಜ್ಞಾನ ಪರೆಯನ್ನು ಒಪ್ಪಿಕೊಂಡಿತು. ಈ ನಡುವೆ ಎಲ್ಲಾ ಭಾರತೀಯನ ಚಿಂತನೆಯನ್ನು ಕಾರ್ಯ-ಕಾರಣ ಸಂಬಂಧದ ನೆಲೆಯಲ್ಲಿ ಗ್ರಹಿಸುವ ದೃಷ್ಟಿಕೋನವು ಹುಟ್ಟಿಕೊಂಡಿತು. ಈ ವೈಜ್ಞಾನಿಕ ಲೋಕ ಜ್ಞಾನವು ಭಾರತೀಯ ನಂಬಿಕೆ, ಆಚಾರ, ಜೀವನ ಮೌಲ್ಯ, ಆದರ್ಶ, ಪರಂಪರೆ ಹಾಗೂ ಧಾರ್ಮಿಕ ಮೀಮಾಂಸೆಯನ್ನು ಪ್ರಶ್ನಿಸುವ ನೆಲೆಯಲ್ಲಿ ಅವಮಾನಿಸಿತು ಹಾಗೂ ಸತ್ವಹೀನಯಾಗಿಸಿತು.

ಭಾರತೀಯ ಸಮುದಾಯವು ವಿಜ್ಞಾನವೆಂಬ ಚಿಂತನ ಕ್ರಮವನ್ನು ಭಿನ್ನರೀತಿಯಲ್ಲಿ ಅನುಸಂಧಾನಕ್ಕೆ ಒಳಗು ಮಾಡಿತು. ಅವುಗಳೆಂದರೆ ೧. ಭಾರತೀಯ ಸಂಸ್ಕೃತಿ, ಧರ್ಮ, ನಂಬಿಕೆ, ಜೀವನ ಮೌಲ್ಯ, ಆದರ್ಶಗಳನ್ನು ಪ್ರಧಾನವೆಂದು ಭಾವಿಸುವ ಮೂಲಕ ವೈಜ್ಞಾನಿಕ ಚಿಂತನೆಯನ್ನು ವಿಜ್ಞಾನದ ಲೋಕ ದೃಷ್ಟಿಯನ್ನು ನಿರಾಕರಿಸಿತು. ೨.ಪಾಶ್ಚಾತ್ಯ ವಿಜ್ಞಾನದ ಮೀಮಾಂಸೆಯನ್ನು ಒಪ್ಪಿಕೊಂಡು ಪಾಲಿಸತೊಡಗಿತು. ೩.ಭಾರತೀಯ ಸಂಸ್ಕೃತಿಯ ಉತ್ತಮ ಅಂಶವನ್ನು ನಿರಾಕರಿಸದೆ, ವಸಾಹತುಶಾಹಿಯು ವಿಜ್ಞಾನದ ನೆಲೆಯಲ್ಲಿ ರೂಪಿಸಿದ ಉತ್ತಮ ಚಿಂತನಾ ಕ್ರಮವನ್ನು ಒಪ್ಪಿಕೊಂಡು ಮುಂದುವರಿಯಿತು. ಮುಖ್ಯವಾಗಿ ಬಂಗಾಲದ ಸಂರ್ಭದಲ್ಲಿ ರವೀಂದ್ರನಾಥ ಟಾಗೂರು, ಕನ್ನಡದ ಸಂದರ್ಭದಲ್ಲಿ ಕುವೆಂಪು

ಇತ್ಯಾದಿ ಚಿಂತಕರು, ಪಾಶ್ಚಾತ್ಯ ವಿಜ್ಞಾನದ ಮೀಮಾಂಸೆ ಹಾಗೂ ಭಾರತೀಯ ಜೀವನ ಮೀಮಾಂಸೆಯೊಂದಿಗಿನ ತಿಕ್ಕಾಟ, ವಾದ-ವಿವಾದಗಳು ಹೊಸದಾದ ತಾತ್ವಿಕ ನಿಲುವುಗಳನ್ನು ಹುಟ್ಟು ಹಾಕಿತು. ಈ ನಿಲುವುಗಳು ಕನ್ನಡದ ಕತೆಗಾರರಲ್ಲಿ ಕತೆಯ ಅಭಿವ್ಯಕ್ತಿಯನ್ನು ನಿರ್ಮಾಣ ಮಾಡಿತು.

ವಸಾಹತುಶಾಹಿಯು ರೂಪಿಸಿದ ಶಿಕ್ಷಣದ ಮೂಲಕ ಪ್ರವೇಶ ಪಡೆದ ಪಶ್ಚಿಮದ ಸಾಹಿತ್ಯವು ಭಾರತೀಯರಲ್ಲಿ ಹೊಸ ಗ್ರಹಿಕೆಯನ್ನು, ಲೋಕ ದೃಷ್ಟಿಯನ್ನು ನಿರ್ಮಾಣ ಮಾಡಿತು. ಪಾಶ್ಚಾತ್ಯ ಸಾಹಿತ್ಯದ ಭಾಗವಾದ ಸಣ್ಣಕತೆ, ಕಾವ್ಯ, ವಿಮರ್ಶೆ, ಪ್ರಬಂಧ, ಕಾದಂಬರಿ ಇತ್ಯಾದಿಗಳಲ್ಲದೆ, ಉದಾರವಾದ, ವೈಯಕ್ತಿಕ ಅಭಿವ್ಯಕ್ತಿ, ವ್ಯಕ್ತಿ ಸ್ವಾತಂತ್ರ್ಯ, ಲೌಕಿಕ ಲೋಕ ದೃಷ್ಟಿಯನ್ನು ಸಾಹಿತ್ಯದ ವಿಚಾರ ಪ್ರಜ್ಞೆಯಾಗಿ ಕನ್ನಡದ ಸಾಹಿತ್ಯ ಪರಿಸರಕ್ಕೆ ಪರಿಚಯವಾಯಿತು. ಪಶ್ಚಿಮದ ಸಾಹಿತ್ಯ ಮಾದರಿ. ತಾತ್ವಿಕ ನೆಲೆಗಳನ್ನು ಕನ್ನಡದ ಮನಸ್ಸುಗಳು ಅಧ್ಯಯನಕ್ಕೆ ಒಳಪಡಿಸಿದವಲ್ಲದೆ, ತನ್ನ ಮನಸ್ಸಿನೊಳಗೆ ಇಳಿಸಿಕೊಂಡು ಕರಗಿಸಿಕೊಂಡವು ಮತ್ತು ಹೊಸ ಸಾಹಿತ್ಯ ಮಾದರಿ ಮತ್ತು ಭೂಮಿಕೆಯು ಕನ್ನಡದ ಬರಹಗಾರರಿಗೆ ಪ್ರೇರಣೆಯನ್ನು ಒಂದು ಕಡೆ ಹೀಗೆ ಬರೆಯುತ್ತಾರೆ "ಪಶ್ಚಿಮದ ಸಾಹಿತ್ಯವು ಭಾರತೀಯರಲ್ಲಿ ಅಭಿವ್ಯಕ್ತಿ, ವೈಯಕ್ತಿಕ ವಿಚಾರ ಸರಣಿ, ಲೌಕಿಕ ದೃಷ್ಟಿಯ ವಾಸ್ತವಿಕ ಪ್ರಜ್ಞೆ ಒಡಮೂಡುವಂತೆ ಮಾಡಿತು. ಇದೆ ಕನ್ನಡದಲ್ಲಿ ಹೊಸ ಮಾದರಿಯ ಸಾಹಿತ್ಯ ಹುಟ್ಟಲು ಪ್ರೇರಣೆಯಾಯಿತು" ಎನ್ನುವ ಮಾತನ್ನು ಈ ಸಂದರ್ಭದಲ್ಲಿ ಗುರುತಿಸಬಹುದು. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಪಶ್ಚಿಮದ ಸಾಹಿತ್ಯ ಮಾದರಿಗಳು ಕೆಲವೊಂದು ಬಲವಾಗಿ ಬೆಳೆದಿರಲಿಲ್ಲ. ಈ ರೀತಿಯ ಗೈರು ಪರಿಸ್ಥಿತಿಯಲ್ಲಿ ಪಶ್ಚಿಮದ ಸಾಹಿತ್ಯ ಮಾದರಿ ಹಾಗೂ ವಿಚಾರವನ್ನು ಅನುಕರಿಸುವಂತೆ ಮಾಡಿತು. ಪಶ್ಚಿಮದ ಸಾಹಿತ್ಯದ ಅಧ್ಯಯನ ಮತ್ತು ಅನುಕರಣೆಯಂತಹ ಸಂದರ್ಭವು ಕನ್ನಡದಲ್ಲಿ ಹೊಸ ಬಗೆಯ ಅನೇಕ ಸಾಹಿತ್ಯ ಪ್ರಕಾರವನ್ನು ಹುಟ್ಟುಹಾಕಿತು. ಇದರಲ್ಲಿ ಸಣ್ಣ ಕತೆಯೂ ಒಂದು.

ವಸಾಹತುಶಾಹಿಯು ಭಾರತದಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿದೆ. ತನ್ನ ಆಡಳಿತಾತ್ಮಕ ನಿಲುವುಗಳಿಂದ ಯುದ್ಧ ಮತ್ತು ಒಪ್ಪಂದಗಳಿಂದ ಸಾಮ್ರಾಜ್ಯವನ್ನು ವಿಸ್ತರಿಸಿ ಸ್ಥಳೀಯ ರಾಜ್ಯವನ್ನು ಆಕ್ರಮಿಸಿಕೊಂಡು ದೀರ್ಘಕಾಲ ಪ್ರಭುತ್ವವನ್ನು ಸಾಧಿಸಲು ಅನೇಕ ಪಶ್ಚಿಮದ ಆಡಳಿತೆಯ ನಿಲುವುಗಳನ್ನು ಭಾರತದಲ್ಲಿ ಪ್ರಯೋಗಿಸಿತು. 'ಏಕರೂಪದ ಆಡಳಿತ ವ್ಯವಸ್ಥೆ, ಏಕರೂಪದ ಕಾನೂನು, ಸಹಾಯ ಸೈನ್ಯ ಪದ್ಧತಿ, ದತ್ತು ಪುತ್ರರಿಗೆ ಹಕ್ಕಿಲ್ಲ ಕಾಯಿದೆ, ಖಾಯಂ ಜಮೀನ್ದಾರಿ ಪದ್ಧತಿ, ದೇಶಿಯ ಪತ್ರಿಕಾ ಕಾಯ್ದೆ, ಆಧುನಿಕ ಶಿಕ್ಷಣದ ಕಾಯ್ದೆ,

ಸತಿ ಹಾಗೂ ಬಾಲ್ಯವಿವಾಹ ನಿಷೇಧ ಕಾಯಿದೆ ಇತ್ಯಾದಿಗಳು ವಸಾಹತುಶಾಹಿಯ ರಾಜಕೀಯ ರಾಜ ಪರಂಪರೆಯನ್ನು ಶಕ್ತಿಹೀನವಾಗಿಸಿತು. ಈ ನಡುವೆ ಭಾರತೀಯ ರಾಜಕೀಯ ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ ಭಾರಿ ಪ್ರಮಾಣದ ಪಲ್ಲಟಗಳು ಹುಟ್ಟಿಕೊಂಡವು.

ಭಾರತೀಯರಲ್ಲಿ ಬ್ರಾಹ್ಮಣ ವರ್ಗವು ಹಿಂದು ಧರ್ಮ, ಆಚಾರ, ನಂಬಿಕೆ, ಪರಂಪರೆಗಳಲ್ಲಿ ಅತಿಯಾದ ಬದ್ಧತೆಯನ್ನು ಇಟ್ಟುಕೊಂಡು ಬದುಕುತಿತ್ತು. ವರ್ಣ ಶ್ರೇಷ್ಠತೆ, ಮಡಿ–ಮೈಲಿಗೆ, ಬಾಲ್ಯವಿವಾಹ, ಸತಿಪದ್ಧತಿ, ವಿಧವಾ ವಿವಾಹ ನಿಷೇಧ ಇತ್ಯಾದಿ ಪದ್ಧತಿಗಳು ಧರ್ಮದ ಭಾಗವಾಗಿ, ಜೀವನದ ಆದರ್ಶಗಳಂತೆ ಅನುಸರಣಿಕೆಯಲ್ಲಿ ಮುಂದುವರಿದು ಕೊಂಡು ಬಂದಿದ್ದವು. ಯಾವಾಗ ವಸಾಹತುಶಾಹಿ ಈ ಪದ್ಧತಿಗಳನ್ನು ಹೀನವಾಗಿ ಕಾಣುವ ಜೊತೆಯಲ್ಲಿ ಕೆಲವೊಂದಕ್ಕೆ ಪದ್ಧತಿಯ ಮೇಲೆ ಕಾನೂನಿನ ನೆಲೆಯಲ್ಲಿ ನಿಷೇಧವನ್ನು ಹೇರಿತೋ ಈ ಸಂದರ್ಭದಲ್ಲಿ ಬ್ರಾಹ್ಮಣ ಸಮುದಾಯಕ್ಕೆ ತನ್ನ ಮೂಲ ಸತ್ವವಾಗಿರುವ ಪರಂಪರೆಯನ್ನು ಬಿಡಲು ಸಾಧ್ಯವಾಗಲಿಲ್ಲ. ಈ ಇಕ್ಕಟ್ಟಿನ ಪರಿಸ್ಥಿತಿಯು ವಸಾಹತುಶಾಹಿಯ ನಡುವೆ ಸಂಘರ್ಷವನ್ನು ನಿರ್ಮಾಣ ಮಾಡಿತು. ಈ ಸಂಘರ್ಷದಲ್ಲಿ ವಸಾಹತು ಶಾಹಿಯೊಂದಿಗೆ ತಾತ್ವಿಕವಾಗಿ ಗೆಲ್ಲಬೇಕಾದರೆ ತಮ್ಮ ಧರ್ಮ, ಆಚಾರ, ಭಾಷೆ, ಜೀವನ ಆದರ್ಶ, ಸಾಂಸ್ಕೃತಿಕ ಪರಂಪರೆಯನ್ನು ಶ್ರೇಷ್ಠವೆಂದು, ಅಮೂಲ್ಯ ವಾದದೆಂಬ ಭಾವನೆಯನ್ನು ಭಾರತೀಯರಲ್ಲಿ ಮೂಡಿಸಬೇಕಾಯಿತು. ಬ್ರಾಹ್ಮಣ ಸಂಸ್ಕೃತಿ ಪರಂಪರೆಯು ಕಳೆದು ಹೋಗುತ್ತಿರುವ ಬಗೆಯನ್ನು ತನ್ನ ಸಮುದಾಯದ ಜನರಿಗೆ ತಿಳಿಸಬೇಕಾದ ಅಗತ್ಯ ಹುಟ್ಟಿಕೊಂಡಿತು. ಈ ರೀತಿಯ ಸನ್ನಿವೇಶವು ಬ್ರಾಹ್ಮಣ ಕತೆಗಾರರನ್ನು ನಿರ್ಮಾಣ ಮಾಡಿತಲ್ಲದೆ ತಮ್ಮ ಸಾಂಸ್ಕೃತಿಕ ಪರಂಪರೆಯನ್ನು ಗುಣಾತ್ಮಕವೆಂದ ಕತೆಗಳ ಮೂಲಕ ಅಭಿವ್ಯಕ್ತಿಸಲು ಆರಂಭಿಸಿದರು.

ವಸಾಹತುಶಾಹಿಯನ್ನು ಭಾರತದಲ್ಲಿ ನೆಲೆನಿಲ್ಲಿಸಿದ ಏಕರೀತಿಯ ಕಾನೂನು ಹಾಗೂ ಕೋರ್ಟು ಎಂಬ ನ್ಯಾಯಿಕ ವ್ಯವಸ್ಥೆಯು ಭಾರತೀಯರ ಪರಂಪರಾಗತವಾದ ಬಹುನೆಲೆಯ ನ್ಯಾಯಿಕ ನೆಲೆಯನ್ನು ನಿರಾಕರಿಸಿತು. ಆದರೆ ವಸಾಹತುಶಾಹಿಯ ನ್ಯಾಯಾಂಗ ವ್ಯವಸ್ಥೆಯ ಮಿತಿಗಳು ಭಾರತೀಯರ ಸ್ವಾಭಿಮಾನಕ್ಕೆ ಜೀವನ ತತ್ವಕ್ಕೆ ಧಕ್ಕೆ ಉಂಟು ಮಾಡಿತು. ಇದರ ಫಲವಾಗಿಯೇ ಭಾರತೀಯ ಮನಸ್ಸುಗಳು ತಮ್ಮ ಸ್ಥಳೀಯ ಬದುಕಿನ ಪ್ರಜ್ಞೆಯನ್ನೆ ವಸಾಹತುಶಾಹಿಯ ಧೋರಣೆಗೆ ಮುಖಾಮುಖಿಯಾಗಿಸಲು ಆರಂಭಿಸಿದರು. ಈ ರೀತಿ ವಸಾಹತುಶಾಹಿಗೆ ಪ್ರತಿಯಾಗಿ ಭಾರತೀಯ ನೆಲದ ನ್ಯಾಯ ಪರಂಪರೆಯನ್ನು ನಿರೂಪಿಸಲು

ಕತೆ ಎಂಬ ಅಸ್ತ್ರವನ್ನು ಬಳಸಿಕೊಂಡರು. ಮಾಸ್ತಿಯವರ 'ಜೋಗ್ಯೋಂ ಅಂಜಪ್ಪನ ಕೋಳಿ ಕತೆ'ಯಂತಹ ಕತೆಗಳನ್ನು ಗುರುತಿಸಬಹುದು. ವಸಾಹತುಶಾಹಿಯ ಕಾನೂನು ಹಾಗೂ ನ್ಯಾಯಿಕ ವ್ಯವಸ್ಥೆಯ ಫಲವಾಗಿ ರೂಪುಗೊಂಡ ಪರಿಸರವು ಕನ್ನಡ ಕತೆಗಳ ಉಗಮಕ್ಕೆ ನಾಂದಿಯಾಯಿತು.

ಕೈಗಾರಿಕೆಯ ಬೆಳವಣಿಗೆ ಹಾಗೂ ವಸಾಹತುಶಾಹಿಯ ಧೋರಣೆಯ ಬಲಿಷ್ಠವಾದ ನೆಲೆಯನ್ನು ಒದಗಿಸುವ ಸಲುವಾಗಿ ವಸಾಹತುಶಾಹಿಯು ಅಭಿವೃದ್ಧಿ ಎಂಬ ಹಣೆಪಟ್ಟಿಯ ಮೂಲಕ ಭಾರತದ ಸಂಪತ್ತನ್ನು, ಧಾರ್ಮಿಕವಾಗಿ ಪವಿತ್ರವೆಂದು ಕರೆಯುವ ಪರಿಕರವನ್ನು ನಾಶಮಾಡುತ್ತ ಹಾಗೂ ತನ್ನ ದೇಶದ ಭಾಗವಾಗಿಸಿಕೊಳ್ಳುವುದರ ಕಡೆಗೆ ಹೆಜ್ಜೆ ಹಾಕಿದರು ಈ ರೀತಿಯ ವಸಾಹತುಶಾಹಿಯ ಧೋರಣೆಯು ಭಾರತೀಯರಲ್ಲಿ ಸ್ಥಳೀಯ ಸಂಪತ್ತಿನ ಬಗ್ಗೆ ನಮ್ಮದೆಂಬ ಪ್ರಜ್ಞೆ ಹುಟ್ಟಿಕೊಂಡಿತು. ವಸಾಹತುಶಾಹಿಯ ವಿರುದ್ಧವಾಗಿ ಭಾರತೀಯರು ಚಳುವಳಿಯನ್ನು ರೂಪಿಸುವ ಭಾಗವಾಗಿ ನಾವು ಭಾರತೀಯರು, ನಮ್ಮ ದೇಶ ಭಾರತ, ಈ ಸಂಪತ್ತು ನಮ್ಮದು ಎಂಬ ತಿಳುವಳಿಯು ಹುಟ್ಟಿಕೊಂಡಿತು. ಈ ನೆಲೆಯ ಅಭಿವ್ಯಕ್ತಿಯು ಮೊದಲ ತಲೆಮಾರಿನ ಕತೆಗಾರ ತಾತ್ವಿಕ ನೆಲೆಯಾಗಿ ರೂಪಿತಗೊಳ್ಳುತ್ತದೆ. ಸೇಡಿಯಾಪು ಕೃಷ್ಣ ಭಟ್ಟರ 'ನಾಗರಬೆತ್ತ', ಮಾಸ್ತಿಯವರ 'ಮಸುಮತ್ತಿ' ಇತ್ಯಾದಿ ಕತೆಯ ಮೀಮಾಂಸೆಯನ್ನು ಅಭಿವೃದ್ಧಿ ಎಂಬ ವಸಾಹತುಶಾಹಿಯ ಧೋರಣೆಯ ಭಾಗವಾಗಿ ನೋಡಬಹುದು.

ಭಾರತದ ಚರಿತ್ರೆಯನ್ನು ಅರ್ಥ ಮಾಡಿಕೊಳ್ಳುವುದು ವಸಾಹತುಶಾಹಿಗೆ ಬಹು ಮುಖ್ಯವಾಯಿತು. ಈ ನೆಲೆಯಿಂದ ಪುರಾತತ್ವ ಎಂಬ ಇಲಾಖೆಯನ್ನು ವಿಲಿಯಂ ಬೆಂಟಿಕ್‌ನ ಕಾಲದಲ್ಲಿ ಸ್ಥಾಪಿಸಿತು. ಈ ಇಲಾಖೆಯ ಉದ್ದೇಶ ಭಾರತದ ಜನಾಂಗೀಯ ರಾಜಕೀಯ, ಸಾಂಸ್ಕೃತಿಕ ಪರಂಪರೆಯನ್ನು ಶೋಧಿಸಿ ಭಾರತದ ಚರಿತ್ರೆಯನ್ನು ಯುರೋಪ್ ಕೇಂದ್ರಿತವಾಗಿ ರೂಪಿಸಿ, ನಿಯಂತ್ರಣ ಸಾಧಿಸುವುದಾಗಿತ್ತು. ಪೌರಾತ್ಯ ಚಿಂತನೆ ಹಾಗೂ ಪುರಾತತ್ವ ಶೋಧದ ನೆಲೆಯಲ್ಲಿ ಪಶ್ಚಿಮದ ವಿದ್ವಾಂಸರಾದ ಕಿಟೆಲ್, ಜೇಮ್ಸ್‌ಮಿಲ್, ಜೆ.ಎಸ್, ಮಿಲ್, ವಿಲಿಯಂ ಜೋನ್ಸ್, ಮುಲ್ಲರ್, ಜೆ.ಎಸ್. ರೈಟ್ಸ್, ಇವರುಗಳು ಭಾರತದ ಅಮೂಲ್ಯ ಸಾಹಿತ್ಯ ಕೃತಿಗಳನ್ನು ಸಂಗ್ರಹ ಮಾಡುವ ಹಾಗೂ ಅನುವಾದ ಮಾಡುವ ಕಡೆಗೆ ಮುಖ ಮಾಡಿದರು. ಈ ಸಾಹಿತ್ಯ ಚಟುವಟಿಕೆಗೆ ದೇಶಿಯ ಪಂಡಿತರನ್ನು ನೇಮಕ ಮಾಡಿಕೊಂಡರು. ಈ ನಡುವೆ ಪಶ್ಚಿಮದ ವಿದ್ವಾಂಸರ ಸಂಶೋಧನೆಯ ಭಾಗವಾಗಿ ಕನ್ನಡ ಭಾಷೆ, ವ್ಯಾಕರಣಕ್ಕೆ ಸಂಬಂಧಿಸಿದ ಬರೆವಣಿಗೆಗಳು ಮುದ್ರಣಗೊಂಡು ಎಲ್ಲಾ ಕಡೆಯಲ್ಲೂ ಪ್ರಸಾರವಾಯಿತು ಹಾಗೂ ಮಾನ್ಯತೆಯು ದೊರೆಯಿತು. ಈ ರೀತಿಯ

ಬೆಳವಣಿಗೆಯು ದೇಶೀಯ ಬರಹಗಾರರಲ್ಲಿ ತಾವು ಬರೆಯಬೇಕೆಂಬ ಒತ್ತಾಸೆ ಉಂಟಾಯಿತು. ಅನೇಕ ಸ್ಥಳೀಯ ವಿದ್ವಾಂಸರು ಈ ಕಾರ್ಯದಲ್ಲಿ ಯಶಸ್ವಿಯಾದರು. ೧೮೨೩ರಲ್ಲಿ ರಚಿತವಾದ ಕೆಂಪುನಾರಾಯಣನ 'ಮುದ್ರಾಮಂಜೂಷ' ಇದಕ್ಕೆ ಪ್ರಮುಖ ಉಲ್ಲೇಖವಾಗಿದೆ.

ಪೌರಾತ್ಯವಾದಿ ಬರಹಗಾರ ಸಾಹಿತ್ಯಿಕ ಶೋಧನೆ, ಅನುವಾದದಂತಹ ಕಾರ್ಯಗಳು ಕನ್ನಡ ವಿದ್ವಾಂಸರ ಉಮೇದನ್ನು ಹುಟ್ಟು ಹಾಕಿತು. ಪಂಜೆ ಮಂಗೇಶರಾಯ, ಗೋವಿಂದ ಪೈ, ಎಸ್.ಜಿ. ನರಸಿಂಹಚಾರ್ಯ, ಬಿ.ಎಂ.ಶ್ರೀ ಇತರರು ಪಶ್ಚಿಮದ ಸಾಹಿತ್ಯದಲ್ಲಿ ರೂಪುಗೊಂಡಿದ್ದ ಅನೇಕ ಮಾದರಿಗಳನ್ನು ಕನ್ನಡ ಸಾಹಿತ್ಯದ ಪರಿಸರಕ್ಕೆ ಅನುವಾದಿಸುವ ಮೂಲಕ ಪರಿಚಯಿಸಿದರು. ಈ ರೀತಿಯ ಕನ್ನಡ ಚಿಂತಕರ ಕಾರ್ಯವು ಅನೇಕ ದೇಶಿ ಬರಹಗಾರರಿಗೆ ಪ್ರೇರಕವಾಯಿತು ಮತ್ತು ಪಾಶ್ಚಾತ್ಯ ಮಾದರಿಯ ಪರಿಚಯವು ಉಂಟಾಯಿತು. ಈ ಬಗ್ಗೆ ಬೆಳವಣಿಗೆಯೇ ಮುಂದೆ ಕಥಾ ಸಾಹಿತ್ಯದ ಹೊಸ ಬೆಳಕು ಹುಟ್ಟಿಕೊಳ್ಳಲು ದಾರಿಯಾಯಿತು.

ವಸಾಹತುಶಾಹಿಯು ತನ್ನ ಪ್ರಭುತ್ವದ ಭಾಗವಾಗಿ ರೂಪಿಸಿದ ಆಡಳಿತ ನಿಲುವು, ಕಾನೂನು, ನ್ಯಾಯಿಕ ವ್ಯವಸ್ಥೆ, ಪಾಶ್ಚಾತ್ಯ ಸಾಹಿತ್ಯ, ಆಧುನಿಕ ಶಿಕ್ಷಣ, ಸಂಶೋಧನೆ, ಕೈಗಾರಿಕೆ, ಸಾರಿಗೆ–ಸಂಪರ್ಕದಂತಹ ಹೊಸ ಮಾರ್ಗಗಳು ವಸಾಹತುವಿನ ಜನರಿಗೆ ಪ್ರಜ್ಞೆಯ ಭಾಗವಾಗಿ ಪರಿಣಮಿಸಿತು. ಈ ಕಾರಣದಿಂದ ಕಥನ ಮಾದರಿಗಳು ಕನ್ನಡದಲ್ಲಿ ರಚನೆಯಾಗಲು ಆರಂಭವಾಯಿತು. ೧೮೫೧ರಲ್ಲಿ ಮಾನವಿ ವೀರಪ್ಪ ೪೦ ಕತೆಗಳ 'ಕಥಾಸಾಗರ'ವನ್ನು ರಚಿಸಿದರು. ೧೮೯೭ರ ಸಂದರ್ಭದಲ್ಲಿ ಹನುಮಂತ ಕೇಶವ ಹುಯಿಲಗೋಳರು 'ಹಾತಿ ಮತಾಯಿ' ಎಂಬ ಕತೆಯು ಕರ್ನಾಟಕ ವೃತ್ತ ಪತ್ರಿಕೆಯಲ್ಲಿ ಪ್ರಕಟಗೊಂಡಿತು. ೧೮೯೧ರ ಕಾಲದಲ್ಲಿ ಬಸಲಿಂಗಪ್ಪ ಅಮರಣ ಅವರ 'ಚಾತುರ್ಯ ಮತ್ತು ನೀತಿವರ್ಧಕ ಎಂಬ ಶೃಂಗಾರ ಹಾಗೂ ನೀತಿಯನ್ನು ಒಳಗೊಂಡ ನಿರೂಪಣ ಮಾದರಿಯ ಕತೆಗಳು ರಚನೆಯಾದವು.

೧೯೦೦ರ ಸಂದರ್ಭಕ್ಕಾಗುವಾಗ ವಸಾಹತುಶಾಹಿ ಧೋರಣೆಯು ಭಾರತದ ಬಹುಪಾಲು ವ್ಯಾಪಿಸಿಕೊಂಡಿತು ಹಾಗೂ ಸ್ವಾತಂತ್ರ್ಯ ಹೋರಾಟವು ಸ್ವದೇಶಿ ಪ್ರಜ್ಞೆಯನ್ನು ಇಟ್ಟುಕೊಂಡು ನಡೆಯುತ್ತಿತ್ತು. ಈ ಸಂದರ್ಭದಲ್ಲಿ ವಸಾಹತುಶಾಹಿಯ ಪ್ರೇರಣೆ ಹಾಗೂ ಪ್ರಭಾವ ನೆಲೆಯಿಂದ ಮೊದಲ ತಲೆಮಾರಿನ ಕತೆಗಳು ಸ್ಥಳೀಯತೆಯನ್ನು ತನ್ನ ಭೂಮಿಕೆಯಾಗಿಸಿಕೊಂಡು ರಚನೆಯಾದವು. ಪಂಜೆ ಮಂಗೇಶರಾಯರ ನನ್ನ ಚಿಕ್ಕ

ತಾಯಿ, 'ನನ್ನ ಚಿಕ್ಕ ತಂದೆ', 'ಕಮಲಪುರದ ಹೋಟೆಲು' ಇತ್ಯಾದಿ ಕತೆಗಳು ಕನ್ನಡ ಕಥಾನಮಾದರಿಗೆ ಹೊಸ ರೂಪವನ್ನು ಕೊಟ್ಟಿತು. ನಂತರದಲ್ಲಿ ಕೆರೂರು ವಾಸುದೇವಾಚಾರ್ಯ, ಗೋವಿಂದ ಪೈ, ಮಾಸ್ತಿ, ಡಿ.ಎಸ್. ಕಾಮತ್, ದೇವುಡು, ಕುವೆಂಪು, ಕಾರಂತ, ಸೇಡಿಯಾಪು ಕೃಷ್ಣ ಭಟ್ಟ, ವಾಣಿ, ಆನಂದ ಮುಂತಾದ ಮೊದಲ ತಲೆಮಾರಿನ ಕತೆಗಾರರು ಕನ್ನಡ ಕಥೆಗಳಿಗೆ ಪರಂಪರೆಯನ್ನು ರೂಪಿಸಿದರು. ಈ ಎಲ್ಲಾ ಕತೆಗಳ ಹಿಂದೆ ವಸಾಹತುಶಾಹಿಯ ಧೋರಣೆಯ ದಟ್ಟವಾದ ಪ್ರಭಾವವಿದೆ ಹಾಗೂ ನಮ್ಮ ಜೀವನ ಮೌಲ್ಯ, ಆದರ್ಶ, ನಂಬಿಕೆ, ನೆಲದ ಕಸುವಿನ ಸಾಂಸ್ಕೃತಿಕ ಪ್ರೇರಣೆಯೂ ಇದೆ ಎಂಬುದನ್ನು ಗುರುತಿಸಬಹುದು.

ಅಧ್ಯಾಯ - ೩

# 'ಸ್ಥಳೀಯತೆ'ಯ ಪರಿಕಲ್ಪನೆಯ ಚರ್ಚೆ

ಕನ್ನಡದ ಮೊದಲ ತಲೆಮಾರಿನ ಕತೆಗಳೆಲ್ಲವೂ ಸ್ಥಳೀಯತೆಯನ್ನು ಪ್ರಧಾನವಾದ ಭೂಮಿಕೆಯಾಗಿಸಿಕೊಂಡಿವೆ. 'ಸ್ಥಳೀಯತೆ' ಎಂಬ ಪದವು ಆಧುನಿಕ ಸಂದರ್ಭದಲ್ಲಿ ಕನ್ನಡ ವಿಮರ್ಶೆಯಲ್ಲಿ ಚರ್ಚೆಗೆ ಒಳಗಾಗುತ್ತಿರುವ ವಿಷಯವಾಗಿದೆ. ನಮ್ಮ ಬದುಕನ್ನು ಕಟ್ಟಿಕೊಳ್ಳುವಾಗ ಆದರ್ಶವನ್ನು ಹೇಳುವ ಮತ್ತು ನಮ್ಮತನದ ಹುಡುಕಾಟದ ಭಾಗವಾಗಿ ಸಾಹಿತ್ಯದಲ್ಲಿ ಸ್ಥಳೀಯತೆಯು ಅಸ್ಮಿತೆಯನ್ನು ಪಡೆದುಕೊಂಡಿದೆ. ದೇಸಿ, ದೇಸೀಯತೆ ಎಂಬ ಪರಿಕಲ್ಪನೆಯ ಸಮಾನವಾದ ಆಡುಮಾತಿನ ಪದವೇ ಸ್ಥಳೀಯತೆ. ಆಧುನಿಕ ಪರಿಸರದಲ್ಲಿ ಸ್ಥಳೀಯತೆಗೆ **'ನೇಟಿವಿಟಿ'** ಎಂಬ ಇಂಗ್ಲಿಷ್ ಪದವನ್ನು ಸಂವಾದಿಯಾಗಿ ಬಳಸಲಾಗಿದೆ. ನೇಟಿವಿಟಿ ಎನ್ನುವ ಆಂಗ್ಲ ಪದವು ಲ್ಯಾಟಿನ್ ಭಾಷೆಯ **'ನೇಟಿವಿಟಸ್'** ಎಂಬ ಮೂಲಪದದಿಂದ ಬಂದಿದೆ. **'ನೇಟಿವಿಟಿ'** ಎಂಬ ಪದವು ಕಾಲ ಹಾಗೂ ಪ್ರದೇಶಕ್ಕೆ ಅನುಗುಣವಾಗಿ ಭಿನ್ನ-ಭಿನ್ನ ಅರ್ಥಸಾಧ್ಯತೆಯನ್ನು ಒಳಗೊಂಡಿದೆ. **'ನೇಟಿವಿಟಿ'** ಪದವು ಸರಿಸುಮಾರು ೧೪ನೇಯ ಶತಮಾನದಲ್ಲಿ ವ್ಯಕ್ತಿಯ ಜನ್ಮ ಸ್ಥಳ ಹಾಗೂ ಸುತ್ತಲಿನ ಪರಿಸರವನ್ನು ನಿರೂಪಿಸುವಾಗ ಬಳಸಲಾಯಿತು. ನಂತರದ ದಿನಮಾನದಲ್ಲಿ ಕ್ರಿಸ್ತನ ಜನನ ಮತ್ತು ಮೂಲ ಸಂಸ್ಕೃತಿಯನ್ನು ನೆನೆಸುವ ಆಚರಣೆಯನ್ನು ಸೂಚಿಸುವಾಗ 'ನೇಟಿವಿಟಿ' ಎಂಬ ಪದವನ್ನು ಮುಖ್ಯವಾಗಿ ಬಳಕೆ ಮಾಡಲಾಯಿತು.

ನೇಟಿವಿಟಿಯು 'ನೇಟಿವಿಸಂ' ಎಂಬ ಪರಿಕಲ್ಪನೆಯಾಗಿ ಚರ್ಚೆಗೆ ಒಳಗಾದ ಮೇಲೆ ವಿಶಾಲವಾದ ವ್ಯಾಪ್ತಿಯನ್ನು, ಅರ್ಥಸಾಧ್ಯತೆಯನ್ನು ಪಡೆದುಕೊಂಡಿತು. ಸ್ಥಳೀಯತೆಯು ನಮ್ಮ ಸಂಸ್ಕೃತಿಯ ಜೀವಾಳವಾಗಿ ಸೃಜನಶೀಲವಾದ ಜೀವನ ಮೀಮಾಂಸೆಯೊಂದಿಗೆ

ಅಸ್ತಿತ್ವವನ್ನು ಪಡೆದುಕೊಂಡಿತ್ತಲ್ಲದೆ ಸಾಹಿತ್ಯ, ವಿಮರ್ಶೆ, ಸಮಾಜ ವಿಜ್ಞಾನ, ರಾಜನೀತಿ, ಕಲೆ, ವಾಸ್ತುಶಿಲ್ಪ ವಿಜ್ಞಾನ, ತಂತ್ರಜ್ಞಾನದಂತಹ ವಲಯದ ಅಭಿವ್ಯಕ್ತಿಯಾಯಿತು. ಸ್ಥಳೀಯತೆ ಎಂಬ ಪದ ಭಿನ್ನ-ಭಿನ್ನವಾದ ಸಮಾಜ ಹಾಗೂ ಸಮುದಾಯದಲ್ಲಿ ಬೇರೆ ಬೇರೆ ಅರ್ಥವನ್ನು ಪರಿಕಲ್ಪನೆಯನ್ನು ಹೊಂದಿದೆ. Oxford English dictionary ಯ ೧೯೭೧ ಆವೃತ್ತಿಯಲ್ಲಿ native ಪದಕ್ಕೆ ಜನಾಂಗೀಯವಾದ ಅರ್ಥವನ್ನು ಸೂಚಿಸಲಾಗಿದೆ.

"The Original or used habitual of a country as distinguished from strangers and foreigners, now especially belonging to a non-european and imperfectly civilized or strange race; a coloured person, black."[೧]

ನೇಟಿವ್ ಎಂದರೆ ಪ್ರಾಚೀನ ಕಾಲದಿಂದಲೂ ಒಂದು ನಿರ್ದಿಷ್ಟ ದೇಶದಲ್ಲಿ ನೆಲೆಯಾಗಿರುವ ಮೂಲವಾಸಿಗಳು ಆದರೆ ಈ ನಿವಾಸಿಗಳನ್ನು ಅತ್ಯಂತ ನೀಚವಾಗಿ ಪರಕೀಯವಾಗಿ ಕಾಣಲಾಗುತ್ತದೆ. ಯುರೋಪ್ ಕೇಂದ್ರಿತ ಜನಾಂಗೀಯ ಚಿಂತನೆಯು ಯುರೋಪ್ ಪ್ರಜೆಯನ್ನು ಬಿಟ್ಟು ಉಳಿದ ಎಲ್ಲರನ್ನು ಅನಾಗರಿಕರೆಂದು, ಕಪ್ಪು ಜನರೆಂದು ವ್ಯಾಖ್ಯಾನಿಸಿತು. ಯುರೋಪಿನಿಂದ ಅಮೆರಿಕ ಹಾಗೂ ಆಫ್ರಿಕಾಕ್ಕೆ ಆಗಮಿಸಿದ ಬಿಳಿಯ ಯುರೋಪಿಗರ ಸ್ಥಳೀಯ ಮೂಲ ನಿವಾಸಿಗಳನ್ನು ಅವರ ಸಂಸ್ಕೃತಿಯನ್ನು ಅನಾಗರಿಕ ಎಂಬ ನೆಲೆಯಿಂದ ನಾಶಪಡಿಸಲು ಆರಂಭಿಸಿತು. ಈ ರೀತಿಯ ಜನಾಂಗೀಯವಾದ ಸಂಘರ್ಷವನ್ನು ನೇಟಿವ್ ಎಂಬ ಪರಿಕಲ್ಪನೆಯಲ್ಲಿ ಚರ್ಚಿಸಲಾಗಿದೆ. ಅಮೆರಿಕದ ಮೂಲ ನಿವಾಸಿಗಳನ್ನು ಅವರ ನಾಗರಿಕತೆಯನ್ನು ನಾಶಮಾಡಿ ಯುರೋಪ್ ಪ್ರಭುತ್ವವನ್ನು ಸಾಧಿಸಿದ ಮೇಲೆ ಅಮೆರಿಕಾದ ಚಿಂತನೆಯು 'ನೇಟಿವಿಸಂ' ಈ ಕೆಳಗಿನಂತೆ ವ್ಯಾಖ್ಯಾನಿಸುತ್ತದೆ.

"In America where the alien white immigrants have wiped out the original civilization. Nativism means the prejudice in favour of natives against strangers, practice or policy of protecting the interest of natives against those of the immigrants" (Nativism) P.237-38.[೨]

---

೧. ಪ್ರೊ. ಸಿ.ಆರ್. ಯರವಿನ ತೆಲಿಮಠ, ದೇಸೀಯತೆ ಮತ್ತು ದೇಶೀವಾದ, ಪು.೯

೨. ಅದೆ ಪುಸ್ತಕ-೧೦

ಮೂಲ ನಿವಾಸಿಗಳ ಪರ ಹಾಗೂ ಅಪರಿಚಿತರ ವಿರುದ್ಧ ಪೂರ್ವಗ್ರಹ, ವಲಸೆ ಹೋದವರ ವಿರುದ್ಧ ಸ್ಥಳೀಯ ಆಸ್ತಿಯನ್ನು ರಕ್ಷಿಸುವ ರೂಢಿ ಅಥವಾ ನೀತಿ ಹೀಗೆ ಪಾಶ್ಚಿಮಾತ್ಯ ಚಿಂತನೆಗಳು ಸ್ಥಳೀಯತೆಯನ್ನು ನಿರೂಪಿಸಿವೆ.

ಭಾರತದಲ್ಲಿ ಸ್ಥಳೀಯತೆಯ ಚಿಂತನೆಯು ಬಹು ವೈಶಿಷ್ಟ್ಯವಾದದ್ದು. ಭಾರತೀಯ ಸಮಾಜ ಜಾತಿ ಶ್ರೇಣೀಕೃತವಾದ ನೆಲೆಯಲ್ಲಿ ವಿನ್ಯಾಸಗೊಂಡಿರುವುದರಿಂದ ಪ್ರತಿಯೊಂದು ಜಾತಿ ಸಮುದಾಯವು ತನ್ನದೇ ಜೀವನ ಮೀಮಾಂಸೆಯನ್ನು ಹೊಂದಿದೆ ಮತ್ತು ಮುಂದುವರಿಸಿಕೊಂಡು ಬರುತ್ತಿದೆ. ಇದೇ ರೀತಿಯಲ್ಲಿ ಭಾರತದಲ್ಲಿ ಆಚರಣೆಯಲ್ಲಿರುವ ಹಿಂದು, ಮುಸ್ಲಿಂ, ಕ್ರಿಸ್ತ, ಜೈನ, ಬೌದ್ಧ, ಪಾರಸಿ, ಸಿಖ್ ಧರ್ಮಗಳು ತಮ್ಮದೆ ಆದ ಪರಂಪರೆಯನ್ನು ಆಯಾ ಪ್ರದೇಶದಲ್ಲಿನ ನೆಲ ಸತ್ವದೊಂದಿಗೆ ಬದುಕು ಕಟ್ಟಿಕೊಂಡಿವೆ. ಹಾಗಾಗಿ ಸ್ಥಳೀಯತೆಯ ಸ್ವರೂಪವು ಭಿನ್ನ-ಭಿನ್ನವಾಗಿದೆ. ಭಾರತವೆನ್ನುವ ರಾಷ್ಟ್ರೀಯತೆಯ ಪರಿಕಲ್ಪನೆ ಹುಟ್ಟಿಕೊಂಡಾಗ ನಾವೆಲ್ಲ ಭಾರತೀಯರು ಎಂಬ ಭಾವನೆ ಹುಟ್ಟಿಕೊಳ್ಳುತ್ತದೆ. ಆದರೆ ಆಂತರ್ಯದಲ್ಲಿ ವೈವಿಧ್ಯಮಯವಾದ ಜೀವನ ಮೀಮಾಂಸೆ ಕಾಣುತ್ತದೆ.

ಪ್ರತಿಯೊಂದು ಸಮುದಾಯವು ತಮ್ಮದೆ ಭಾಷೆ, ಧರ್ಮ, ಉಡುಗೆ, ಆಹಾರ, ರೀತಿ-ನೀತಿ, ಧಾರ್ಮಿಕ-ಸಾಂಸ್ಕೃತಿಕ ಆಚರಣೆಯನ್ನು ಪರಂಪರೆಯಾಗಿ ಉಳಿಸಿಕೊಂಡು ಬದುಕುತ್ತಿವೆ. ಈ ಬದುಕಿನ ಪರಂಪರೆಯು ಕಾಲ ಹಾಗೂ ಪ್ರದೇಶದ ನೆಲೆಯಲ್ಲಿ ಪರಕೀಯ ಸಂಸ್ಕೃತಿಯೊಂದಿಗಿನ ಸಂಕರ, ಸಂಘರ್ಷ ಹಾಗೂ ಪರಕೀಯ ಪ್ರಜ್ಞೆಗೆ ಒಳಪಟ್ಟು ಜಡಸ್ವರೂಪವಾದಾಗ ಸ್ಥಳೀಯತೆ, ದೇಸೀಯತೆ, ದೇಶೀವಾದ ಎಂಬ ಪರಿಕಲ್ಪನೆಗಳು ಅಸ್ತಿತ್ವವನ್ನು ಪಡೆದುಕೊಂಡು ಮೂಲ ಸಂಸ್ಕೃತಿ ಪರಂಪರೆಯನ್ನು ಜೀವನದ ಸತ್ವವನ್ನು ಅಚ್ಚಳಿಯದೆ ಉಳಿಸುವ ಹಾಗೂ ಕಾಪಿಟ್ಟುಕೊಳ್ಳುವ ಕಡೆಗೆ ಮುಖಮಾಡುತ್ತವೆ.

ಸ್ಥಳೀಯತೆಯ ಮುಖ್ಯ ಕಾಳಜಿ ತನ್ನ ಜನರ ಜೀವನ ಮೀಮಾಂಸೆ, ನೆಲ, ಜಲ, ಭಾಷೆ, ಕೃಷಿ, ಸಾಹಿತ್ಯ, ಕಲೆ, ಪರಂಪರೆಯನ್ನು ಪರಕೀಯ ದಾಳಿಯಿಂದ ರಕ್ಷಿಸಿ ತನ್ನ ಅಸ್ತಿತ್ವವನ್ನು ರೂಪಿಸುವುದಾಗಿದೆ. "ಹೊರಗಿನ ಪ್ರಬಲ ಶಕ್ತಿಗಳ ಜೊತೆಗೆ ಹೋರಾಡಲು ಮತ್ತು ತುಳಿತಕ್ಕೆ ಒಳಗಾದ ಸಂಸ್ಕೃತಿಗಳಿಗೆ ನೆರವು ನೀಡುವ ಪರಿಣಾಮಕಾರಿ ಅಸ್ತ್ರ ಈ ದೇಶೀವಾದ ಆಗಿರುತ್ತದೆ ಎಂದು ಪ್ರೊ. ಸಿ.ಆರ್. ಯರವಿನ ತೆಲಮಠ ಹೇಳುತ್ತಾರೆ"[೩]

೩. ಯರವಿನ ತೆಲಮಠ-ಸಿ.ಆರ್. ದೇಸೀಯತೆ ಮತ್ತು ದೇಶೀವಾದ, ಪುಟ-೧೨

ಈ ಮಾತು ಸ್ಥಳೀಯತೆಯ ಸ್ವರೂಪವನ್ನು ಸ್ಪಷ್ಟವಾಗಿ ಗುರುತಿಸುತ್ತದೆ.

ಸ್ಥಳೀಯತೆ ಎಂದರೆ ಒಂದು ಸಮುದಾಯದ ಸಂಸ್ಕೃತಿಯನ್ನು ಗುಣಾತ್ಮಕ ನೆಲೆಯಿಂದ ಅಭಿವ್ಯಕ್ತಿಸುವ ಧೋರಣೆಯಾಗಿದೆ. ಇಲ್ಲಿ ಮುಖ್ಯವಾಗಿ ಒಂದು ಸಮುದಾಯವು ತನ್ನ ನೆಲದ ಕಸುವಿನೊಂದಿಗೆ ಬದುಕುತ್ತಿರುವ ಜೀವನ ವಿಧಾನ, ಪರಂಪರೆ, ಮೌಲ್ಯ, ಆದರ್ಶ, ನೆಲ–ಜಲ, ನೆರೆ–ಕೆರೆ, ದೈವ, ನೀತಿ–ನಿಯಮ, ಆಚಾರ–ವಿಚಾರದ ಪರಿಸರಗಳ ಒಟ್ಟು ಸಂಕಲನವೇ ಸ್ಥಳೀಯತೆಯಾಗಿದೆ. ಸ್ಥಳೀಯತೆಯು ಜೀವ ಪಡೆದು ಪರಿಕಲ್ಪನೆಯಾಗಿ ರೂಪ ಪಡೆಯುವುದು ಪ್ರಭುತ್ವ ಸಂಸ್ಕೃತಿಯ ನಡುವಿನ ಸಂಕರ, ಸಂಘರ್ಷ, ದಾಸ್ಯದಿಂದ, ಯಜಮಾನಿಕೆಯಲ್ಲಿ ಇರುವ ಒಂದು ಸಂಸ್ಕೃತಿಯು ಸಮುದಾಯದ ಸಂಸ್ಕೃತಿಯೊಂದಿಗೆ ಕೂಡಿಕೊಳ್ಳುವ ಪ್ರಕ್ರಿಯೆಗಳು ನಿಂತು, ಸ್ಥಳೀಯ ಸಂಸ್ಕೃತಿಯು ಜಡವಾಗಿ ಸೃಜನಶೀಲತೆಯನ್ನು ಕಳೆದುಕೊಂಡು ಪ್ರಭುತ್ವದ ಸಂಸ್ಕೃತಿಯ ಅಧೀನಕ್ಕೆ ಒಳಪಟ್ಟ ಮೇಲೆ ಸ್ಥಳೀಯ ಸಮುದಾಯದ ಜನರಲ್ಲಿ ತಮ್ಮ ಪರಂಪರೆ ಹಾಗೂ ಜೀವನ ವಿಧಾನದ ಅನನ್ಯತೆಯ ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಈ ಪ್ರಶ್ನೆಯೇ ಮುಂದೆ ಸ್ಥಳೀಯತೆಯನ್ನು ಅದರ ಆಲೋಚನೆಯ ಸ್ವರೂಪವನ್ನು ಪ್ರತಿಪಾದಿಸಲು ಭೂಮಿಕೆಯನ್ನು ಹುಟ್ಟುಹಾಕುತ್ತದೆ.

"ದೇಶಿವಾದ ವಿದೇಶಿ ಸಂಸ್ಕೃತಿಯ ಯಜಮಾನಿಕೆಯ ವಿರುದ್ಧ ಪ್ರತಿಭಟಿಸುತ್ತದೆ ಎನ್ನುವುದು ಸಂಕುಚಿತವಾದ ವಿವರಣೆಯಾಗುತ್ತದೆ. ದೇಶೀಯವಾದ ಅತ್ಯಂತ ಮಹತ್ವಪೂರ್ಣವಾದ ಒಳ ಬಂಡಾಯ ಇಲ್ಲಿಯ ಸಂಸ್ಕೃತಿಯಲ್ಲಿಯೇ ಯಜಮಾನಿಕೆಯ ಸ್ಥಾನವನ್ನು ಆಕ್ರಮಿಸುವ ಅಂಶಗಳ ವಿರುದ್ಧವಾಗಿರುತ್ತದೆ. ಅಂದರೆ, ದೇಶಿವಾದ ಬಂಡಾಯ ಸ್ವದೇಶಿ ಸಂಸ್ಕೃತಿಯ ಜಡವಾದ ಅಂಶಗಳ ವಿರುದ್ಧವೂ ಆಗಿರುತ್ತವೆ. ಕೇವಲ ವಿದೇಶಿ ಸಂಸ್ಕೃತಿಯ ಯಜಮಾನಿಕೆಯ ವಿರುದ್ಧ ಪ್ರತಿಭಟನೆ ದೇಶೀಯವಾದ ಆಶಯವಾಗಿದ್ದಲ್ಲಿ ವಸಾಹತುಶಾಹಿಯ ಸಂದರ್ಭದ ಮುಕ್ತಾಯದೊಂದಿಗೆ ಅದಕ್ಕೆ ನೆಲೆಯಿಲ್ಲದಂತಾಗುತ್ತದೆ. ಆದರೆ ದೇಶಿ ಸಂಸ್ಕೃತಿಯ ಕೆಲವು ಅಂಶಗಳು ಜಡವಾಗುತ್ತಲೇ ಇರುವುದರಿಂದ ದೇಶೀವಾದವು ಅವುಗಳ ವಿರುದ್ಧ ನಿರಂತರವಾದ ಒಳ ಬಂಡಾಯದ ಮೂಲಕ ತನ್ನ ಪ್ರಸ್ತುತತೆಯನ್ನು ಉಳಿಸಿಕೊಂಡು ಬರುತ್ತದೆ. ದೇಶೀವಾದದ ಹಿಂದೆ ಚಲನಶೀಲವಾದ ಪರಿಕಲ್ಪನೆಯಿದೆ. ಬದುಕಿನ ಸತ್ವಶೀಲ ಕಬಳಿಸುವ ಒಳಗಣ ಮತ್ತು ಹೊರಗಣ ಎಲ್ಲ ಚಲನೆಗಳ ವಿರುದ್ಧ ದೇಶಿವಾದವು ಬಂದು ಹೂಡುತ್ತದೆ."[೪] ಎಂಬ ರಾಜೇಂದ್ರ ಚೆನ್ನಿಯವರ

---

೪. ರಾಜೇಂದ್ರ ಚೆನ್ನಿ, ದೇಶೀಯತೆ ಮತ್ತು ಮೂಲಭೂತ ಪ್ರಶ್ನೆಗಳು. ಪುಟ–೧೮

ಅಭಿಮತವು ಸ್ಥಳೀಯ ವ್ಯಾಪ್ತಿಯನ್ನು ಸೂಕ್ಷ್ಮವಾಗಿ ಗ್ರಹಿಸುತ್ತದೆ. ಸ್ಥಳೀಯತೆಯ ಚಿಂತನೆಯ ನೆಲೆ ಕೇವಲ ವಿದೇಶಿ ಶಕ್ತಿಯ ಆಕ್ರಮಣ ಮತ್ತು ಪ್ರಭುತ್ವ ಸಾಧಿಸುವಿಕೆಯಿಂದ ಮಾತ್ರವಲ್ಲದೆ ದೇಶದ ಒಳಗೆ ನಡೆಯುವ ಜಾತಿ, ಧರ್ಮ, ಭಾಷೆಯ ಸಂಘರ್ಷ ಮತ್ತು ಪ್ರಧಾನತೆ ಅಧೀನತೆಯ ಚಿಂತನೆಯು ಸ್ಥಳೀಯ ಪ್ರಜ್ಞೆಯನ್ನು ಸ್ಥಳೀಯತೆ ಎನ್ನುವುದು ನಿರಂತರ ಚಲನಶೀಲನವಾದ ಪರಿಕಲ್ಪನೆಯಾಗಿದೆ. ಸ್ಥಳೀಯತೆ ಎನ್ನುವುದನ್ನು ಗೆರೆಕೊರೆದಂತೆ ವ್ಯಾಖ್ಯಾನಿಸುವುದು ಕಷ್ಟ ಸಾಧ್ಯ. ಕಾಲ ಹಾಗೂ ಅನ್ಯ ಸಂಸ್ಕೃತಿಯ ಸಂಕರದಿಂದ ಸ್ಥಳೀಯತೆಯು ರಾಷ್ಟ್ರೀಯತೆಯ ಸ್ಥಳೀಯತೆಯಾಗಬಹುದು. ವಸಾಹತುಶಾಹಿಯ ಸಂದರ್ಭದಲ್ಲಿ ವಸಾಹತುಶಾಹಿಯ ಪ್ರಭುತ್ವವನ್ನು ನಿರಾಕರಿಸಲು ಗಾಂಧಿ ಸ್ವದೇಶಿ ಅಸ್ತ್ರವನ್ನು ಹೋರಾಟದ ಭಾಗವಾಗಿ ಬಳಸಿದರು. ಗಾಂಧಿ ಬಳಸಿದ ಸ್ಥಳೀಯ ಸತ್ವವಾದ ಅಹಿಂಸೆ, ಖಾದಿ ವಸ್ತ್ರ, ಗೃಹ ಕೈಗಾರಿಕೆ, ಉಪವಾಸದಂತಹ ಪರಿಕಲ್ಪನೆಗಳು ರಾಷ್ಟ್ರೀಯ ನೆಲೆಯಲ್ಲಿ ಗುರುತಿಸಿಕೊಂಡು ಬಹು ವಿಸ್ತಾರದ ವ್ಯಾಪ್ತಿಯನ್ನು ಪಡೆದುಕೊಂಡವು. ಕೃಷಿಯ ಸಂದರ್ಭದಲ್ಲಿ ಪಾತಿ/ಏರಿಯ ಮೂಲಕ ನೀರು ಹಾಯಿಸುತ್ತಿದ್ದ ಸಂದರ್ಭದಲ್ಲಿ ಏತ ಎನ್ನುವ ನೀರೆತ್ತುವ ಸಾಧನ ಪ್ರವೇಶ ಪಡೆದ ಮೇಲೆ ಏತ ಆಧುನಿಕವಾಯಿತು. ಪಾತಿ/ಏರಿಗಳು ಸ್ಥಳೀಯವಾದವು. ಬೆಳಕಿನ ವಿಚಾರದಲ್ಲಿ ದೀಪದ ನಂತರದಲ್ಲಿ ಕಂದಿಲುಗಳು ಬಂದಾಗ ಕಂದಿಲು ಆಧುನಿಕವಾಯಿತು. ದೀಪ ಸ್ಥಳೀಯವಾಯಿತು. ಅನಂತರ ದಿನಗಳಲ್ಲಿ ಕಂದಿಲಿನ ಸ್ಥಾನಕ್ಕೆ ವಿದ್ಯುತ್ ದೀಪಗಳು ಪ್ರವೇಶ ಪಡೆದ ಮೇಲೆ ಕಂದಿಲು ಸ್ಥಳೀಯವಾಗಿ ವಿದ್ಯುತ್ ದೀಪಗಳು ಆಧುನಿಕವೆನಿಸಿದವು. ಹೀಗೆ ಸ್ಥಳೀಯತೆಯು ನಿರಂತರವಾಗಿ ಬದಲಾಗುವ ಸೃಜನಶೀಲವಾದ ಪರಿಕಲ್ಪನೆಯಾಗಿದೆ. ಜೀವನ ವಿಧಾನ ಸಂಕರಗೊಂಡರೂ ತನ್ನ ಮೂಲನೆಲದ ಸತ್ವವನ್ನು ಜೀವಂತವಾಗಿಸಿಕೊಂಡಿರುವುದೇ ಸ್ಥಳೀಯತೆಯ ವೈಶಿಷ್ಟ್ಯವಾಗಿದೆ.

ಸ್ಥಳೀಯತೆ ಎನ್ನುವುದು ಬದುಕಿನ ಸತ್ವವಾಗಿ ನೆಲದ ಕಸುವಾಗಿ ಪರಂಪರೆಯ ಗುಣನಿರ್ದೇಶ ಪದವಾಗಿ ಗುರುತಿಸಬಹುದು. ಒಟ್ಟಿನಲ್ಲಿ ಸ್ಥಳೀಯತೆಯನ್ನು ಅರ್ಥ ಮಾಡಿಕೊಳ್ಳುವುದೆಂದರೆ, ಒಂದು ಸಮುದಾಯದ ಜನರ ಜೀವನದ ತತ್ವವಾಗಿ, ನೆಲದ ಪರಂಪರೆಯ ಭಾಗವಾಗಿ ಸಂಸ್ಕೃತಿಯ ಮತ್ತು ಸಂಪ್ರದಾಯದ ವಿಶಿಷ್ಟ ಬಲವಾಗಿ, ಭಾಷಿಕ ಸಾಹಿತ್ಯಿಕ ರೂಪವಾಗಿ ತನ್ನದೆಂದು ಹೇಳುವ ಗುಣಾತ್ಮಕವಾದ ತತ್ವವನ್ನು ಅಥವಾ ಸಿದ್ಧಾಂತವನ್ನು ಸ್ಥಳೀಯತೆ ಎನ್ನಬಹುದು.

ವ್ಯಾಖ್ಯಾನಗಳು

ಸ್ಥಳೀಯತೆಯ ಬಗ್ಗೆ ಅನೇಕ ಚಿಂತಕರು ಸಾಹಿತ್ಯ ಪರಿಸರವನ್ನು ಇಟ್ಟುಕೊಂಡು ಚರ್ಚಿಸಿದ್ದಾರೆ. ಇಂತಹ ಚರ್ಚೆಯಲ್ಲಿ ಅಭಿವ್ಯಕ್ತಗೊಂಡಿರುವ ಸ್ಥಳೀಯತೆಯ ಕುರಿತ ವ್ಯಾಖ್ಯಾನಗಳನ್ನು ಗುರುತಿಸುವುದಾದರೆ,

ಫ್ರೆಂಚ್ ಚಿಂತಕ ಪಾಲ್ ರಿಕೋರ್ 'ಯುನಿವರ್ಸಲ್ ಸಿವಿಲೈಸೇಶನ್ ಆ್ಯಂಡ್ ನ್ಯಾಷನಲ್ ಕಲ್ಚರ್ಸ್', ೧೯೬೫ ಎಂಬ ಲೇಖನದಲ್ಲಿ "ಹುದುಗಿ ಹೋಗಿರುವ ಸಂಸ್ಕೃತಿಗಳ ಪುನಶ್ಚೇತನಗೊಳಿಸುವ ಮತ್ತು ಸಾರ್ವತ್ರಿಕವಾದ ನಿಲುವಿಗೆ ತರುವ ಆಲೋಚನೆಯೇ ಸ್ಥಳೀಯತೆ/ ದೇಸೀಯತೆ ಎಂದಿದ್ದಾರೆ.

೧. ಕೆನೆತ್ ಪ್ಯಾಂಡ್ಸನ್– 'ವಿಮರ್ಶಾ ಪ್ರಾದೇಶಿಕತೆ–ಪ್ರತಿಭಟನೆಯ ವಸ್ತುಶಿಲ್ಪದತ್ತ ಆರು ಅಂಶಗಳು ಎಂಬ ಲೇಖನದಲ್ಲಿ 'ಅಭಿವೃದ್ಧಿ ಹಾಗೂ ಕೈಗಾರಿಕಾ ಸಮಾಜದ ಸಂದರ್ಭದಲ್ಲಿ ಅವಾಸ್ತವಿಕ ಎಂದೂ ದೂರ ನಿಂತ ಸಾಂಸ್ಕೃತಿಕ ಪರಿಸರ 'ಆನ್‌ಕ್ಲೇವ್' ಇದನ್ನು ಶೋಧಿಸುವ ನೆಲೆಯೇ ಸ್ಥಳೀಯತೆ'

೨. ರಾಜೇಂದ್ರ ಚೆನ್ನಿ– ದೇಶೀವಾದ ಎಂಬ ಕೃತಿಯಲ್ಲಿ "ಪ್ರಧಾನ ಸಂಸ್ಕೃತಿಗಳ ಅಡಿಯಲ್ಲಿ ಸಿಲುಕಿರುವ ಎಲ್ಲಾ ರೀತಿಯ ಅಧೀನ ಸಾಂಸ್ಕೃತಿಕ ಪರಿಸರ ಮತ್ತು ಸಾಂಸ್ಕೃತಿಕ ಸಂಕರತೆ ಮತ್ತು ನಿರ್ಲಿಪ್ತತೆಯು ಉಂಟಾಗುವಾಗ ಹುಟ್ಟಿಕೊಂಡ ಜೀವನ ನೆಲೆಗಳೇ ಸ್ಥಳೀಯತೆ'.

೩. ವಿಜಯ ಶಂಕರ– 'ಕನ್ನಡ ಸಾಹಿತ್ಯದಲ್ಲಿ ದೇಶೀಯ ಪ್ರಜ್ಞೆ' ಎಂಬ ಲೇಖನದಲ್ಲಿ 'ಪ್ರಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯದಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕ ಬಿಕ್ಕಟ್ಟುಗಳು ಹೊಸದಾದ ಪ್ರಕಾರವನ್ನು ಹುಟ್ಟು ಹಾಕಿತು, ಅದುವೇ ದೇಶಿ'

೪. ಡಾ. ಕೆ.ಸಿ. ಶಿವಾ ರೆಡ್ಡಿ–ಹಾಡು ಪಾಡು ಪ್ರಕಟಿತ ಮಹಾಪ್ರಬಂಧದಲ್ಲಿ 'ವಸಾಹತುಶಾಹಿ ಆಡಳಿತದ ಪರಣಾಮದಿಂದ ಕಳೆದುಹೋದ ಬದುಕಿನ ಲಯ ಅಥವಾ ಸಂಸ್ಕೃತಿಯ ಅಲೆಯನ್ನು ಮರು ಸಂಘಟಿಸುವ ಆಲೋಚನೆಯೇ ಸ್ಥಳೀಯತೆ'

೫. ಪ್ರೊ.ಸಿ.ಆರ್. ಯರವಿನ ತೆಲಿಮಠ – 'ದೇಸೀಯತೆ ಮತ್ತು ದೇಶೀವಾದ ಎಂಬ ಕೃತಿಯಲ್ಲಿ 'ಹೊರಗಿನ ಪ್ರಬಲ ಶಕ್ತಿಗಳ ಜೊತೆಗೆ ಹೋರಾಡಲು ಮತ್ತು ತುಳಿತಕ್ಕೊಳಗಾದ ಸಂಸ್ಕೃತಿಗಳಿಗೆ ನೆರವು ನೀಡುವ ಪರಿಣಾಮಕಾರಿ ಅಸ್ತ್ರವೇ ದೇಶೀಯತೆ"

೬. ಪ್ರೊ. ಹಿ.ಚಿ. ಬೋರಲಿಂಗಯ್ಯ–ದೇಶಿ ಕನ್ನಡ ಪರಂಪರೆ ಎಂಬ ಕೃತಿಯಲ್ಲಿ "ಅನಕ್ಷರಸ್ಥರಾದರೂ ತಮ್ಮ ಅನುಭವ ಹಾಗೂ ನೆನಪಿನ ಶಕ್ತಿಯಲ್ಲಿ ಲೋಕಾನುಭವದ

ಕಾವ್ಯ ಕಟ್ಟಿದ ಹಳ್ಳಿಗರಿಗೆ ತಮ್ಮ ಮೌಖಿಕ ಶಕ್ತಿಯೇ ದೇಸೀ"

೭. ನಟರಾಜ ಹುಳಿಯಾರ್ "ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯದಲ್ಲಿ ಆಧುನಿಕತೆ ಮತ್ತು ಪರಂಪರೆ ಕೃತಿಯಲ್ಲಿ 'ವಸಾಹತುಕಾರನ ಮೌಲ್ಯಗಳನ್ನು ವಿರೋದಿಸುತ್ತಾ, ತನ್ನ ಮೌಲ್ಯಗಳಿಗೆ ತೀವ್ರವಾಗಿ ಆತುಕೊಳ್ಳುತ್ತಾ ಉಗ್ರ ಸ್ವ ಸಮರ್ಥನೆಯನ್ನಾರಂಭಿಸುವ ಪ್ರಕ್ರಿಯೆಯೇ ಸ್ಥಳೀಯತೆ.

೮. ಡಾ. ಅರವಿಂದ ಮಾಲಗತ್ತಿ 'ಪುರಾಣ ಜಾನಪದ ಮತ್ತು ದೇಶೀವಾದ ಎಂಬ ಕೃತಿಯಲ್ಲಿ 'ಒಂದು ಜನಾಂಗ ಹಾಗೂ ನೆಲೆನಿಂತ ಮಣ್ಣಿನ ವಾಸನೆಯಿಂದ ಹೊರಬಂದ ಸೂತ್ರಬದ್ಧವಾದ ಎಲ್ಲಾ ಮೊತ್ತವೇ ದೇಸೀಯತೆ'.

೯. ಡಾ. ರಾಜೇಂದ್ರ ಚೆನ್ನಿ – ದೇಶೀವಾದ: ಕೆಲ ಮೂಲಭೂತ ಪರಕಲ್ಪನೆಗಳು ಎಂಬ ಲೇಖನದಲ್ಲಿ 'ಒಂದು ಸಮುದಾಯ ಸಾಂಸ್ಕೃತಿಕ ಅನನ್ಯತೆಯನ್ನು ಮತ್ತು ಸಾಹಿತ್ಯಕ್ಕಿರುವ ತನ್ನದೆ ಆದ ಸ್ವಾಯತ್ತತೆಯನ್ನು ಗುಣಾತ್ಮಕತೆ ಎಂದು ಒಪ್ಪಿಕೊಳ್ಳುವ ಧೋರಣೆಯೇ ಸ್ಥಳೀಯತೆ.

**ಸ್ಥಳೀಯತೆಯ ಸ್ವರೂಪ**

ಸ್ಥಳೀಯತೆ ಎನ್ನುವುದು ಒಂದು ಸಂಸ್ಕೃತಿಯ ಒಡಲಾಳದಲ್ಲಿ ಇರುವಂತಹ ಸತ್ವವೇ ಆಗಿದೆ. ಈ ಸ್ಥಳೀಯತೆ ಎನ್ನುವ ಪರಿಕಲ್ಪನೆಯು ರೂಪುಗೊಳ್ಳುವುದರ ಮುಖ್ಯವಾಗಿ ಸಂಸ್ಕೃತಿ ಪರಂಪರೆಯ ಸಂಕರತೆ, ಸಂಘರ್ಷ ಸಂಪರ್ಕದಿಂದಾಗಿದೆ. ಪ್ರೊ. ಸಿ.ಆರ್. ಯರವಿನತೆಲಿಮಠ ಅವರು ಸ್ಥಳೀಯತೆಯ ಪ್ರಜ್ಞೆಯನ್ನು ಭಿನ್ನ–ಭಿನ್ನವಾದ ಸ್ಥರದಲ್ಲಿ ಚರ್ಚಿಸುತ್ತಾರೆ.[೫] ಒಂದು ಸಂಸ್ಕೃತಿಯ ರಚನೆಯಲ್ಲಿ ವಿವಿಧ ಶ್ರೇಣಿಯ ಸ್ತರಗಳಿರುತ್ತವೆ. ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಸ್ತರವು ಸಾಮಾನ್ಯವಾಗಿ ಯಜಮಾನಿಕೆಯನ್ನು ವಹಿಸಿಕೊಳ್ಳುವುದರಿಂದ ಇತರ ಸ್ತರಗಳು ಸಹಜವಾಗಿ ಮಾನ್ಯತೆ ಕಳೆದುಕೊಳ್ಳುತ್ತದೆ. ಇಂತಹ ಸಂದರ್ಭದಲ್ಲಿ ದೇಶೀವಾದವು ಯಜಮಾನ ಸಂಸ್ಕೃತಿಯ ವಿರುದ್ಧ ಅದೇ ಸಂಸ್ಕೃತಿಯ ಇತರ ಎಳೆಗಳನ್ನು ಸಮರ್ಥಿಸಿ ಪೋಷಿಸುತ್ತದೆ ಎನ್ನುವ ಮಾತು ನೆಲದ ಸಂಸ್ಕೃತಿ ಮತ್ತು ಪರಂಪರೆಯ ಸತ್ವವನ್ನು ಸಮರ್ಥಿಸುತ್ತದೆ. ಸ್ಥಳೀಯತೆ ಎನ್ನುವುದು ಸಂಸ್ಕೃತಿಯ

---

೫. ಸಿ.ಆರ್ ಯರವಿನ ತೆಲಿಮಠ, ದೇಶೀಯತೆ ಮತ್ತು ದೇಶಿವಾದ, ಪುಟ–೩೦

ಭಾಗವಾಗಿಯೇ ಅಭಿವ್ಯಕ್ತಗೊಂಡರು. ಕಾಲಧರ್ಮದ ನೆಲೆಯಲ್ಲಿ ಬದಲಾಗುವ ಸ್ವರೂಪವನ್ನು ಒಳಗೊಂಡಿದೆ. ದೇಶೀವಾದ ಚಿಂತನೆಗಳು ಸತತವಾಗಿ ಹೊರ ವರ್ತುಲದಿಂದ ಅನಿರ್ದಿಷ್ಟ ಕೇಂದ್ರದ ಕಡೆಗೆ ತುಡಿಯುತ್ತಿರುತ್ತದೆ.[೬] ಎಂಬ ರಾಜೇಂದ್ರ ಚೆನ್ನಿಯವರ ಮಾತನ್ನು ನೆನಪು ಮಾಡಿಕೊಳ್ಳಬಹುದು.

**ಸ್ಥಳೀಯತೆ ಸ್ವರೂಪದ ಮಾದರಿಗಳನ್ನು ಈ ಕೆಳಗಿನ ನೆಲೆಯಲ್ಲಿ ಚರ್ಚಿಸುವುದಾದರೆ**

**೧) ರಾಜಪರಂಪರೆಯ ನೆಲೆಯ ಸ್ಥಳೀಯತೆ**

ಭಾರತವು ವರ್ಣ/ವರ್ಗ ಶ್ರೇಣೀಕೃತ ವ್ಯವಸ್ಥೆಯನ್ನು ಪೋಷಿಸಿಕೊಂಡು ಬಂದಂತೆ, ರಾಜ ಪರಂಪರೆಯನ್ನು ಬಹುಕಾಲದವರೆಗೆ ನಡೆಸಿಕೊಂಡು ಬಂದಿದೆ. ಭಾರತದಲ್ಲಿ ಆಳ್ವಿಕೆ ಮಾಡಿದ ಪ್ರತಿಯೊಂದು ರಾಜಮನೆತನವು ತನ್ನದೆ ಧರ್ಮವನ್ನು, ಭಾಷೆಯನ್ನು ಸಾಂಸ್ಕೃತಿಕ ಪರಂಪರೆಯನ್ನು ಹುಟ್ಟುಹಾಕಿ ಅದನ್ನು ಕಾಪಾಡಿಕೊಂಡು ಬಂದಿವೆ. ಹೆಚ್ಚಿನ ರಾಜಮನೆತನಗಳು ಹಿಂದೂ ಧರ್ಮವನ್ನು ಮತ್ತು ಸಂಸ್ಕೃತ ಭಾಷೆಯನ್ನು ಪ್ರಧಾನವಾಗಿಸಿ ದೇಶದ ವ್ಯಾಪ್ತಿಗೆ ಆಚರಣೆ ಮತ್ತು ಸಂಸ್ಕೃತಿಯನ್ನು ತಂದಾಗ ಪ್ರಾದೇಶಿಕವಾಗಿದೆ. ಭಾಷೆ, ಧರ್ಮ, ಸಮುದಾಯದ ಸಂಸ್ಕೃತಿಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು. ರಾಜಶಾಹಿಯ ಒತ್ತಡಕ್ಕೆ ಸಿಕ್ಕ ಸ್ಥಳೀಯ ಪರಂಪರೆಗಳು ಪ್ರಭುತ್ವದ ಭಾಷೆಯನ್ನು, ಧರ್ಮವನ್ನು, ಸಂಸ್ಕೃತಿಯನ್ನು ಇಷ್ಟವಿಲ್ಲದಿದ್ದರೂ ಒಪ್ಪಿಕೊಂಡವು ಈ ರೀತಿಯ ನಿಲುವು ಬಹುಕಾಲ ಉಳಿಯದೆ ರಾಜ್ಯಶಾಹಿಯ ಸಾಂಸ್ಕೃತಿಕ ಪರಂಪರೆಯನ್ನು, ಭಾಷೆಯನ್ನು ವಿರೋಧಿಸಿದ ಪ್ರಾದೇಶಿಕ ಸಮುದಾಯಗಳು ತನ್ನ ನೆಲದ ಸತ್ವದೊಂದಿಗೆ ತನ್ನ ಪರಂಪರೆಯನ್ನು ಜಾಗೃತಗೊಳಿಸುವ ಕಡೆಗೆ ಮುಖ ಮಾಡಿದವು. ಈ ನಡುವೆ ಸ್ಥಳೀಯ ಪ್ರಜ್ಞೆಯು ರಾಜಶಾಹಿಯ ಪ್ರತಿಯಾಗಿ ಜೀವ ಪಡೆಯಿತು. ೧೨ನೇ ಶತಮಾನದ ವೈದಿಕಶಾಹಿತ್ವದ ರಾಜಕೀಯ ವ್ಯವಸ್ಥೆಯ ಪ್ರತಿಯಾಗಿ ಶರಣರು ರೂಪಿಸಿದ ಇಷ್ಟಲಿಂಗ ಹಾಗೂ ಕಾಯಕದಂತಹ ಪರಿಕಲ್ಪನೆ ಹಾಗೂ ಆದಿಲ್‌ಶಾಹಿ ಕಾಲಕ್ಕೆ ಉರ್ದು ದಖ್ಖನ್ ಭಾಷೆಯ ಪ್ರಭುತ್ವದ ಪ್ರತಿಯಾಗಿ ಹುಟ್ಟಿಕೊಂಡ ಕನ್ನಡದ ಜನಪದ ಸತ್ವದ ತತ್ವ ಸಾಹಿತ್ಯವು ಸ್ಥಳೀಯತೆಯ ಭಾಗವಾಗಿದೆ. ರಾಜಶಾಹಿಯ ಸಂದರ್ಭದಲ್ಲಿ ರಚನೆಗೊಂಡ ಸಾಹಿತ್ಯ ಪರಂಪರೆಯು

೬. ರಾಜೇಂದ್ರ ಚೆನ್ನಿ, ದೇಶೀಯತೆ ಮತ್ತು ಮೂಲಭೂತ ಪ್ರಶ್ನೆಗಳು, ಪುಟ-೩೦

ತನ್ನ ಅಂತರ್ಯದಲ್ಲಿ ದೇಶಿ-ಮಾರ್ಗವೆಂಬ ಸಂಘರ್ಷ ಮತ್ತು ಸಂಕರತೆಯ ನೆಲೆಯನ್ನು ತಾತ್ವೀಕರಿಸುತ್ತದೆ. ರಾಜಶಾಹಿಯ ನೆಲೆಯಲ್ಲಿ ಹುಟ್ಟಿಕೊಂಡ ಸ್ಥಳೀಯತೆಯ ಪರಿಸರವು ಜನಪದ ಮತ್ತು ಜನರ ನೆಲೆದ ಸತ್ವವನ್ನೇ ಪ್ರಧಾನವಾಗಿಸಿಕೊಂಡಿರುವುದೇ ಸ್ಥಳೀಯ ಜನರ ಜೀವಾಳವೇ ಸ್ಥಳೀಯತೆ ಎಂಬುವುದನ್ನು ಗುರುತಿಸಬಹುದು.

### ೨. ಅನ್ಯ ಸಂಸ್ಕೃತಿಯ ಸಂಪರ್ಕವಿಲ್ಲದ ಸಂದರ್ಭದ ಸ್ಥಳೀಯತೆ

ಭಾರತೀಯ ನೆಲೆಯಲ್ಲಿ ಸಂಸ್ಕೃತಿ ಮತ್ತು ಪರಂಪರೆಯ ಚರ್ಚೆಯನ್ನು ವೈದಿಕ ಸಾಹಿತ್ಯ, ಧರ್ಮ ಹಾಗೂ ಆಚರಣೆಯ ಭಾಗವಾಗಿಯೇ ಗುರುತಿಸಲಾಗುತ್ತದೆ. ವೇದ, ಮಹಾಭಾರತ, ರಾಮಾಯಣ, ಉಪನಿಷತ್, ಮನುಸೂತ್ರ ಇತ್ಯಾದಿಗಳು ಶಿಷ್ಟವೆಂದು ಕರೆಯುವ ಅಥವಾ ಮಾರ್ಗವೆಂದು ಕರೆಯುವ ಪರಂಪರೆಯಾಗಿದೆ. ಇದೆ ಪರಿಸರದಲ್ಲಿ ಸ್ಥಳೀಯವಾಗಿ ಆಚರಣೆಯಲ್ಲಿರುವ ಭಾಷೆ, ಸಾಮಾಜಿಕ ರಚನೆ, ನಂಬಿಕೆ, ನಡವಳಿಕೆ ಹಾಗೂ ಜೀವನ ವಿಧಾನವನ್ನು ಸ್ಥಳೀಯತೆ ಎಂದು ಕರೆಯಬಹುದು. ವೈದಿಕ ಪ್ರಧಾನವಾದ ಸಂಸ್ಕೃತಿ ಮತ್ತು ಪ್ರಾದೇಶಿಕ ಸಂಸ್ಕೃತಿಯ ನಡುವಿನ ಸಂಪರ್ಕ, ಸಂಕರ ಮತ್ತು ಸಂಘರ್ಷವು ಸ್ಥಳೀಯತೆಯ ಸ್ವರೂಪವನ್ನು ಗುರುತು ಮಾಡುತ್ತದೆ. ರಾಜೇಂದ್ರ ಚೆನ್ನಿಯವರು ಈ ಸಂದರ್ಭವನ್ನು ಹೀಗೆ ಚರ್ಚಿಸುತ್ತಾರೆ. "ಮಹಾ ಪರಂಪರೆ ಇತರ ಯವುದೇ ಕಿರುಪರಂಪರೆಯ ಜೊತೆಗೆ ಸಂಬಂಧವಿರದ ಒಂದು ಏಕಾಕೃತಿ ಅಲ್ಲ. ಹಲವಾರು ಪ್ರಾದೇಶಿಕ ಸಂಸ್ಕೃತಿಗಳ ಅಂಶಗಳೇ ಕ್ರಮೇಣ ಮಹಾ ಪರಂಪರೆಯಾಗಿ ಹೆಪ್ಪುಗಟ್ಟಿರುತ್ತವೆ.[೭]

ಸಂಸ್ಕೃತ ಭಾಷೆ ಮತ್ತು ಸಾಹಿತ್ಯ ಸಂದರ್ಭದಲ್ಲಿ ಸಂಸ್ಕೃತ ಪ್ರಧಾನತೆಯನ್ನು ಧಿಕ್ಕರಿಸಿದ ಕನ್ನಡದ ಜಾನಪದ ಸಾಹಿತ್ಯ ಜನರ ಭಾಗವಾದವು. ಉದಾಹರಣೆಗೆ ಮಂಟೇಸ್ವಾಮಿ ಕಾವ್ಯ, ಜುಂಜಪ್ಪನ ಕಾವ್ಯ ಇತ್ಯಾದಿ ಈ ಕಾವ್ಯಗಳು ಸಂಸ್ಕೃತ ಸಾಹಿತ್ಯ ಮೀಮಾಂಸೆಗೆ ಅಂದರೆ ಮಾರ್ಗ/ ಶಿಷ್ಟಕ್ಕೆ ಪ್ರತಿಯಾಗಿ ಸಾಮಾನ್ಯ ದುಡಿಯುವ ಜನರ ಬೆವರು, ಶ್ರಮ, ಜೀವನದ ಲಯವನ್ನು ಮಹಾಕಾವ್ಯವಾಗಿಸಿ ಸ್ಥಳೀಯತೆಯ ಪರಂಪರೆಯನ್ನು ಕಟ್ಟಿದರು. ಸಾಮಾಜಿಕ ನಂಬಿಕೆ ಹಾಗೂ ಆಚರಣೆಗಳಲ್ಲೂ ವೈದಿಕತೆಯನ್ನು ಮೀರುವ ದೈವ, ನಂಬಿಕೆ, ಆಚರಣೆಗಳು ಸ್ಥಳೀಯವಾಗಿ ರಚನೆಗೊಂಡವು. ಭೂತಾರಾಧನೆ, ಮಾರಿ-

---

೭ ಸಿ.ಆರ್ ಯರವಿನ ತೆಲಿಮತ, ದೇಶೀಯತೆ ಮತ್ತು ದೇಶಿವಾದ, ಪುಟ-೨೬

ಮಸಣಿಯ ಇತ್ಯಾದಿ ಆರಾಧನೆಗಳು ಒಂದು ಪರಿಸರದ, ಒಂದು ಸಮುದಾಯದ ಜೀವನದ ಮೀಮಾಂಸೆ ಹಾಗೂ ನೆಲದ ಸತ್ವದೊಂದಿಗಿನ ಆಚರಣೆ ಮತ್ತು ಪರಂಪರೆಯನ್ನು ಕಾಪಿಟ್ಟು ಕೊಳ್ಳುವ ನೆಲೆಯಲ್ಲಿ ಸ್ಥಳೀಯತೆಯು ಜೀವ ಪಡೆಯಿತು.

ಪಂಪ ಹಾಗೂ ಇತ್ಯಾದಿ ಮಹಾ ಕವಿಗಳು ಸಂಸ್ಕೃತ ಮತ್ತು ಕನ್ನಡವನ್ನು ಸಂಕರವಾಗಿಸಿ ಚಂಪು ಎನ್ನುವ ಕಾವ್ಯವನ್ನು ರಚಿಸಿ ಮಾರ್ಗ ದೇಶಿ, ವಸ್ತುಕ-ವರ್ಣಕವೆಂಬ ಸಮನ್ವದ ಪರಂಪರೆಯನ್ನು ಹುಟ್ಟುಹಾಕಿದರು. ಇದೇ ರೀತಿಯಲ್ಲಿ ಸಾಮಾಜಿಕ ಸಂದರ್ಭದಲ್ಲಿಯೂ ಕೆಳಸಮುದಾಯದ ಅನೇಕರು ವೈದಿಕರನ್ನು ಅವರ ಆಚರಣೆಯನ್ನು ಅನುಕರಣೆ ಮತ್ತು ಅನುಸರಣೆ ಮಾಡುವ ಕಡೆಗೆ ಮುಖ ಮಾಡಿದರು. ಉದಾಹರಣೆ ನಂಬೂದರಿ ಬ್ರಾಹ್ಮಣರು ಎಂ.ಎನ್. ಶ್ರೀನಿವಾಸ ಎಂಬ ಸಮಾಜಶಾಸ್ತ್ರಜ್ಞರು ಈ ಪ್ರಕ್ರಿಯೆಯನ್ನು ಸಂಸ್ಕೃತೀಕರಣ ಎಂಬ ನೆಲೆಯಲ್ಲಿ ದೀರ್ಘವಾಗಿ ಚರ್ಚಿಸುತ್ತಾರೆ. ಈ ರೀತಿಯಲ್ಲಿ ವೈದಿಕ ಪರಂಪರೆಯ ಜೀವನ ಮೀಮಾಂಸೆ ಮತ್ತು ಪ್ರದೇಶಿಕ ಸಮುದಾಯಗಳ ಜೀವನ ಮೀಮಾಂಸೆಯ ನಡುವಿನ ಸಂಪರ್ಕ, ಸಂಘರ್ಷ ಹಾಗೂ ಸಂಕರತೆಯು ಸ್ಥಳೀಯತೆಯನ್ನು ಗುರುತು ಮಾಡಿತು ಮತ್ತು ಸಿದ್ಧಾಂತದ ಅಸ್ಮಿತೆಯನ್ನು ನೀಡಿತು.

**೩. ವಸಾಹತುಶಾಹಿ ಸಂದರ್ಭದ ಸ್ಥಳೀಯತೆ**

ಸ್ಥಳೀಯತೆಯ ಪರಿಕಲ್ಪನೆಯ ವಿಸ್ತಾರತೆಗೆ ಮತ್ತು ಅಧ್ಯಯನಶೀಲತೆಗೆ ಚಲನೆಯನ್ನು ಒದಗಿಸಿದ ಕಾಲವೆಂದರೆ ವಸಾಹತುಶಾಹಿಯ ಪ್ರಭುತ್ವದ ಸಂದರ್ಭ. ಭಾರತದಂತಹ ರಾಜಕೇಂದ್ರಿತವಾದ ಬಹುಸಂಸ್ಕೃತಿಯ ದೇಶಕ್ಕೆ ಪ್ರವೇಶ ಪಡೆದ ವಸಾಹತುಶಾಹಿಯು ಪಾಶ್ಚಾತ್ಯ ಸಾಂಸ್ಕೃತಿಕ ಪರಂಪರೆಯನ್ನು ಆಧುನಿಕವಾದ ಆಡಳಿತ ಮದರಿಯನ್ನು, ಇಂಗ್ಲಿಷ್ ಶಿಕ್ಷಣವನ್ನು ಭಾರತದಲ್ಲಿ ಪ್ರಭುತ್ವದ ಭಾಗವಾಗಿ ಜಾರಿಗೊಳಿಸಿತು. ಭಾಗತವನ್ನು ಸಂಪೂರ್ಣವಾಗಿ ಆಕ್ರಮಿಸಿಕೊಳ್ಳುವ ಉದ್ದೇಶದಿಂದ ಪೌರಾತ್ಯವಾದ ಎಂಬ ಚಿಂತನೆಯ ಕ್ರಮವನ್ನು ಹುಟ್ಟು ಹಾಕಿತು ಮತ್ತು ಭಾರತೀಯ ಸಂಸ್ಕೃತಿ ಮತ್ತು ಪರಂಪರೆಯ ಮೇಲೆ ಭೌತಿಕ ಮೀಮಾಂಸೆಯ ನೆಲೆಯಲ್ಲಿ ದಾಳಿ ಮಾಡಿತು. ಈ ಸಂದರ್ಭದಲ್ಲಿ ಭಾರತೀಯ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ವಿನ್ಯಾಸಗಳು ದಿಕ್ಕು ತಪ್ಪಿದವು. ಕೆಲವು ಭಾರತೀಯ ಎನ್ನುವ ಅಂಶಗಳು ತನ್ನ ಅಸ್ತಿತ್ವವನ್ನೆ ಕಳೆದುಕೊಂಡವು. ಭಾರತೀಯ ಮನಸ್ಸುಗಳು ಈ ನಡುವೆ ವಸಾಹತುಶಾಹಿಗೆ ಮುಖಾಮುಖಿಯಾಗಿ ಸಂಘರ್ಷಗೊಳ್ಳುವ ಸಂಕರಗೊಳ್ಳುವ, ನಿರಾಕರಿಸುವ ನೆಲೆಗಳನ್ನು ಕಂಡುಕೊಂಡವು.

ವಸಾಹತುಶಾಹಿಯ ವಿರುದ್ಧ ಚಳುವಳಿಯನ್ನು ಹುಟ್ಟು ಹಾಕಲು ಭಾರತೀಯತೆ ಎಂದು ಕರೆಯುವ ನಮ್ಮ ನೆಲದ ಪರಂಪರೆ, ಸಂಸ್ಕೃತಿ, ಆಚರಣೆ, ನಂಬಿಕೆ, ಆದರ್ಶ, ಜೀವನ ಮೀಮಾಂಸೆ, ಕಲೆ–ವಾಸ್ತುಶಿಲ್ಪ, ಚರಿತ್ರೆಯನ್ನು ಗುಣಾತ್ಮಕವೆಂದು ಮಂಡಿಸುವ ಅಗತ್ಯತೆ ಹುಟ್ಟಿಕೊಂಡಿತು. ಈ ಸಂದರ್ಭದಲ್ಲಿ ಜೀವ ಪಡೆದ ಪ್ರಮುಖ ಪರಿಕಲ್ಪನೆಯ ಸ್ಥಳೀಯತೆ ಪ್ರೊ. ಸಿ.ಆ. ಯರವಿನತೆಲಿಮಠ ಅವರ ಮಾತು ಸ್ಥಳೀಯ ನೆಲೆಯ ಉಗಮತೆಯನ್ನು ಸ್ಪಷ್ಟಪಡಿಸುತ್ತದೆ. ವಸಾಹತುಶಾಹಿಯ ಮುಖ್ಯ ಗುರಿ ದೇಶೀಯ ಸಂಸ್ಕೃತಿಯ ಬಹುಮುಖತ್ವ ಮತ್ತು ವೈವಿಧ್ಯತೆಯನ್ನು ನಾಶಮಾಡಿ ಅವುಗಳನ್ನು ಸಾಂಸ್ಕೃತಿಕವಾಗಿ ಮಾರ್ಪಡಿಸುವದಾಗಿದ್ದಿತು. ಇಂಥ ಸಂದರ್ಭದಲ್ಲಿ ಪರಸ್ಪರ ವಿನಿಮಯದ ಬದಲು ಯಜಮಾನಿಕೆಯೇ ಪ್ರಮುಖ ಪಾತ್ರ ವಹಿಸುತ್ತದೆ. ವಸಾಹತುಶಾಹಿಯ ಉದ್ದೇಶ ಪೂರ್ತಿ ಈಡೇರದಿದ್ದರೂ ಅದರ ಪ್ರಭಾವದಡಿಯಲ್ಲಿ ನಮ್ಮ ದೇಶಿಯ ಸಂಸ್ಕೃತಿಯಲ್ಲಿ ಅನೇಕ ಏರು–ಪೇರುಗಳಾಗಿರುತ್ತದೆ. ಇಂತಹ ಸಂದರ್ಭದಲ್ಲಿ ದೇಶಿವಾದದ ನಿಲುವು ಹುಟ್ಟುತ್ತದೆ.[೮] ವಸಾಹತುಶಾಹಿಯ ಸಂದರ್ಭದಲ್ಲಿ ಸ್ಥಳೀಯತೆ ಎನ್ನುವುದ ಸಮುದಾಯದ ನೆಲೆಯಲ್ಲಿ ಮರುರೂಪಗೊಂಡಿತ್ತಲ್ಲದೆ ಸ್ಥಳೀಯ ಜೀವನ ಮೀಮಾಂಸೆ ಹಾಗೂ ಪರಂಪರೆಯ ಪರಿಸರವು ರಾಷ್ಟ್ರೀಯತೆಯ ಸ್ಥಾನ ಪಡೆದುಕೊಂಡು ವಸಾಹತುಶಾಹಿಯೊಂದಿಗೆ ಮುಖಾಮುಖಿಯಾಯಿತು. ಒಟ್ಟಿನಲ್ಲಿ ವಸಾಹತುಶಾಹಿಯ ಸಂದರ್ಭದಲ್ಲಿ ಸ್ಥಳೀಯತೆಯು ಒಂದು ಸಿದ್ಧಾಂತವಾಗಿ, ಭಾರತೀಯ ಸಾಹಿತ್ಯದ ಭೂಮಿಕೆಯಗಿ, ವಸಾಹತುಶಾಹಿಯ ಚಿಂತನ ಕ್ರಮ ವಿರೋಧಿಯಾಗಿ ರೂಪುಗೊಂಡಿತು.

**೩.೧ ಕನ್ನಡ ಸಾಹಿತ್ಯದಲ್ಲಿ ಸ್ಥಳೀಯತೆಯ ಪರಿಕಲ್ಪನೆ:**

ವಸಾಹತು ಸಂದರ್ಭದಲ್ಲಿ ಸ್ಥಳೀಯತೆ ಬಹುವಿಸ್ತಾರವಾದ ಆಯಾಮವನ್ನು ಪಡೆದುಕೊಂಡಿತು ಎಂಬುದನ್ನು ನೆನೆಪಿನಲ್ಲಿ ಇಟ್ಟುಕೊಂಡರೇ, ಸ್ಥಳೀಯತೆಗೆ ದೀರ್ಘವಾದ ಪರಂಪರೆ ಇದೆ ಎಂಬುವುದನ್ನು ಗುರುತಿಸುವುದು ಅಗತ್ಯವೆಂದು ಕಾಣುತ್ತದೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಸ್ಥಳೀಯತೆಯ ಪರಿಕಲ್ಪನೆಯನ್ನು ಆರಂಭ ಕಾಲಘಟ್ಟದಿಂದ ಗಮನಿಸಬಹುದು. ಶ್ರೀವಿಜಯನ ಕವಿರಾಜಮಾರ್ಗ ಕಾವ್ಯದಲ್ಲಿನ ಸ್ಥಳೀಯತೆಯ ನೆಲೆಗಳನ್ನು ಎಂ.ವಿ. ಸೀತಾರಾಮಯ್ಯ ಅವರು ಈ ಕೆಳಗಿನಂತೆ ಗುರುತಿಸುತ್ತಾರೆ.

---

೮. ಹಿ.ಚಿ.ಬೋರಲಿಂಗಯ್ಯ, 'ಕನ್ನಡ ದೇಶಿ ಪರಂಪರೆ, ಪು–೯

೧. ವಿಶಾಲವಾದ ಕನ್ನಡ ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದ, ಪ್ರಾದೇಶಿಕ ವೈಲಕ್ಷಣ್ಯವುಳ್ಳ ಕನ್ನಡಂಗಳ್ ಎಂಬ ಅರ್ಥದಲ್ಲಿ (ದೇಶಿ ಬೇರೆದೇರಪ್ಪುದರಿಂ) ದೇಶಿಪದವು ಮೊದಲು ಬಳಕೆಯಾಗಿದೆ.

೨. ಕನ್ನಡ ನುಡಿಯ ಪ್ರಯೋಗ ಪದ್ಧತಿ ಇದರಲ್ಲಿ ಹಳೆಗನ್ನಡದ ಪ್ರಯೋಗ, ಕನ್ನಡ ನುಡಿಯೊಂದಿಗೆ ಸಮಸಂಸ್ಕೃತವನ್ನು ಬೆರೆಸುವುದು, ಕನ್ನಡಕ್ಕೆ ವಿಶಿಷ್ಟವಾದ ವ್ಯಾಕರಣ ಶುದ್ಧಿ ಇವು ಸೇರುತ್ತದೆ.

೩. ಪದ್ಯ ರಚನೆಯಲ್ಲಿ ಯತಿಭಂಗ ದೋಷವಿಲ್ಲ. ಗುಣ(೧-೨೫) ಎಂದು ಹೇಳುವಲ್ಲಿ ಕನ್ನಡ ಕಾವ್ಯ ಪದ್ಧತಿಯ ವೈಶಿಷ್ಟ್ಯ ಎಂದು ಅರ್ಥವಾಗುತ್ತದೆ, ಕನ್ನಡ ಕಾವ್ಯ ರೀತಿಯ ಸೌಂದರ್ಯ, ಸೊಗಸು ಅಥವಾ ಕನ್ನಡತನದ ಅಂದು ಎಂದು ಧ್ವನಿತಾರ್ಥ[೯]

ಈ ಮೇಲಿನ ಎಂ.ವಿ. ಸೀತಾರಾಮಯ್ಯ ಅವರ ಮಾತನ್ನು ಗಮನದಲ್ಲಿ ಇಟ್ಟುಕೊಂಡು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸ್ಥಳೀಯತೆಯ ನೆಲೆಯನ್ನು ಚರ್ಚಿಸುವುದಾದರೆ ವೈದಿಕ ಹಾಗೂ ಸಂಸ್ಕೃತ ಭಾಷೆಯ ಪ್ರಭುತ್ವದಲ್ಲಿ ರಚನೆಯಾಗುತ್ತಿದ್ದ ಸಾಹಿತ್ಯ ಯಾಜಮಾನ್ಯ ಸಂಸ್ಕೃತಿಯನ್ನು ಮತ್ತು ಅದನ್ನು ಪ್ರತಿನಿಧಿಸುವ ಭಾಷೆ ಅಭಿವ್ಯಕ್ತಿಯ ಮಾದರಿಯಾಗಿ ಬಳಸಿತು. ಈ ಕಾಲಮಾನದಲ್ಲಿ ವೈದಿಕ ಮೌಲ್ಯಗಳನ್ನು ಸಂಸ್ಕೃತ ಭಾಷೆಯ ನೆಲೆಯಲ್ಲಿ ನಿರೂಪಣೆಗೊಳಿಸುವುದೇ ಸಾಹಿತ್ಯವೆಂಬ ನಿಲುವು ಬಹುಕಾಲ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತು. ಈ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯಾದ ಕನ್ನಡ ಮತ್ತು ಕನ್ನಡದ ನೆಲ, ಜಲ, ಆಚಾರ, ನಂಬಿಕೆಯಂತಹ ಜೀವನ ಮೀಮಾಂಸೆ ಹಾಗೂ ಸಾಹಿತ್ಯಕ್ಕೆ, ಬಹುದೊಡ್ಡ ತಡೆ ಉಂಟಾಗಿರಬಹುದು. ಈ ನಡುವೆಯೇ ಸಂಸ್ಕೃತ ಪ್ರಭುತ್ವವನ್ನು ದಾಟಿ ಕನ್ನಡದ ಕಸುವನ್ನು ಅಭಿವ್ಯಕ್ತಿಸುವ ಕಾರ್ಯವನ್ನು ಶ್ರೀವಿಜಯ ಕವಿರಾಜ ಮಾರ್ಗದಲ್ಲಿ ಗುರುತಿಸುತ್ತಾನೆ.

"ಕಾವೇರಿಯಿಂದಮಾ ಗೋದಾವರಿವರಮಿರ್ದನಾಡದ ಕನ್ನಡದೊಳ್ ಭಾವಿಸಿದ ಜನಪದಂ" ಕವಿರಾಜಮಾರ್ಗದ ಕನ್ನಡ ಭಾಷೆ, ನೆಲ, ಜಲ ಹಾಗೂ ಜನರ ಗುಣವನ್ನು ಮತ್ತು ಜಾನಪದ ಜೀವನ ಮೀಮಾಂಸೆಯ ಅಭಿವ್ಯಕ್ತಿಯನ್ನು ಮಂಡಿಸುತ್ತಾರೆ. ಈ

---

೯. ಸಿ.ಆರ್. ಯರವಿನ ತೆಲಿಮಠ, ದೇಶೀಯತೆ ಮತ್ತು ದೇಶಿವಾದ, ಪುಟ-೪೧

ಅಭಿವ್ಯಕ್ತಿಯ ಸಂಸ್ಕೃತ ಪ್ರಭುತ್ವ ಮತ್ತು ಪ್ರಾದೇಶಿಕ ಪ್ರಭುತ್ವದ ನಡುವಿನ ಸಂಘರ್ಷದಿಂದ ಜೀವಪಡೆದ ಸ್ಥಳೀಯತೆಯ ಬಿಂಬಗಳೆಂದು ಗುರುತಿಸಬಹುದು. ಬೆದಂಡೆ, ಚಿತ್ತಾಣ, ಭಾಜನೆಗಬ್ಬ ಎಂಬ ಕನ್ನಡದ ಸಾಹಿತ್ಯ ಪ್ರಕಾರಗಳನ್ನು ಹೆಸರಿಸುವ ಕವಿರಾಜ ಮಾರ್ಗಕಾರ, ನಮ್ಮ ನೆಲದ ಸತ್ವವಿರುವ ನುಡಿಗಟ್ಟುಗಳನ್ನು, ಹೋಲಿಕೆಗಳನ್ನು, ನಾಣ್ಣುಡಿಗಳನ್ನು ಬಳಸುತ್ತಾನೆ. ಈ ರೀತಿಯ ಸ್ಥಳೀಯ ನಿಲುವುಗಳನ್ನು ಗಮನಿಸಿದ ಅನೇಕ ಕನ್ನಡ ವಿಮರ್ಶಕರು ಕವಿರಾಜ ಮಾರ್ಗಕಾರನಿಂದ ಕನ್ನಡ ಸಾಹಿತ್ಯದಲ್ಲಿ ಮೊದಲು ಸ್ಥಳೀಯ ಪರಂಪರೆಯ ಎಳೆಗಳು ಜೀವಪಡೆದವು ಎಂಬುವುದನ್ನು ಸ್ಪಷ್ಟವಾಗಿ ನಿರೂಪಿಸುತ್ತಾರೆ.

ಪ್ರಾಚೀನ ಸಾಹಿತ್ಯ ಸಂದರ್ಭದಲ್ಲಿ ಸಂಸ್ಕೃತ ಪ್ರಭುತ್ವವು ತನ್ನ ಮೀಮಾಂಸೆಯನ್ನು ಹಾಗೂ ಭೂಯಿಷ್ಟತೆಯನ್ನು ನಿರಂತರವಾಗಿ ಕಾಪಾಡಿಕೊಂಡು ಮುಂದುವರಿಯಲು ಸಾಧ್ಯವಿಲ್ಲ. ಪ್ರಾದೇಶಿಕ ಭಾಷೆಯಾದ ಕನ್ನಡ ಹಾಗೂ ಸ್ಥಳೀಯ ನೆಲೆದ ಪರಂಪರೆಯನ್ನು ಸಾಹಿತ್ಯದ ಅಭಿವ್ಯಕ್ತಿಯಾಗಿ ರೂಪಿಸಿಕೊಂಡು ಸಂಸ್ಕೃತ ಪರಂಪರೆಯನ್ನು ದಾಟಿ ಸ್ವತಂತ್ರ ಅಸ್ತಿತ್ವವನ್ನು ಪಡೆದುಕೊಳ್ಳಲು ಕನ್ನಡದ ಕವಿಗಳಿಗೆ ಪೂರ್ಣ ಸಾಧ್ಯವಾಗಲಿಲ್ಲ. ಈ ಸಂದರ್ಭದಲ್ಲಿ ಕನ್ನಡ-ಸಂಸ್ಕೃತ ಸಂಕರವಾದ ಸಾಹಿತ್ಯ ಮಾದರಿಗಳು ರಚನೆಯಾಗಲು ಆರಂಭವಾಯಿತು. ಈ ಮಾದರಿಗಳನ್ನು ಚಂಪು ಸಾಹಿತ್ಯವೆಂದು ಗುರುತಿಸಬಹುದು. ಈ ರೀತಿಯ ಸಾಹಿತ್ಯಿಕ ಅಭಿವ್ಯಕ್ತಿಯನ್ನು ಮಾರ್ಗ-ದೇಶಿ, ಶಿಷ್ಯ-ಪರಿಶಿಷ್ಯ, ಬಿಗು-ಸಡಿಲ, ವಸ್ತುಕ-ವರ್ಣಕ, ಲಿಖಿತ-ಅಲಿಖಿತ ಎಂಬ ನೆಲೆಯಲ್ಲಿ ಕನ್ನಡದ ಅನೇಕ ಪಂಡಿತರು ಚರ್ಚಿಸಿದ್ದಾರೆ.



ಕನ್ನಡ ಮೊದಲ ಗದ್ಯ ಕೃತಿ ಎಂದು ಕರೆಯುವ ವಡ್ಡಾರಾಧನೆಯು ಸ್ಥಳೀಯತೆಯ ಭೂಮಿಕೆಯನ್ನು ಒಳಗೊಂಡಿರುವ ಅಪರೂಪದ ಗ್ರಂಥ, ಕನ್ನಡದ ಗದ್ಯ ಪರಂಪರೆಯನ್ನು ಗುರುತಿಸುವ ಗ್ರಂಥವಾಗಿಯೂ ಕನ್ನಡ ಸಂಸ್ಕೃತವನ್ನು ಸಮನವಾಗಿಸಿ ಮಾರ್ಗ ದೇಶಿಯನ್ನು ನಿರೂಪಿಸುವ ಕನ್ನಡದ ಮಹತ್ವದ ಕೃತಿಯಾಗಿ ಚರ್ಚೆಗೆ ಒಳಪಟ್ಟಿದೆ. ಸ್ಥಳೀಯತೆಯ ಪರಿಸರವನ್ನು, ಭಾಷೆಯನ್ನು, ನೆಲದ ಸತ್ವವನ್ನು ಪ್ರಧಾನವಾಗಿ ಅಭಿವ್ಯಕ್ತಿಸುವ ವಡ್ಡಾರಾಧನೆಯು ಕತೆಯ ಜೀವಸೆಲೆಯ ಭಾಗವನ್ನು ಸ್ಥಳೀಯತೆಯಾಗಿಯೇ ನಿರೂಪಿಸಿದೆ.

ಉದಾಹರಣೆಗೆ, ತಂಗೆ(ತಂಗಿ), ಉಣ್ಬಂ(ಉಣುವವನು) ಪಡೆಮಡು, ಓದುವಂ, ಕರ್ಚು, ಪುಳಿ, ಪಾಡು, ತೆಗಲೆ(ಎದೆ) ಅಬ್ಬೆ ಇತ್ಯಾದಿ. ವಡ್ಡಾರಾಧನೆಯು ಸ್ಥಳೀಯತೆಯ ಪ್ರಜ್ಞೆಯನ್ನು ಕಾಪಿಟ್ಟುಕೊಂಡಿದೆ ಎಂಬ ನಿಲುವನ್ನು ಪ್ರೊ. ಯರವಿನ ತೆಲಿಮಠ ಅವರ ಈ ಕೆಳಗಿನ ಮಾತು ಹೆಚ್ಚು ನಿಕರತೆಯನ್ನು ಒದಗಿಸುತ್ತದೆ. "ವಡ್ಡಾರಾಧನೆಯ ಕರ್ತೃ

ಶಿವಕೋಟಿ ಕನ್ನಡ ಮಾತಿನ ಜೀವಾಳವನ್ನು ಚೆನ್ನಾಗಿ ಅರಿತು ಅದನ್ನು ಅಂದವಾಗಿ ದೇಶಿಯಲ್ಲಿ ಹಿಡಿದಿಟ್ಟು, ಸಮಸ್ತ ಕನ್ನಡಿಗರಿಗೆ ಮಹಾದುಪಕಾರ ಮಾಡಿದ್ದಾನೆ. ದೇಶೀಯ ಬಳಕೆ ಅವನ ಕಥನ ಕಲೆಗೆ ಜೀವ ತುಂಬಿರುತ್ತದೆ. ಅವನ ಈ ಗ್ರಂಥ ಸಂಸ್ಕೃತ ಕನ್ನಡಗಳ ಸಮನ್ವಯದ ಉತ್ತರದಲ್ಲಿ ಮಾದರಿಯಾಗಿರುತ್ತದೆ.[೧೦]

ಸಂಸ್ಕೃತದ ಪ್ರಭುತ್ವದ ಸಂದರ್ಭದಲ್ಲಿ ವಡ್ಡಾರಾಧನೆಯಂತೆಯೇ ಸ್ಥಳೀಯತೆಯ ಪ್ರಜ್ಞೆಯನ್ನು ಕಾವ್ಯದ ನೆಲೆಯಲ್ಲಿ ಮಂಡಿಸಿ ಯಶಸ್ವಿಯಾದ ಮುಖ್ಯ ಕವಿ ಪಂಪ. ಚಂಪು ಎಂಬ ಕಾವ್ಯ ಮಾದರಿ ಈತನಿಂದ ಪ್ರಧಾನವಾದ ಸ್ಥಾನವನ್ನು ಪಡೆದುಕೊಂಡಿತು. ಪಂಪ ತನ್ನ ಕೃತಿಯಲ್ಲಿ ಮಾರ್ಗದೇಶಿಯನ್ನು ಸಮನ್ವಯಗೊಳಿಸಿದನಲ್ಲದೆ ಆಡುನುಡಿ, ಗಾದೆ, ನುಡಿಗಟ್ಟು, ನಾಣ್ಣುಡಿಯಂತಹ ಸ್ಥಳೀಯತೆಯ ಸತ್ವವಿರುವ ಪದವನ್ನೆ ಬಳಸಿರುವುದು ಗುರುತಿಸಬಹುದು. ಇದನ್ನು ಪಂಪನ ಮಾತಿನಲ್ಲಿ ಹೇಳುವುದಾದರೆ,

**"ಬಗೆಮುಸ ತಪ್ಪುದಾಗಿ ಮೃದು ಬಂಧದೊಳೊಂದು**
**-ವೊಂದಿ ದೇಸಿಯೊಳ್ ಪುಗುವುದು**
**ಪೊಕ್ಕು ಮಾರ್ಗದೊಳ್ ತಳ್ವುದ**
**ತಳ್ದೊಡೆ ಕಾವ್ಯಬಂಧ ಮೊಪ್ಪುಗಂ"**

ಪಂಪ ತನ್ನ ಕಾಲದಲ್ಲಿ ಸಂಸ್ಕೃತ ಪ್ರಭುತ್ವವನ್ನು ಮತ್ತು ರಾಜ ಶಾಹಿತ್ವವನ್ನು ದಾಟುವ ಕಡೆಗೆ ಮುಖಮಾಡುವ ಜೊತೆಗೆ ಕನ್ನಡ ಕಂಪನ್ನು ಕಾವ್ಯವಾಗಿಸುವ ಕಡೆಗೆ ನಡೆಯುತ್ತಾನೆ. ಈ ನಡೆಯೇ ಸ್ಥಳೀಯತೆಯ ಪರಿಕಲ್ಪನೆಗೆ ಹೊಸದಾದ ದಾರಿ ಮತ್ತು ಮಾರ್ಗದೇಶಿ ಸಂಕರದ ಚಂಪೂ ಮಾದರಿ ಉದಯಕ್ಕೆ ಕಾರಣವಾಗುತ್ತದೆ. ಪಂಪನು ತನ್ನ ಕಾವ್ಯದಲ್ಲಿ ಬಳಸುವ ಸ್ಥಳೀಯತೆಯ ಸತ್ವವಿರುವ ಪದಗಳನ್ನು ಉದಾಹರಿಸುವದಾದರೆ ತೆಗಲೆ, ಕಡಿತ, ಕಮ್ಮರಿ, ಪುಳಿಂಚು, ಕೊಡಸಾರಿ, ಜೊಂಪು ಇತ್ಯಾದಿ ಪದಗಳು, ಪರಿಗೊಳ್, ಮೂರುವಿಡು, ಕಣ್ಮಲೆ ಇತ್ಯಾದಿ ನುಡಿಗಟ್ಟುಗಳು, **'ಸೆಟ್ಟಿಯ ಬಳ್ಳಂ ಕಿರಿದು; ಬಡಿಗಂಡನಿಲ್ಲ ಪಾಲನೆ ಕಂಡಂ; 'ಅಕ್ಕಿಗೊಟ್ಟು ಮಡಗೂಮಿಣ್ಬಂದಂ'** ಎಂಬಿತ್ಯಾದಿ ಗಾದೆಗಳನ್ನು ಕಾವ್ಯದೊಳಗೆ ಬಳಸುತ್ತಾನೆ.

---

೧೦. ಸಿ.ಆರ್. ಯರವಿನ ತೆಲಮಠ, ದೇಶೀಯತೆ ಮತ್ತು ದೇಶೀವಾದ. ಪು೧-೬೩

ಪಂಪನಂತೆಯೇ ಕನ್ನಡ ಇತರ ಕವಿಗಳಾದ ರನ್ನ, ನಾಗವರ್ಮ, ನಾಗಚಂದ್ರ, ಜನ್ನ ಇತ್ಯಾದಿ ಕವಿಗಳು ಸಂಸ್ಕೃತ ಮಾದರಿಯ ಶಿಷ್ಟಕಾವ್ಯ ಪ್ರಕಾರದ ಪ್ರತಿಯಾಗಿ ತಮ್ಮದೇ ಆದ ನೆಲದ ಸತ್ವವಿರುವ ಕಾವ್ಯ ಮಾದರಿಯನ್ನು ಹುಟ್ಟುಹಾಕಿದರು. ಕಾವ್ಯದ ವಸ್ತು, ಪರಿಸರ, ಭಾಷೆ ಹಾಗೂ ಅಭಿವ್ಯಕ್ತಿಯ ವಿನ್ಯಾಸವು ಕನ್ನಡ ಜನರ ಜೀವನ ಮೀಮಾಂಸೆಯ ಭಾಗವಾಗಿಯೇ ನಿರೂಪಿತಗೊಂಡಿತು. ಸ್ಥಳೀಯತೆಯ ಭೂಮಿಕೆಯ ಕಾವ್ಯಗಳು ಇಲ್ಲವೆಂಬ ಮಟ್ಟಿಗೆ ಪ್ರಾಚೀನ ಕನ್ನಡ ಸಾಹಿತ್ಯವನ್ನು ಸ್ಥಳೀಯತೆಯು ಆವರಿಸಿತು ಎಂಬುವುದನ್ನು ನೆನಪು ಮಾಡಿಕೊಳ್ಳಬಹುದು.

೧೨ನೇ ಶತಮಾನದಲ್ಲಿ ಹುಟ್ಟಿಕೊಂಡ ವಚನ ಚಳುವಳಿಯು ಸ್ಥಳೀಯತೆಯ ನೆಲೆಗೆ ಬಹುದೊಡ್ಡ ಕೊಡುಗೆಯನ್ನು ಒದಗಿಸಿತು. ಸಂಸ್ಕೃತ ಪ್ರಧಾನವಾದ ಸಾಹಿತ್ಯ ಮೀಮಾಂಸೆ ಮತ್ತು ರಾಜಕೇಂದ್ರಿತ ಸಾಹಿತ್ಯ ಧೋರಣೆಯನ್ನು ನಿರಾಕರಿಸಿದ ಅನುಭಾವಿ ಶರಣರು ತಮ್ಮದೇ ವಚನ ಪರಂಪರೆಯನ್ನು ಹುಟ್ಟುಹಾಕಿದರು. ಸಾಮಾಜಿಕವಾಗಿ ಬಲವಾಗಿ ರೂಪುಗೊಂಡಿದ್ದ ವರ್ಣ ವ್ಯವಸ್ಥೆ ಮತ್ತು ವೈದಿಕ ಧರ್ಮ ಆಚರಣೆ, ನಂಬಿಕೆಯ ನೆಲೆಗಳನ್ನು ಮೀರಿ ಸಮಾನತೆಯ, ಮಾನವಪರವಾದ, ಜೀವಪರವಾದ ಸ್ಥಳೀಯತೆಯ ಸತ್ವದ ನೆಲೆಯಿಂದ ವಚನಗಳನ್ನು ಕನ್ನಡ ಭಾಷೆಯಲ್ಲಿಯೇ ಅಭಿವ್ಯಕ್ತಿಸಿದರು. ವಚನ ಸಾಹಿತ್ಯ ಚಳುವಳಿಯು ಗಂಡು ಹೆಣ್ಣು ಎಂಬ ಭೇದವಿಲ್ಲದೆ ಎಲ್ಲಾ ಸಮುದಾಯದ ಜೀವನ ಮೀಮಾಂಸೆಯ ಅಭಿವ್ಯಕ್ತಿಗೆ ಪರಿಸರವನ್ನು ಒದಗಿಸಿತು. ಸಮಾನತೆ, ಕಾಯಕ, ವೃತ್ತಿ ಗೌರವ, ಧಾರ್ಮಿಕ ಸ್ವಾಯತ್ತತೆಯನ್ನು ಎಲ್ಲಾ ವರ್ಗ ಹಾಗೂ ಸಮುದಾಯದ ಜನರಿಗೆ ದಕ್ಕಿಸುವ ಮೂಲಕ ವೈದಿಕ ವರ್ಣ ವ್ಯವಸ್ಥೆ ಹಾಗೂ ಜಾತಿಕೇಂದ್ರಿತ ಆಚರಣ ಪರಂಪರೆಯನ್ನು ಬುಡಮೇಲು ಮಾಡಿತು. ಸ್ಥಳೀಯ ಅಂಶಗಳನ್ನೇ ತನ್ನ ವಚನದ ಜೀವಾಳವಾಗಿಸುವ ಮೂಲಕ ಸ್ಥಳೀಯತೆಯ ಪರಿಕಲ್ಪನೆಗೆ ಪರಂಪರೆಯನ್ನು ಹುಟ್ಟು ಹಾಕಿದರು.

ಪ್ರೊ.ಸಿ.ಆರ್.ಯರವಿನ ತೆಲಿಮಠ ಅವರು ಭಕ್ತಿ ಚಳುವಳಿ ಮತ್ತು ವಚನ ಸಾಹಿತ್ಯವು ನಿರೂಪಿಸಿದ ಸ್ಥಳೀಯತೆಯ ಸ್ವರೂಪವನ್ನು ಹೀಗೆ ಗುರುತಿಸುತ್ತಾರೆ:

೧. ಭಕ್ತಿ ಚಳುವಳಿಯ ನೇತಾರರಲ್ಲಿ ಬಹುಪಾಲು ಬ್ರಾಹ್ಮಣೇತರರು. ಅವರು ಮುಖ್ಯವಾಗಿ ಕೆಳ ಸಮುದಾಯದ ಜನರು, ವೃತ್ತಿ ಜೀವಿಗಳು ಮತ್ತು ಹೆಂಗಸರು,

೨. ಸಂಸ್ಕೃತವನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನಾಗಿಸದೆ ಪ್ರಾದೇಶಿಕ ಭಾಷೆಗಳನ್ನು ಅಭಿವ್ಯಕ್ತಿಗಾಗಿ ಆಯ್ದುಕೊಂಡರು.

೩. **ಪ್ರೇಮ, ಭಾವಾವೇಶ ಮುಂತಾದ ವೈಯಕ್ತಿಕ ಭಾವನೆಗಳು ದೇವ-ಭಕ್ತ ಸಂಬಂಧಿ ಧೋರಣೆಗಳಲ್ಲಿ ವ್ಯಕ್ತವಾದವು.**[೧೧]

ವಚನಕಾರರು ಸ್ಥಳೀಯ ಸಂವೇದನೆಯನ್ನು ಸಾಹಿತ್ಯದ ಸಂವೇದನೆಯಾಗಿಸಿದರಿಂದ ಸ್ಥಳೀಯತೆಯ ಪರಿಕಲ್ಪನೆಯು ಬಹುತ್ವದ ರೂಪವನ್ನು ಪಡೆದುಕೊಂಡಿತು. ವಚನ ಸಾಹಿತ್ಯದ ಕಾಲವು ಪಂಪ ಕಾಲಘಟ್ಟದ ಮಾರ್ಗ ಸಾಹಿತ್ಯ ಮಾದರಿಗಳನ್ನು ಮೀರಿ ಸ್ಥಳೀಯ ಮಾದರಿಗೆ ಬದಲಾಯಿತಲ್ಲದೆ ವಚನವೆಂಬ ಜನಪರವಾದ ಮಾದರಿಯನ್ನು ನಿರ್ಮಿಸಿತು. ಆನಂತರದ ಮಧ್ಯಕಾಲೀನ ಸಂದರ್ಭಕ್ಕಾಗುವಾಗ ಸ್ಥಳೀಯ ಲೋಕ ಅತ್ಯಂತ ವಿಸ್ತರತೆಯನ್ನು ಪಡೆದುಕೊಂಡಿದ್ದನ್ನು ಕಾಣಬಹುದು. ಕುಮಾರವ್ಯಾಸನಂತಹ ಕವಿ ಓದುಗಬ್ಬದಿಂದ ಹಾಡುಗಬ್ಬದ ಕಡೆಗೆ ಮುಖಾಮಾಡಿರುವುದು ಸ್ಥಳೀಯತೆಯ ಮಹತ್ವವನ್ನು ಉಲ್ಲೇಖಿಸುತ್ತದೆ.

ಮಧ್ಯಕಾಲೀನ ಸಂದರ್ಭದ ಅನೇಕ ಕವಿಗಳು ತಮ್ಮ ಕಾವ್ಯ ರಚನೆಯ ಮಾದರಿಯಲ್ಲಿ ಹೊಸತನವನ್ನು ಗುರುತಿಸಿದರು. ಹರಿಹರನಂತಹ ಕವಿಯು ರಗಳೆಯನ್ನು, ಕುಮಾರವ್ಯಾಸ, ರಾಘವಾಂಕ, ಚಾಮರಸರಂತಹ ಕವಿಗಳು ಷಟ್ಪದಿಯನ್ನು ಕಾವ್ಯದ ರಚನಾ ಮಾದರಿಯಾಗಿಸಿಕೊಂಡರು. ಕನಕದಾಸರು ಕೀರ್ತನೆಯ ಮೂಲಕ ತನ್ನ ನೆಲದ ಸತ್ವವನ್ನು ಅಭಿವ್ಯಕ್ತಿಸಿದರೆ, ರತ್ನಾಕರವರ್ಣಿಯಂತಹ ಕವಿ ಸಾಂಗತ್ಯವೆಂಬ ಸ್ಥಳೀಯ ಮಟ್ಟವನ್ನು ಬಳಸುತ್ತಾನೆ. ಮಧ್ಯಕಾಲೀನ ಸಂದರ್ಭದಲ್ಲಿ ರಚನೆಯಾದ ಷಟ್ಪದಿ, ರಗಳೆ, ಕೀರ್ತನೆ, ಸಾಂಗತ್ಯಗಳಂತಹ ಕಾವ್ಯ ಮಾದರಿಗಳು ಜನಪದದ ಜೀವನ ಮೀಮಾಂಸೆಯನ್ನು ಸ್ಪರ್ಶಿಸಿದಲ್ಲದೇ ಹಾಡುಗಬ್ಬದಂತಹ ಸ್ಥಳೀಯ ಸಾಹಿತ್ಯ ಪರಂಪರೆಯನ್ನು ನಿರೂಪಿಸಿದವು. ಹಿ.ಚಿ. ಬೋರಲಿಂಗಯ್ಯ ಅವರ "ಹರಿಹರನೂ ಒಳಗೊಂಡಂತೆ, ಎಲ್ಲಾ ಶಿವಶರಣರಿಗೂ ಹಾಗೂ ದಾಸವರೇಣ್ಯರಿಗೆ ಸಾಂಪ್ರದಾಯಿಕ ಸಂಸ್ಕೃತ ಭೂಯಿಷ್ಠ ಕಾವ್ಯ ಶೈಲಿಯನ್ನು, ರಾಜಸತ್ತೆಯ ಸಾಮ್ರಾಜ್ಯಶಾಹಿಯನ್ನು ಮೀರುವ ಕ್ರಾಂತಿಕಾರಿ ವಸ್ತುವನ್ನು ಆಯ್ಕೆ ಮಾಡಿಕೊಂಡು ಅಚ್ಚಗನ್ನಡದ ರಗಳೆ, ವಚನಗಳಲ್ಲಿ ಬರೆದ ಕ್ರಮವೇ ದೇಶಿ'.[೧೨] ಎಂಬ ಮಾತು ಸ್ಥಳೀಯತೆಯ ನೆಲೆಯನ್ನು ಗಟ್ಟಿಗೊಳಿಸುತ್ತದೆ.

---

೧೧. ಹಿ.ಚಿ.ಬೋರಲಿಂಗಯ್ಯ, ಕನ್ನಡ ದೇಶಿ ಪರಂಪರೆ, ಪುಟ-೧೮

೧೨. ಸಿ.ಆರ್. ಯರವಿನ ತೆಲಿಮಠ, ದೇಶೀಯತೆ ಮತ್ತು ದೇಶಿವಾದ, ಪುಟ-೯೩

ವಿಜಯನಗರ ಸಾಮ್ರಾಜ್ಯದ ಆಶ್ರಯ ಮತ್ತು ವೈದಿಕ ನೆಲೆಯ ಮೂಲಕ ಜೀವಪಡೆದ ದಾಸಸಾಹಿತ್ಯ ಪರಂಪರೆಯು ಸಾಮಾನ್ಯ ಜನರಿಗೆ ಹತ್ತಿರವಾಗುವಂತಹ ಭಾಷೆಯಲ್ಲಿ ಹಾಡುಗಬ್ಬ ಮಾದರಿಯ ಕೀರ್ತನೆಯನ್ನು ಹುಟ್ಟು ಹಾಕಿತು. ವೈದಿಕ ಪ್ರಧಾನವಾದ ರಾಜಾಶ್ರಯದ ಪ್ರಾಚೀನ ಕಾವ್ಯಗಳ ಸಂಸ್ಕೃತ ಪ್ರಧಾನವಾದ ಸಾಹಿತ್ಯ ಮಾದರಿಯನ್ನು ನಿರ್ಮಿಸಿ ಕಾವ್ಯ ಮೀಮಾಂಸೆಯನ್ನೇ ಹುಟ್ಟು ಹಾಕಿತು, ಆದರೆ ಇದೇ ವೈದಿಕ ಪರಂಪರೆಯ ವಿಜಯನಗರದ ಆಶ್ರಯವನ್ನು ಪಡೆದ ಮಧ್ಯಕಾಲೀನ ಸಂದರ್ಭದ ದಾಸ ಸಾಹಿತ್ಯವು ಹಾಡುಗಬ್ಬ ಮತ್ತು ಕನ್ನಡ ಭಾಷೆಯನ್ನು ಬಳಸಿಕೊಂಡು ಸಾಮಾನ್ಯ ಜನರ ಬದುಕಿನ ಸತ್ವವನ್ನು ಒಳಗೊಂಡಿರುವುದು ಸ್ಥಳೀಯತೆಯ ಪ್ರಭಾವ ಮತ್ತು ಪ್ರೇರಣೆ ಎಂದರೆ ತಪ್ಪಾಗಲಾರದು.

ವಸಾಹತುಶಾಹಿತ್ವದ ನೆಲೆಯಿಂದ ಪ್ರವೇಶ ಪಡೆಯುವ ಅನ್ಯ ಸಂಸ್ಕೃತಿಯ ಆಕ್ರಮಣ, ಪ್ರಭುತ್ವದಂತಹ ಹಿಡಿತಗಳು ಸ್ಥಳೀಯತೆಯನ್ನು ಬಹುನೆಲೆಗಟ್ಟಿನಲ್ಲಿ ಅಭಿವ್ಯಕ್ತಿಸುವಂತೆ ಮಾಡಿದವು. ವಸಾಹತು ಮತ್ತು ವಸಾಹತುಶಾಹಿಯ ನಡುವಿನಸಂಪರ್ಕ, ಸಂಘರ್ಷ, ಸ್ವಪ್ರತಿಪಾದನೆ, ಅನುಕರಣೆ, ಜೀರ್ಣಿಸಿಕೊಳ್ಳುವ ಕ್ರಿಯೆ, ಒಪ್ಪಂದ, ಶರಣಾಗತಿಗಳಂತಹ ಘಟನೆಗಳು ಕನ್ನಡ ಸಾಹಿತ್ಯದ ಶೋಧಕ್ಕೆ ದಾರಿಯನ್ನು ಮಾಡಿಕೊಟ್ಟಿತು.

ವಿಜಯನಗರ ಪತನದ ನಂತರದ ಕಾಲಮಾನದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯ ತನ್ನ ಅಸ್ಮಿತೆಯನ್ನು ಕಳೆದುಕೊಳ್ಳುತ್ತಾ ಬಂದಿತು, ಮೈಸೂರು ಭಾಗದಲ್ಲಿ ರಾಜಾಶ್ರಯದಲ್ಲಿ ನಾಟಕ ಮತ್ತು ಧಾರ್ಮಿಕ ಸಾಹಿತ್ಯದ ರಚನೆ ನಿಧಾನಗತಿಯಲ್ಲಿ ಬೆಳವಣಿಗೆಯಾಗುತ್ತಿದ್ದ ಕಾಲದಲ್ಲಿ ಹೈದರ್ ಅಲಿ ಮತ್ತು ಟಿಪ್ಪುವಿನ ಆಳ್ವಿಕೆಗೆ ಸಿಕ್ಕ ಮೈಸೂರು ಸಾಹಿತ್ಯಿಕವಾಗಿ ಬಡವಾಗುತ್ತ ನಡೆಯಿತು. ೧೭೭೯ ರಲ್ಲಿ ಆಂಗ್ಲರು ಟಿಪ್ಪುವನ್ನು ಸೋಲಿಸಿ ಕನ್ನಡದ ಭಾಗವನ್ನು ನಾಲ್ಕು ಭಾಗಮಾಡಿ ಹಂಚಿಕೆ ಮಾಡಿದ ಮೇಲೆ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಕತ್ತಲೆಯ ಯುಗ ಪ್ರಾಪ್ತವಾಯಿತು.

ವಸಾಹತುಶಾಹಿ ಭಾರತವನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡ ಮೇಲೆ ಭಾರತದ ದಿಕ್ಕು ದೆಸೆಯೇ ಬದಲಾಯಿತು. ವಸಾಹತುಶಾಹಿ ಪ್ರಭುತ್ವ ಭಾರತವು ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ ಹಾಗೂ ಜನಾಂಗೀಯವಾಗಿ ನಿಯಂತ್ರಣಕ್ಕೆ ಒಳಪಟ್ಟ ಮೇಲೆ ತನ್ನ ಸಾಂಸ್ಕೃತಿಕ ಚಿಗುರುಗಳನ್ನು ಬಾಡಿಸಿಕೊಂಡಿತು ಮತ್ತು ತನ್ನ ಪರಂಪರೆಯ ಸತ್ವಗಳು ಅಸ್ತಿತ್ವವನ್ನು ಪಡೆದುಕೊಳ್ಳಲು ಬಲವಾದ ಸಂಘರ್ಷವನ್ನು ನಡೆಸಬೇಕಾದ ಅನಿವಾರ್ಯತೆ ಹುಟ್ಟಿಕೊಂಡಿತು. ಈ ನಡುವೆ ಆಂಗ್ಲ ವಸಾಹತುಶಾಹಿಯು

ರೂಪಿಸಿದ ಆಡಳಿತ ಇಂಗ್ಲಿಷ್ ಶಿಕ್ಷಣ, ವೈಚಾರಿಕ ಮನೋಧರ್ಮ, ಪಾಶ್ಚಾತ್ಯ ಸಾಹಿತ್ಯ, ಪೌರಾತ್ಯವಾದ, ಕೈಗಾರಿಕೀಕರಣ ಹಾಗೂ ಆಧುನಿಕ ಪರಿಕಲ್ಪನೆಗಳು ಪಾಶ್ಚಾತ್ಯ ಸಂಸ್ಕೃತಿಯನ್ನು ಭಾರತದ ನೆಲೆಯಲ್ಲಿ ಪ್ರಧಾನಕ್ಕೇರಿಸಿದವು. ವಿಜ್ಞಾನ, ಕಾನೂನು, ಪಾಶ್ಚಾತ್ಯ ವಿಚಾರ ಸಾಹಿತ್ಯವು ಭಾರತೀಯರಿಗೆ ಬಹು ಆಕರ್ಷಿತ ವಲಯವಾಯಿತು. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದ ಭಾರತೀಯ ಮನಸ್ಸುಗಳು ಭಾರತೀಯ ಮೌಲ್ಯ, ಆಚಾರ, ಪರಂಪರೆ, ಜೀವನ ಮೀಮಾಂಸೆಯನ್ನು ವ್ಯಂಗ್ಯವಾಗಿ ಕಾಣುವ ಕಡೆಗೆ ಮುಖಮಾಡಿದವು. ಈ ರೀತಿಯ ವಸಾಹತುಶಾಹಿಯ ಸಂಸ್ಕೃತಿಯ ಅನುಕರಣೆಯ ಸತ್ವನ್ನು ನಿರಾಕರಿಸುವ ಪರಂಪರೆಯನ್ನು ಭಾರತೀಯ ನೆಲದಲ್ಲಿ ಹುಟ್ಟುಹಾಕಿತು.

ಭಾರತೀಯ ನೆಲದ ಸತ್ವವನ್ನು ಹೊಂದಿರುವ ಸಾಂಸ್ಕೃತಿಕ ಪರಂಪರೆಯು ವಸಾಹತುಶಾಹಿ ಪ್ರಭುತ್ವದ ಸಾಂಸ್ಕೃತಿಕ ಲೋಕದೊಂದಿಗೆ ಸಂಪರ್ಕ ಸಾಧಿಸಿದ ನಂತರದಲ್ಲಿ ವಸಾಹತುಶಾಹಿಯು ತನ್ನ ಸಾಂಸ್ಕೃತಿಕ ಬಿಂಬವನ್ನು ಪ್ರಭುತ್ವದ ನೆಲೆಯಿಂದ ಪ್ರಧಾನವೆಂದು ನಿರೂಪಿಸಿ ಕಾರ್ಯಗತಗೊಳಿಸಿತು. ನಮ್ಮ ಸ್ಥಳೀಯವಾದ ಸಂಸ್ಕೃತಿ, ಪರಂಪರೆ, ಜೀವನ ವಿಧಾನಗಳು ವಸಾಹತುಶಾಹಿಯ ಸಂಸ್ಕೃತಿಯ ಅಧೀನಕ್ಕೆ ಒಳಗಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಕಡೆಗೆ ಸಾಗಿತು. ಇಂತಹ ಕಾಲಮಾನದಲ್ಲಿ ವಸಾಹತುಶಾಹಿತ್ವದ ವಿರೋಧವಾಗಿ ಭಾರತೀಯ ಸಾಂಸ್ಕೃತಿಕ ಪ್ರಜ್ಞೆ ರೂಪುಗೊಂಡಿತು. ಈ ಪ್ರಜ್ಞೆಯೇ ಸ್ಥಳೀಯತೆಯನ್ನು ಕಟ್ಟಿತ್ತಲ್ಲದೆ ನಮ್ಮ ಸಾಹಿತ್ಯ ಮತ್ತು ಹೋರಾಟದ ಮಾದರಿಯಲ್ಲಿ ಸ್ಥಳೀಯತೆಯನ್ನು ಪುನಾರೂಪಿಸುವ ಕಾರ್ಯವನ್ನು ಮಾಡಿತು. ವಸಾಹತುಶಾಹಿ ಆಳ್ವಿಕೆಯ/ಪ್ರಭುತ್ವದ ಉಪ ಉತ್ಪನ್ನದಂತೆ ಕನ್ನಡ ಸಾಹಿತ್ಯದಲ್ಲಿ ಜೀವಪಡೆದ ಪರಿಕಲ್ಪನೆಯೇ ಸ್ಥಳೀಯತೆ. **"ಭಾರತೀಯ ಸಂಸ್ಕೃತಿಯ ಬಗೆಗೆ ಪ್ರೀತಿ ಆದರವಿದ್ದಾಗ್ಯೂ ಕನ್ನಡ ಬರಹಗಾರರಿಗೆ ಕನ್ನಡದ, ಕನ್ನಡ ಸಾಹಿತ್ಯ ಸಂಸ್ಕೃತಿಯ ಪುನರುಜ್ಜೀವನವೇ ಮುಖ್ಯವಾಯಿತು. ರಾಷ್ಟ್ರ ಮಟ್ಟದಲ್ಲಿ ಸ್ವದೇಶಿವಾದ ಮತ್ತು ರಾಷ್ಟ್ರೀಯತೆಗಳು ಗಮನ ಸೆಳೆದರೆ, ಪ್ರಾದೇಶಿಕ ಮಟ್ಟದಲ್ಲಿ ಪ್ರಾದೇಶಿಕ ಸಂಸ್ಕೃತಿಯ ಪರವಾದ ನಿಲುವು ಮಹತ್ವದ್ದಾಗಿತ್ತು."**[೧೩]

---

೧೩. ಹಿ.ಚಿ. ಬೋರಲಿಂಗಯ್ಯ, ಕನ್ನಡ ದೇಶಿ ಪರಂಪರೆ, ಪುಟ–೧೮

ಸ್ಥಳೀಯತೆ ಎಂದರೇ ವಸಾಹತುಶಾಹಿತ್ವದ ಪ್ರಭುತ್ವಕ್ಕೆ ಸಿಕ್ಕು ಅಳಿವಿನ ದಾರಿಯಲ್ಲಿ ಸಾಗುತ್ತಿದ್ದ ನಮ್ಮ ನೆಲದ ಕಸುವಾಗಿದ್ದ ರೂಢಿ, ಆಚಾರ, ನಂಬಿಕೆ, ಸಂಪ್ರದಾಯ, ಜೀವನ ಮೌಲ್ಯ, ಆದರ್ಶ, ದುಡಿಮೆ, ನೆಲ–ಜಲ ಹಾಗೂ ಮಾನವೀಯ ಸಂಬಂಧಗಳನ್ನು ಸಾಹಿತ್ಯದ ಭೂಮಿಕೆಯಾಗಿ ಮರುಕಟ್ಟುವ ಕಾರ್ಯ ನಡೆಯಿತು. ಈ ಕಾರ್ಯದ ಒಟ್ಟು ತಾತ್ವಿಕತೆಯೇ ಸ್ಥಳೀಯತೆಯಾಗಿದೆ. "ವಸಾಹತುಶಾಹಿ ಮೌಲ್ಯಗಳನ್ನು ವಿರೋಧಿಸುವವರಿಗೆ ಭಾರತೀಯತೆಯೇ ಒಂದು ದೇಶಿ".[೧೪] ಎಂಬ ಹಿ.ಚಿ. ಬೋರಲಿಂಗಯ್ಯ ಅವರ ಮಾತು ವಸಾಹತುಶಾಹಿ ಸಂದರ್ಭದ ಸ್ಥಳೀಯತೆಯ ಅಭಿವ್ಯಕ್ತಿಯನ್ನು ಗುರುತಿಸುತ್ತದೆ. ಒಟ್ಟಿನಲ್ಲಿ ಸ್ಥಳೀಯತೆ ಎನ್ನುವುದು ಕನ್ನಡ ಸಾಹಿತ್ಯದ ಜೀವಾಳವಾಗಿ, ಜೀವನ ಮೀಮಾಂಸೆಯ ಅಭಿವ್ಯಕ್ತಿಯ ಮಾದರಿಯಾಗಿ ಬಹುತ್ವನೆಲೆಯಲ್ಲಿ ಆವರಿಸಿಕೊಂಡ ಜನಪರವಾದ ಪರಿಕಲ್ಪನೆಯಾಗಿದೆ.

ಕನ್ನಡದ ಮೊದಲ ತಲೆಮಾರಿನ ಸಾಹಿತ್ಯದ ಮುಖ್ಯ ಒಲವು ಪ್ರಾದೇಶಿಕತೆ, ಕನ್ನಡ ನೆಲ–ಜಲ–ಭಾಷೆ, ಸ್ಥಳೀಯ ನೆಲದ ಮೀಮಾಂಸೆಯಾಗಿದೆ, ವಸಾಹತುಶಾಹಿತ್ವದ ಪ್ರೇರಣೆ ಮತ್ತು ಪ್ರಭಾವದಿಂದ ಜೀವಪಡೆದ ಮೊದಲ ತಲೆಮಾರಿನ ಕಥಾ ಪರಂಪರೆಯು ಸ್ಥಳೀಯತೆಯನ್ನೇ ತನ್ನ ಭೂಮಿಕೆಯಾಗಿ ರೂಪಿಸಿಕೊಂಡಿತು. ಪಾಶ್ಚಾತ್ಯ ಮಾದರಿಯ ಶಾರ್ಟ್‌ಸ್ಟೋರಿಯ ಪ್ರಭಾವವಿದ್ದರೂ ಸಣ್ಣಕತೆಗಳ ಸತ್ವ ಮತ್ತು ಜೀವಕೇಂದ್ರಿತ ಆಲೋಚನೆ ಸ್ಥಳೀಯವೇ ಆಗಿದೆ. ಪಂಜೆ, ಮಾಸ್ತಿ, ಕುವೆಂಪು, ಎಂ.ಎನ್.ಕಾಮತ್, ಸೇಡಿಯಾಪು ಕೃಷ್ಣಭಟ್ಟ, ವಾಣಿ, ತ್ರಿವೇಣಿ, ಬೇಂದ್ರೆ, ಬಾಗಲೋಡಿ ದೇವರಾಯ ಮುಂತಾದ ಮೊದಲ ತಲೆಮಾರಿನ ಕತೆಗಾರರು ಸ್ಥಳೀಯತೆಯನ್ನು ತಮ್ಮ ಕತೆಯ ಕೇಂದ್ರವಾಗಿಸಿಕೊಂಡು ವಿಭಿನ್ನ ನೆಲೆಯಲ್ಲಿ ಅಭಿವ್ಯಕ್ತಿಸುವ ಮೂಲಕ ಒಂದು ಕಥನ ಪರಂಪರೆಯನ್ನು ಹುಟ್ಟು ಹಾಕುತ್ತಾರೆ, ಈ ಮಹಾ ಪ್ರಬಂಧದಲ್ಲಿ ಸ್ಥಳೀಯತೆಯನ್ನು ನಮ್ಮ ನೆಲದ ಆಚಾರ, ನಂಬಿಕೆ, ಭಾಷೆ, ಪರಂಪರೆ, ದುಡಿಮೆ, ದೈವ, ನೀತಿ–ನಿಯಮ ಮೌಲ್ಯ, ತತ್ವ ಆದರ್ಶ, ನೆರೆಕರೆ ಎಂಬ ಇತ್ಯಾದಿ ನಮ್ಮ ಬದುಕಿನ ಪರಿಸರದ ಗುಣಾತ್ಮಕವಾದ ಸಂಕಥನವೆಂದು ಚರ್ಚಿಸಲಾಗಿದೆ, ಸ್ಥಳೀಯತೆಯು ಇಲ್ಲಿ ಏಕಮಾದರಿಯಲ್ಲಿ ನಿರೂಪಿತಗೊಳ್ಳದೆ ಬಹುತ್ವದ ಆಯಾಮವನ್ನು ಹೊಂದಿದೆ. ಸಮುದಾಯ ಒಂದು ಭಿನ್ನ ಸಂಸ್ಕೃತಿಯ ಸಂಪರ್ಕ ಸಂಘರ್ಷ ಸಂಕರವಾಗುವ ಕಾಲದಲ್ಲಿ ಸ್ಥಳೀಯತೆಯು ಸೃಜನಶೀಲವಾಗಿ ಕಾರ್ಯ

---

೧೪. ರಾಜೇಂದ್ರ ಚೆನ್ನಿ, ದೇಸೀಯತೆ ಮತ್ತು ಮೂಲಭೂತ ಪ್ರಶ್ನೆಗಳು. ಪು. ೫೧.

ನಿರ್ವಹಿಸಿದೆ. ಒಂದು ಕಾಲಮಾನದಲ್ಲಿ ಸ್ಥಳೀಯತೆಯ ಸ್ವರೂಪವನ್ನು ಹೊಂದಿರುವ ವಸ್ತು, ಆಲೋಚನೆ, ಜೀವನ ಸತ್ವಗಳು ಇನ್ನೊಂದು ಕಾಲಮಾನದಲ್ಲಿ ಆಧುನಿಕವಾಗಿಯೂ, ಆಧುನಿಕವಾಗದ ಸತ್ವಗಳು ಸ್ಥಳೀಯವಾಗಿ ರೂಪುಗೊಳ್ಳುವುದು ಸ್ಥಳೀಯತೆಯ ವೈಶಿಷ್ಟ್ಯವಾಗಿದೆ.

ಅಧ್ಯಾಯ - ೪

# ಮೊದಲ ತಲೆಮಾರಿನ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ

ಮೊದಲ ತಲೆಮಾರಿನ ಕತೆಗಳು ರಾಜಕೀಯ ಮತ್ತು ಸಾಂಸ್ಕೃತಿಕ ಸಂಘರ್ಷದ ನಡುವಿನಲ್ಲಿ ರಚನೆಗೊಂಡಿವೆ. ಈ ಎಲ್ಲಾ ಕತೆಗಳು ನಮ್ಮ ನೆಲದ ಆಚರಣೆಯನ್ನು, ನಂಬಿಕೆಯನ್ನು, ಜೀವನ ಮೀಮಾಂಸೆಯನ್ನು ತಾತ್ವಿಕವಾಗಿ ಮಂಡಿಸುತ್ತವೆ. ಪ್ರಾಚೀನ ಹಾಗೂ ಮಧ್ಯಕಾಲೀನ ಕಥಾಸಾಹಿತ್ಯದ ಸತ್ವವನ್ನು ಮನಸ್ಸಿನಲ್ಲಿಟ್ಟುಕೊಂಡು ವಸಾಹತುಶಾಹಿಯು ರೂಪಿಸಿದ ಜ್ಞಾನ, ಆಡಳಿತಾತ್ಮಕ ಧೋರಣೆಯ ಪರಿಸರಕ್ಕೆ ಪ್ರತಿಕ್ರಿಯೆಯನ್ನು ಒಡ್ಡುವ ನೆಲೆಯಲ್ಲಿ ರಚನೆಯಾದಂತೆ ಕಾಣುವ ಸಣ್ಣಕತೆಗಳು ವಸಾಹತುಶಾಹಿ ಧೋರಣೆಯನ್ನು ಒಪ್ಪಿಕೊಳ್ಳುವ, ನಿರಾಕರಿಸುವ ಹಾಗೂ ಸ್ಥಳೀಯ ಜೀವನ ಪರಂಪರೆ, ಪರಿಸರ, ಪರಿಕರಗಳನ್ನು ಪ್ರಧಾನವೆಂದು ನಿರೂಪಿಸುವ ಧೋರಣೆಯ ಮೂಲಕ ಸ್ಥಳೀಯತೆಯ ಪ್ರಜ್ಞೆಯು ಅಭಿವ್ಯಕ್ತಗೊಂಡಿರುವುದನ್ನು ಗುರುತಿಸಬಹುದು.

ಸ್ಥಳೀಯತೆಯು ಮೊದಲ ತಲೆಮಾರಿನ ಕತೆಗಳಲ್ಲಿ ವಿಭಿನ್ನ ತೆರನಾಗಿ ವ್ಯಕ್ತವಾಗಿದೆ. ಸ್ಥಳೀಯತೆ ಎನ್ನುವುದು ನಮ್ಮ ನೆಲದ ಪರಂಪರೆಯೊಂದಿಗೆ ಬೆಸೆದುಕೊಂಡಿರುವ ಜೀವನ ಮೌಲ್ಯ, ನಂಬಿಕೆ, ಆಚಾರ, ಸಂಸ್ಕೃತಿ, ಧರ್ಮ, ಭಾಷೆಯನ್ನು ಸಂಕರಿಸುವ ನೆಲೆಯಲ್ಲಿ ಗುಣಾತ್ಮಕವಾದದ್ದು ಎಂಬ ನಿಲುವಿನಲ್ಲಿ ಮಂಡಿಸಿದ ಬಗೆ. ವಸಾಹತುಶಾಹಿಯ ಉತ್ತಮವಾದ ಆದರ್ಶವನ್ನು ನಮ್ಮ ಸ್ಥಳೀಯ ಭೂಮಿಕೆಯೊಳಗೆ ಸಂಕರವಾಗಿಸಿ ಮಂಡಿಸಿದ ನಿಲುವುಗಳ ಅಭಿವ್ಯಕ್ತಿಯಲ್ಲಿ ಸ್ಥಳೀಯ ಸ್ವರೂಪವನ್ನು ಕಂಡುಕೊಳ್ಳಬಹುದು. ಮೊದಲ ತಲೆಮಾರಿನ ಕತೆಗಳಲ್ಲಿ ಸ್ಥಳೀಯ ಸ್ವರೂಪವು ಏಕಮುಖವಾಗಿರದೆ, ಬಹು ಆಯಾಮಗಳಲ್ಲಿ ನಿರೂಪಣೆಗೊಂಡಿದೆ. ಹಾಗೆ ಬಹುತ್ವದ ಬಗೆಯಲ್ಲಿ ಕತೆಯಲ್ಲಿ ಕಾಣಿಸಿಕೊಳ್ಳುವ ಸ್ಥಳೀಯ

ಸ್ವರೂಪವನ್ನು ಕತೆಯ ನೆಲೆಯಿಂದ ಚರ್ಚೆಗೆ ಒಳಪಡಿಸುವುದಾದರೆ.

**ಪಂಜೆ ಮಂಗೇಶರಾಯರ ಕತೆಗಳಲ್ಲಿ ಸ್ಥಳೀಯತೆಯ ಸ್ವರೂಪ**

ಕನ್ನಡದ ಮೊದಲ ತಲೆಮಾರಿನ ಕತೆಯು ಆರಂಭವಾಗುವುದು ಪಂಜೆ ಮಂಗೇಶರಾಯರಿಂದ. ಕನ್ನಡದ ಸಾಹಿತ್ಯ ಚರಿತ್ರೆಯು ಪಂಜೆಯವರನ್ನು ಸಣ್ಣಕತೆಗಳನ್ನು ಬರೆದ ಮೊದಲಿಗರೆಂದು ಗುರುತಿಸುತ್ತದೆ (೧೯೦೦ರಲ್ಲಿ 'ನನ್ನ ಚಿಕ್ಕ ತಾಯಿ) ಪಂಜೆಯವರು ಪ್ರಾಚೀನ ಹಾಗು ಮಧ್ಯಕಾಲೀನ ಸಾಹಿತ್ಯದಲ್ಲಿ ಕತೆಯ ಧೋರಣೆಯನ್ನು ಮನಸಿನಲ್ಲಿ ಇಟ್ಟುಕೊಂಡು ವಸಾಹತುಶಾಹಿಯು ರೂಪಿಸಿದ ಆಡಳಿತ ಹಾಗೂ ಸಾಂಸ್ಕೃತಿಕ ಪರಿಸರಕ್ಕೆ ಸ್ಥಳೀಯ ಜನರ ಜೀವನದ ಪ್ರತಿಕ್ರಿಯೆ, ವಸಾಹತುಶಾಹಿಯ ಧೋರಣೆಗೆ ಹೊಂದಿಕೊಳ್ಳುವ ಮತ್ತು ಹೊಂದಿಕೊಳ್ಳಲಾಗದ ಸ್ಥಿತಿಯನ್ನು ಸ್ಥಳೀಯತೆ ಎಂಬ ಲೋಕ ದೃಷ್ಟಿಯ ನೆಲೆಯಲ್ಲಿ ಅಭಿವ್ಯಕ್ತಿಸುತ್ತಾರೆ. ಪಂಜೆಯವರ ಕತೆಗಳಲ್ಲಿ ಕುಟುಂಬ ಹಾಗೂ ಕುಟುಂಬದ ವ್ಯವಹಾರ ಹಾಗೂ ಮಾನವ ಸಂಬಂಧವೇ ಪ್ರಧಾನವಾದ ವಸ್ತುಗಳಾಗಿ ನಿರೂಪಣೆಯಾಗಿದೆ. ವಸಾಹತುಶಾಹಿಯ ಆಧುನಿಕತೆಗೆ ಪರ್ಯಾಯವಾಗಿ ಸ್ಥಳೀಯತೆಯನ್ನು ಆಶಯವನ್ನಾಗಿ ಪಂಜೆಯವರ ಕತೆಗಳಲ್ಲಿ ಗುರುತಿಸಬಹುದು.

'ಕಮಲಪುರದ ಹೋಟ್ಲಿನಲ್ಲಿ' ಕತೆಯು ವ್ಯವಹಾರಿಕ ಪರಿಸರದ ಜೀವನ ಕ್ರಮವನ್ನು ನಿರೂಪಿಸುತ್ತದೆ. ವಸಾಹತುಶಾಹಿಯ ಪ್ರಭಾವದಿಂದ ಹುಟ್ಟಿಕೊಂಡ ಹೊಟೇಲ್‌ಗಳು ಹೇಗೆ ಜನರಿಗೆ ಹೊಟ್ಟೆ ಮತ್ತು ಬಾಯಿಯ ಹಸಿವನ್ನು ನೀಗಿಸುವ ಕೇಂದ್ರಗಳಾದವು ಎಂಬುದನ್ನು ನಿರೂಪಿಸುವ ಜೊತೆಗೆ ಅನ್ನವನ್ನು ಒದಗಿಸುವ ಕೇಂದ್ರಗಳು ಸುಳ್ಳು ಹಾಗೂ ಮೋಸದ ನೆಲೆಯಿಂದ ಅನೇಕ ತಂತ್ರಗಳನ್ನು ಬಳಸಿ ಜನರನ್ನು ತಮ್ಮ ಗಿರಾಕಿಗಳಾಗಿ ಮಾಡಿಕೊಳ್ಳುವ ನೆಲೆಯನ್ನು ನಿರೂಪಿಸುವ ಕತೆಯು ಸ್ಥಳೀಯತೆ ನೆಲೆಯಲ್ಲಿ ರೂಪುಗೊಂಡಿದ್ದ ಅನ್ನದಾನದಂತಹ ಭಾರತೀಯ ಪರಂಪರೆಯು ವಸಾಹತುಶಾಹಿಯ ಪ್ರಭಾವಕ್ಕೆ ಒಳಗಾದ ಮೇಲೆ ವ್ಯಾವಹಾರಿಕ ಸಂಬಂಧವನ್ನು ಪಡೆದುಕೊಂಡ ಬಗೆಯನ್ನು, ಮೋಸ, ವಂಚನೆ ಹಾಗೂ ಅನೈತಿಕ ಸಂಬಂಧಗಳ ನೆಲೆಯನ್ನು ಹೊಟೇಲ್‌ನ ಪೂರ್ಣಸ್ವಾಮಿ ಅಯ್ಯಂಗಾರ ನೆಲೆಯಲ್ಲಿ ಅಭಿವ್ಯಕ್ತಿಸುತ್ತಾರೆ.

ವಸಾಹತುಶಾಹಿಯ ನಿಯಂತ್ರಿತ ಹಾಗೂ ಚಲನ-ವಲನದ ಪ್ರದೇಶವಾದ ಬಂದರಿನ ಆಯಕಟ್ಟಿನಲ್ಲಿ ಪೂರ್ಣಸ್ವಾಮಿ ಹೊಟೇಲ್ ಒಂದನ್ನು ರೂಪಿಸಿ ಕಾಫಿ, ತಿಂಡಿ ಇತ್ಯಾದಿಗಳಿಂದ ತನ್ನ ವ್ಯವಹಾರವನ್ನು ಆರಂಭಿಸಿ, ಜನರನ್ನು ತನ್ನ ಗಿರಾಕಿಗಳಾಗಿಸಿಕೊಳ್ಳಲು ಸುಳ್ಳುಕತೆಗಳನ್ನು

ತನ್ನ ಜೀವನ ಅನುಭವೆಂದು ಹೇಳುವ ಮೂಲಕ ಕಾಫಿ ಕುಡಿಯಲು ಬಂದ ಗಿರಾಕಿಗಳನ್ನು ತಿಂಡಿ ತಿಂದು, ಊಟ ಮಾಡಿ ಹೋಗುವಂತೆ ಮಾಡುವ ಕೌಶಲ್ಯವನ್ನು ಪೂರ್ಣಸ್ವಾಮಿ ರೂಪಿಸುತ್ತಾರೆ. ಆದರೆ ಹೆಚ್ಚು ದಿನ ಈ ರೀತಿಯ ಪೂರ್ಣಸ್ವಾಮಿಯ ಬಣ್ಣದ ಮಾತುಗಳನ್ನು ನಂಬದ ಜನರು ಅವನ ಮಾತನ್ನು ಹಾಸ್ಯವಾಗಿ ಕಂಡು ಕೊಂಡಾಗ ಪೂರ್ಣಸ್ವಾಮಿಯು ತನ್ನ ಗೆಳೆಯನಾದ ಗುಂಡಾಚಾರ್ಯನನ್ನು ಗುಟ್ಟಾಗಿ ಕರೆಸಿ, ತನ್ನ ಸುಳ್ಳು ಮಾತುಗಳಿಗೆ ಸಾಕ್ಷಿಯನ್ನು ಒದಗಿಸಲು ಒಂದು ತಂತ್ರವನ್ನು ರೂಪಿಸುತ್ತಾನೆ. ಗುಂಡಾಚಾರ್ಯನು ಬಣ್ಣದ ಮಾತುಗಳಿಂದ ಶಾಮರಾಯ ಮತ್ತು ಕಪ್ಪಣ್ಣನಿಗೆ ಪೂರ್ಣಸ್ವಾಮಿಯ ಬದುಕಿನ ಸಾಹಸವನ್ನು ಹೇಳಿ ನಂಬಿಕೆ ಹುಟ್ಟಿಸುತ್ತಾನೆ. ತದನಂತರದಲ್ಲಿ ಪೂರ್ಣಸ್ವಾಮಿಯ ಹೊಟೇಲ್‌ನಲ್ಲಿ ಉಳಿದುಕೊಳ್ಳುವುದನ್ನು ನಿರಾಕರಿಸಿದ ಪೊನ್ನಸ್ವಾಮಿಯು ಗುಂಡಾಚಾರ್ಯನನ್ನು ಹೊಟೇಲ್‌ನ್ನು ಬಿಟ್ಟು ಹೋಗುವಂತೆ ಒತ್ತಾಯಿಸುತ್ತಾನೆ. ಈ ನಡುವೆ ಗುಂಡಾಚಾರ್ಯನು ಕಪ್ಪಣ್ಣ ಹಾಗೂ ಶಾಮರಾಯರಿಗೆ 'ಈ ಲೋಕದಲ್ಲಿ ನಾನು ಒಬ್ಬನೇ, ನನ್ನಿಂದ ಉಪಕಾರ ಹೊಂದಿದವರು ಹಲವರಿದ್ದಾರೆ.' ನನ್ನನ್ನು ಪೂರ್ಣಸ್ವಾಮಿಯುವರು ಒತ್ತಾಯದಿಂದ ಕಳಿಸುತ್ತಿದ್ದರೆಂದು ದೂರುತ್ತಾನೆ. ಪೂರ್ಣಸ್ವಾಮಿಯು ಹೆದರಿದನಲ್ಲದೆ ತನ್ನೊಂದಿಗೆ ಗುಂಡಾಚಾರ್ಯನಿದ್ದರೆ ತನ್ನ ನಿಜ ಜೀವನದ ವೃತ್ತಾಂತವೆಲ್ಲ ಜನರಿಗೆ ತಿಳಿಯುತ್ತದೆಂದು ೧೬ ರೂ. ನೀಡಿ ಒತ್ತಾಯದಿಂದ ಗುಂಡಾಚಾರ್ಯನನ್ನು ಕಳಿಸುತ್ತಾನೆ.

ಕತೆಯು ಹೊಟೇಲ್‌ನ್ನು ಕೇಂದ್ರವಾಗಿಸಿಕೊಂಡರೂ ಮಾನವ ಬದುಕಿನ ಸಂಬಂಧದ ನೆಲೆ, ವಸಾಹತುಶಾಹಿಯು ರೂಪಿಸಿದ ಧೋರಣೆಗಳಿಗೆ ಸ್ಥಳೀಯ ಸಮುದಾಯದ ಪ್ರತಿಕ್ರಿಯೆಗಳನ್ನು ಗುರುತಿಸಬಹುದು. ಸ್ಥಳೀಯತೆಯ ಭಾಗವಾಗಿದ್ದ ಅನ್ನ ನೀರಿನಂತಹ ಆಹಾರ ವಸ್ತುಗಳು ದಾನದ ಭಾಗವಾಗಿದ್ದವು. ಆದರೆ ವಸಾಹತುಶಾಹಿಯ ಪ್ರಭಾವಕ್ಕೆ ಒಳಗಾದ ಮೇಲೆ ಇವುಗಳು ವ್ಯವಹಾರದ ಸ್ವರೂಪವನ್ನು ಪಡೆದುಕೊಂಡವು. ಅಲ್ಲದೆ ಮೋಸ, ವಂಚನೆಯಂತಹ ಪರಿಸರವನ್ನು ಪಡೆದುಕೊಂಡವು ಎಂಬುವುದನ್ನು ಕತೆ ತಾತ್ವಿಕವಾಗಿ ಗುರುತಿಸುತ್ತದೆ.

'ವೈದ್ಯರ ಒಗ್ಗರಣೆ' ಕತೆಯಲ್ಲಿ ವಸಾಹತುಶಾಹಿ ಆಡಳಿತ ವ್ಯವಸ್ಥೆ ನ್ಯಾಯಿಕ ಸ್ವರೂಪವನ್ನು ಸ್ಥಳೀಯತೆಯ ನಿಲುವುನಿಂದ ಅನುಸಂಧಾನ ಮಾಡಿರುವುದನ್ನು ಕಾಣಬಹುದು. ವಸಾಹತುಶಾಹಿಯು ತನ್ನ ಸಾಮ್ರಾಜ್ಯದ ಚಿಕ್ಕ ಘಟಕಗಳಾದ ಗ್ರಾಮಗಳ ಆಳ್ವಿಕೆಯನ್ನು ನೋಡಿಕೊಳ್ಳಲು ಸ್ಥಳೀಯ ಅಧಿಕಾರಿಗಳನ್ನು ಅಮ್ದರ್ ಎಂದು ನೇಮಕ

ಮಾಡಿಕೊಳ್ಳುತ್ತಿದ್ದರು. ವಸಾಹತುಶಾಹಿಯ ಆಳ್ವಿಕೆಯಲ್ಲಿ ನೇಮಕಗೊಂಡ ಸ್ಥಳೀಯ ಅಧಿಕಾರಿಗಳು ತನ್ನ ಸ್ಥಳೀಯ ಜ್ಞಾನ ಹಾಗೂ ಪರಂಪರೆಯನ್ನು ಮನಸಿನಲ್ಲಿ ಇಟ್ಟುಕೊಂಡು ಕಾರ್ಯನಿರ್ವಹಿಸಿರುವ ಬಗೆಯನ್ನು ಈ ಕತೆಯು ನಿರೂಪಿಸುತ್ತದೆ.

ವಲ್ಲಭಾಚಾರ್ಯನು ವೀರಪುರದ ಅಮ್ದರ್ ಹುದ್ದೆಯನ್ನು ಪಡೆದ ನಂತರದಲ್ಲಿ ಕೋರ್ಟಿನ ಭಾಗವಾಗಿ ತೀರ್ಪು ನೀಡಬೇಕಾದ ಸಂದರ್ಭ ಬಂದಾಗ ಆಂಗ್ಲ ಫೀನಲ್ ಕೋಡಿನ ಆಧಾರದ ಮೇಲೆ ನ್ಯಾಯ ನಿರ್ಧಾರವಾಗಬೇಕಿತ್ತು. ಆದರೆ ವಲ್ಲಭಾಚಾರ್ಯರು ರಾಮಾಯಣ ಹಾಗೂ ಮಹಾಭಾರತದ ಘಟನೆಗಳನ್ನು ಉದ್ದರಿಸಿ ತೀರ್ಪು ನೀಡುತ್ತಾರೆ. ಈ ಕತೆಯಲ್ಲಿ ಪಂಜೆಯವರು ವಸಾಹತುಶಾಹಿಯ ನ್ಯಾಯಿಕ ವ್ಯವಸ್ಥೆಯ ಪೀನಲ್ ಕೋಡಿನಷ್ಟೆ ಭಾರತೀಯ ಪರಂಪರೆಯ ನ್ಯಾಯಿಕ ವ್ಯವಸ್ಥೆಯ ಆಧಾರಗಳಿಂದ ಮಹಾಭಾರತ ಹಾಗೂ ರಾಮಾಯಣಗಳು ಮುಖ್ಯವಾಗುತ್ತದೆ ಎಂಬ ತಾತ್ವಿಕ ನಿಲುವುಗಳನ್ನು ಮಂಡಿಸುತ್ತಾರೆ. ಈ ಕತೆಯು ಪರಂಪರೆಯ ಗುಣಾತ್ಮಕ ನೆಲೆಯಲ್ಲಿ ಸ್ಥಳೀಯತೆಯ ಸ್ವರೂಪವು ನಿರೂಪಿತಗೊಳ್ಳುತ್ತದೆ.

ಸ್ಥಳೀಯ ಪರಿಸರ, ಸಂಬಂಧ ಹಾಗೂ ಪರಂಪರೆಯನ್ನು ವಸಾಹತುಶಾಹಿಯ ಆಡಳಿತ ಭಾಗವಾಗಿದ್ದ ಭಾರತೀಯರು ನಿರಾಕರಿಸಿದ ಬಗೆಯನ್ನು ಈ ಕತೆಯು ಸೂಕ್ಷ್ಮವಾಗಿ ತೆರೆದಿಡುತ್ತದೆ. ವಲ್ಲಭಾಚಾರ್ಯನು ಅಮ್ದರ್ ಎಂಬ ಹುದ್ದೆಯನ್ನು ಪಡೆದ ಮೇಲೆ ತನ್ನ ಸ್ಥಳೀಯ ಬದುಕಿನ ಸತ್ವವನ್ನು ಬಿಟ್ಟು ಪಾಶ್ಚಾತ್ಯ ಬದುಕಿನ ಮಾದರಿಗೆ ತನ್ನನ್ನು ಒಡ್ಡಿಕೊಳ್ಳುವುದನ್ನು ಗುರುತಿಸಬಹುದು. ವಲ್ಲಭಾಚಾರ್ಯನು ಆಡಳಿತದ ಸಂಬಂಧವಾಗಿ ಊರೂರು ತಿರುಗುವ ಸಂದರ್ಭ ಬಂದಾಗ ತನಗೆ ಅಡುಗೆ ಭಟ್ಟ ಸಿಗದಿದ್ದಾಗ ದಾರಿಯಲ್ಲಿ ಹೋಗುತ್ತಿದ್ದ ವೈದ್ಯನನ್ನು ಬಲಾತ್ಕಾರದಿಂದ ಅಡುಗೆ ಭಟ್ಟನಾಗಿಸುವ ಬಗೆ, ಅಮ್ದರ್‌ನ ಅಧಿಕಾರ ಹಾಗೂ ದರ್ಪಕ್ಕೆ ಬಲಿಯಾಗುತ್ತಿದ್ದ ಹೆಣ್ಣು ಮಕ್ಕಳು ಮತ್ತು ಸಾಮಾನ್ಯ ಜನರ ಜೀವನವನ್ನು ಕತೆಯು ಬಿಚ್ಚಿಡುತ್ತದೆ. ವಸಾಹತುಶಾಹಿಯ ಸಂಸ್ಕೃತಿಯನ್ನು ನೆಚ್ಚಿಕೊಂಡ ಜನರು ಹೇಗೆ ತಮ್ಮ ಸ್ಥಳೀಯ ಜನರನ್ನು, ಬದುಕನ್ನು ತುಳಿಯುತ್ತಿದ್ದರು ಎನ್ನುವ ಸ್ವರೂಪವನ್ನು ಕೇಂದ್ರೀಕರಿಸುತ್ತದೆ. ಒಟ್ಟಿನಲ್ಲಿ ಪಂಜೆಯವರು ಈ ಕತೆಯಲ್ಲಿ ವಸಾಹತುಶಾಹಿ ಆಡಳಿತದ ಧೋರಣೆಯಲ್ಲಿ ಸ್ಥಳೀಯತೆಯನ್ನು ಗುಣಾತ್ಮಕವಾಗಿ ಮಂಡಿಸುವ ಮತ್ತು ಸ್ಥಳೀಯರೆ ಸ್ಥಳೀಯತೆಯನ್ನು ನಿರಾಕರಿಸುವ ಆಶಯವನ್ನು ಅಭಿವ್ಯಕ್ತಿಸುತ್ತಾರೆ.

'ನನ್ನ ಚಿಕ್ಕ ತಾಯಿ' ಕತೆಯು ಕುಟುಂಬದ ನೆಲೆಯನ್ನು ಪ್ರಧಾನವಾಗಿ ಚರ್ಚೆಗೆ ಒಳಗು ಮಾಡುತ್ತದೆ. ಮುಖ್ಯವಾಗಿ ಆಸ್ತಿಗಾಗಿ ನಡೆಯುವ ತಾಕಲಾಟವನ್ನು ಗುರುತಿಸಿದರೂ

ಜೀವನಾನುಭವ ಹಾಗೂ ಮಾನವ ಸಂಬಂಧವು ಪ್ರಧಾನ ತಾತ್ವಿಕತೆಯಾಗಿ ಕತೆಯೊಳಗೆ ಜೀವ ಪಡೆದಿದೆ. ಚಿಕ್ಕಮ್ಮ ಗಂಡನನ್ನು ಕಳೆದುಕೊಂಡು ಹಿರಿಯ ವಯಸ್ಸನ್ನು ತಲುಪಿದ್ದಾಳೆ. ತನ್ನ ಆಭರಣ, ಆಸ್ತಿಯೆಲ್ಲ ತನ್ನ ಜೊತೆಯಾಗಿರುವ ಅಣ್ಣನ ಮಗನಿಗೆ ನೀಡುತ್ತೇನೆ ಎಂಬ ಮಾತನ್ನು ನೀಡಿದ್ದಾಳೆ. ಆಸ್ತಿ ಹಾಗೂ ಆಭರಣದ ನೆಲೆಯಿಂದ ಚಿಕ್ಕಮ್ಮನಿಗೆ ಎಲ್ಲಾ ರೀತಿಯ ವ್ಯವಸ್ಥೆಯನ್ನು ಅಣ್ಣನ ಮಗ ಮಾಡುತ್ತಿದ್ದಾನೆ. ಒಂದು ದಿನ ಚಿಕ್ಕಮ್ಮ ತನ್ನ ಆಭರಣದ ಗಂಟು ಕಳೆದುಹೋಗಿದೆ ಆ ಗಂಟಿನಲ್ಲಿ ಆನೆಜಪಸರ ಇತ್ತೆಂದು ಅದನ್ನು ಹುಡುಕಬೇಕೆಂದು ಹೇಳಿದಾಗ ಮನೆ, ಊರಲೆಲ್ಲ ಹುಡುಕಿ ನಂತರ ಸಿಗದಿದ್ದಾಗ ಪೊಲೀಸ್ ಠಾಣೆಗೆ ದೂರು ನೀಡಿದ ಮೇಲೆ ಚಿಕ್ಕಮ್ಮನ ಮನಸ್ಸನ್ನು ಗೆಲ್ಲುವ ಉದ್ದೇಶದಿಂದ ತಾನೇ ಒಂದು ಆನೆಜಪಸರದ ನಕಲನ್ನು ಅಕ್ಕಸಾಲಿಗ ಮಾಡಿಸಿ ತರುತ್ತಾನೆ. ಇದೇ ಸಂದರ್ಭದಲ್ಲಿ ಒಬ್ಬ ಮಠದ ಆಳು ಒಂದು ಪತ್ರದೊಂದಿಗೆ ಚಿಕ್ಕಮ್ಮ ಮಠದಲ್ಲಿ ಬಿಟ್ಟುಬಂದಿದ್ದ ಆನೆಜಪಸರದ ಗಂಟನ್ನು ತಂದು ಚಿಕ್ಕಮ್ಮನಿಗೆ ನೀಡುತ್ತಾನೆ. ಕತೆಗಾರರು ಚಿಕ್ಕಮ್ಮನ ಬದುಕು, ಅವಳ ಪೂಜೆ, ವ್ರತ ಆನೆಜಪಸರದ ಬಗೆಗಿನ ಪ್ರೀತಿ, ಗೌರವ, ತನ್ನ ಅಮೂಲ್ಯದ ವಸ್ತುವನ್ನು ಕಾಪಿಟ್ಟುಕೊಳ್ಳುವ ಬಗೆಯನ್ನು ಸ್ಥಳೀಯತೆ ಎಂಬ ನೆಲೆಯಲ್ಲಿ ಅಭಿವ್ಯಕ್ತಿಸುತ್ತಾರೆ.

'ನನ್ನ ಚಿಕ್ಕ ತಂದೆಯ ಉಯಿಲ್' ಎಂಬ ಕತೆಯು ವಸಾಹತು ಶಾಹಿಯ ಧೋರಣೆಯನ್ನು ನಿರೂಪಿಸುತ್ತದೆ. ಆಸ್ತಿಯನ್ನು ವರ್ಗಾಯಿಸುವಾಗ ಬಳಸುತ್ತಿದ್ದ 'ಉಯಿಲ್' ಎಂಬ ಬರಹವನ್ನು ವಸಾಹತುಶಾಹಿಯು ತನ್ನ ಪ್ರಭಾವದಿಂದ ತನ್ನ ಭಾಗವಾಗಿ ರೂಪಿಸಿಕೊಳ್ಳುವ ನೆಲೆಯನ್ನು ಕತೆಯು ಅನುಸಂಧಾನ ಮಾಡುತ್ತದೆ. ಚಿಕ್ಕ ತಂದೆಯು ಪ್ಲೇಗ್ ರೋಗಕ್ಕೆ ಒಳಗಾಗಿ ಪ್ಲೇಗ್ ಕ್ಯಾಂಪಿನಲ್ಲಿ ಕಾಲಕಳೆಯುತ್ತಿದ್ದಾಗ ತನ್ನ ಆಸ್ತಿಯ ಸಂಬಂಧವಾಗಿ ಒಂದು 'ಉಯಿಲ್'ನ್ನು ಬರೆದು ನಂತರದ ದಿನದಲ್ಲಿ ಮರಣ ಹೊಂದುತ್ತಾರೆ, ಚಿಕ್ಕ ತಂದೆಯ ಗೆಳೆಯರಾದ ಮಾದಣ್ಣ ಉಯಿಲ್‌ನ್ನು ಗಮನಿಸಿ, ಚಿಕ್ಕ ತಂದೆಯು ೫೦೦ ರೂ ಸಾಲ ಪಡೆದಿದ್ದರು. ಆ ಸಾಲದ ಹಣ ನನಗೆ ಬರಬೇಕೆಂದು ಆಂಗ್ಲ ಕೋರ್ಟಿನಲ್ಲಿ ದಾವೆ ಹೂಡಿದನು. ಆಂಗ್ಲ ಕೋರ್ಟಿನ ಅಧಿಕಾರಿಗಳು ಉಯಿಲ್‌ನ್ನು ಪ್ರಧಾನ ಸಾಕ್ಷಿಯಾಗಿ ವಿಚಾರಣೆ ಆರಂಭಿಸಿತು. ಆಂಗ್ಲ ನ್ಯಾಯಾಧೀಶನು ಮಾದಣ್ಣನ ಹೆಣ್ಣುಮಕ್ಕಳೊಂದಿಗೆ ಸಂಬಂಧ ಹೊಂದಿದ್ದರಿಂದ ಮಾದಣ್ಣನ ಪರವಾಗಿಯೇ ತೀರ್ಪನ್ನು ನೀಡುತ್ತಾನೆ. ಚಿಕ್ಕಪ್ಪನ ಹಣವೆಲ್ಲವೂ ವಸಾಹತುಶಾಹಿ ಸರ್ಕಾರಕ್ಕೂ ಹಾಗು ಚಿಕ್ಕ ತಂದೆಯ ಆಸ್ತಿಯು ಮಾದಣ್ಣನಿಗೂ ಎಂದು ನ್ಯಾಯಲಯ ತೀರ್ಪು ನೀಡುತ್ತದೆ.

ಕತೆಯು ವಸಾಹತುಶಾಹಿ ನ್ಯಾಯಿಕ ವ್ಯವಸ್ಥೆಯು ಹೊಂದಿರುವ ಭ್ರಷ್ಟತೆಯನ್ನು

ಸೂಕ್ಷ್ಮವಾಗಿ ಗುರುತಿಸುತ್ತದಲ್ಲದೆ ನಮ್ಮ ಸ್ಥಳೀಯತೆಯ ಭಾಗವಾಗಿದ್ದ ಉಯಿಲ್ ತನ್ನ ಮಹತ್ವವನ್ನು ಕಳೆದುಕೊಳ್ಳುವುದನ್ನು ಗುರುತಿಸುವ ಜೊತೆಗೆ ಭಾರತೀಯ ನ್ಯಾಯಿಕ ವ್ಯವಸ್ಥೆಯು ವಸಾಹತುಶಾಹಿ ನ್ಯಾಯಿಕ ವ್ಯವಸ್ಥೆಗಿಂತ ಉತ್ತಮವಾದದ್ದು ಎಂಬ ತಾತ್ವಿಕತೆಯನ್ನು ಮಂಡಿಸುತ್ತದೆ. ಪಂಜೆಮಂಗೇಶರಾಯರ ಕತೆಗಳು ಹೆಚ್ಚು ವಸಾಹುಶಾಹಿಯ ಪ್ರಭಾವಕ್ಕೆ ಒಳಗಾದಂತೆ ಕಾಣುತ್ತದೆ. ವಸಾಹತುಶಾಹಿಯು ರೂಪಿಸಿದ ಧೋರಣೆಗಳಿಂದ ಭಾರತೀಯ ಸಮಾಜದಲ್ಲಿ ಉಂಟಾದ ಪಲ್ಲಟಗಳ ಶೋಧವೇ ಪಂಜೆಯವರ ಕತೆಯ ಅಭಿವ್ಯಕ್ತಿಯಾಗಿದೆ. ನಮ್ಮ ನೆಲದ ಪರಂಪರೆ, ಭಾಷೆ, ನಂಬಿಕೆ, ನ್ಯಾಯಿಕ ವ್ಯವಸ್ಥೆ ಹಾಗೂ ಕುಟುಂಬ ರಚನೆ ಮತ್ತು ಸಂಬಂಧಗಳು ವಸಾಹತುಶಾಹಿಯ ಪರಿಸರದಲ್ಲಿ ಗುಣಾತ್ಮಕವಾಗಿಯೂ ವಸಾಹತುಶಾಹಿಯ ಶಿಕ್ಷಣದಂತಹ ಉತ್ತಮ ನೆಲೆಗಳು ನಮ್ಮ ಬದುಕಿನ ಭಾಗವಾಗಿಯೂ ಕತೆಯೊಳಗೆ ಮಂಡಿಸುತ್ತಾರೆ. ಸ್ಥಳೀಯತೆ ಎನ್ನುವ ಪರಿಕಲ್ಪನೆಯು ವಸಾಹತುಶಾಹಿಯ ಆಡಳಿತ ಧೋರಣೆಯ ಪ್ರತಿಯಾಗಿ ಹುಟ್ಟಿಕೊಂಡಂತೆ ಪಂಜೆಯವರ ಕತೆಗಳ ಆಶಯ ಮತ್ತು ಪರಿಸರದಿಂದ ನಿರ್ಧಾರಿಸಬಹುದು.

**ಕೇರೂರು ವಾಸುದೇವಾಚಾರ್ಯರು**

ಕೇರೂರು ವಾಸುದೇವಾಚಾರ್ಯರು ಪಂಜೆಯವರ ಸಮಕಾಲೀನ ಉತ್ತರ ಕರ್ನಾಟಕದ ಕತೆಗಾರರಲ್ಲಿ ಒಬ್ಬರು. ವಸಾಹತುಶಾಹಿಯು ರೂಪಿಸಿದ ಶಿಕ್ಷಣ, ವೈಚಾರಿಕತೆಯನ್ನು ಮೈಗೂಡಿಸಿಕೊಂಡಿದ್ದ ಕೇರೂರು ವಾಸುದೇವಾಚಾರ್ಯರು ಮುಖ್ಯವಾಗಿ ಆ ಕಾಲಘಟ್ಟದಲ್ಲಿ ಹುಟ್ಟಿಕೊಂಡಿದ್ದ ಧಾರ್ಮಿಕ ಸುಧಾರಣ ಚಳುವಳಿಯ ಪ್ರಭಾವಕ್ಕೆ ಒಳಗಾಗಿ ತಮ್ಮ ಕತೆಯಲ್ಲಿ ಸುಧಾರಣೆಯ ಆಶಯವನ್ನೆ ಕಟ್ಟಿಕೊಂಡಿದ್ದನ್ನು ಕಾಣಬಹುದು. ಸ್ಥಳಿಯತೆಯ ಸ್ವರೂಪವು ಇವರ ಕತೆಗಳಲ್ಲಿ ನಮ್ಮ ನೆಲದ ಜೀವನ ಸತ್ವದ ಭಾಗವಾಗಿ ಹಾಗೂ ಗುಣಾತ್ಮಕ ನೆಲೆಯಿಂದ ಅಭಿವ್ಯಕ್ತವಾಗಿರುವುದನ್ನು ಕಾಣಬಹುದು.

'ಮಲ್ಲೇಸಿಯ ನಲ್ಲೆಯರು' ಎಂಬ ಕೇರೂರು ವಾಸುದೇವಚಾರ್ಯರ ಕತೆಯು ಸ್ಥಳೀಯತೆಯ ನೆಲೆಯನ್ನು ಬದುಕಿನ ರೂಪುರೇಷೆಯ ಭಾಗವಾಗಿ ವ್ಯಕ್ತವಾಗುತ್ತದೆ. ಮಲ್ಲೇಸಿಯು ಒಬ್ಬ ವ್ಯವಹಾರಿಕ ತಿಳುವಳಿಕೆಯಿಲ್ಲದ ಪೆದ್ದ ಯುವಕ, ಲೋಕಜ್ಞಾನವಿಲ್ಲದ ಮಲ್ಲೇಸಿಯು ತನ್ನ ದೊರೆಯ ಆಜ್ಞೆಯಂತೆ ಮದುವೆಯಾಗಲು ಕನ್ಯೆಯನ್ನು ಹುಡುಕಿಕೊಂಡು ಮೂರು ನಾಲ್ಕು ಊರುಗಳನ್ನು ಅಡ್ಡಾಡುತ್ತಾನೆ. ಈ ಊರುಗಳಲ್ಲಿ ಮಲ್ಲೇಶಿಗೆ ಕಾಣ ಸಿಗುವ ಕನ್ಯೆಯರು ಮಲ್ಲೇಶಿಯ ದಡ್ಡತನವನ್ನು ಅರಿತುಕೊಂಡು ತಮಾಷೆ ಮಾಡುತ್ತಾರೆ.

ಆದರೆ ಮಲ್ಲೇಶಿ ಕನ್ಯೆಯರ ತಮಾಷೆಯನ್ನೆ ನಿಜವೆಂದು ನಂಬುತ್ತಾನೆ. ಚಾಯವ್ವ ಎನ್ನುವವಳು ತಮಾಷೆಗೆ 'ಅಂಬೆ' ಎನ್ನುವ ಹುಡುಗಿಯ ಎದುರು 'ನಿನ್ನನ್ನು ಇದೇ ಮಲ್ಲೇಶಿಯ ಕೊರಳಿಗೆ ಕಟ್ಟುತ್ತೇನೆ' ಎಂದದ್ದನ್ನು ಮಲ್ಲೇಶಿಯು ನಿಜವೆಂದು ನಂಬಿ, ಛಾಯವ್ವನ ಮನೆಗೆ ಹೋಗಿ ಅಂಬೆಯನ್ನು ಮದುವೆ ಮಾಡಿಸು ಎಂದು ಕೇಳುತ್ತಾನೆ. ಅಂತೆಯೇ ಅಂಬೆಯನ್ನು ಛಾಯವ್ವ ಒಪ್ಪಿಸಿ ಮದುವೆ ಮಡಿಸುತ್ತಾಳೆಂದು ನಂಬಿರುತ್ತಾನೆ. ಮಲ್ಲೇಶಿಯನ್ನು ಎಲ್ಲರೂ ದಡ್ಡನೆಂದು, ತಮಾಷೆಯ ಭಾಗವಾಗಿಯೇ ನೋಡುತ್ತಾರೆ. ಆದರೆ ದೊರೆಯ ಮನೆಯ ಅಡುಗೆ ಕೆಲಸಕ್ಕೆ ಬಂದ ಗಿರಿಬಾಲೆ ಎಂಬ ಹುಡುಗಿಯು ಮಲ್ಲೇಶಿಯ ದಡ್ಡತನ ಹಾಗೂ ಮುಗ್ಧತೆಯನ್ನು ಗುರುತಿಸಿ, ಅಕ್ಷರ ಜ್ಞಾನವನ್ನು, ವ್ಯವಹಾರ ಜ್ಞಾನವನ್ನು ಜೊತೆಗೆ ಲೋಕ ಜ್ಞಾನವನ್ನು ಹೇಳಿಕೊಡುವ ಮೂಲಕ ಮಲ್ಲೇಶಿಯುನ್ನು ಬುದ್ಧಿವಂತನನ್ನಾಗಿಸುತ್ತಾಳೆ ಹಾಗೂ ಮಲ್ಲೇಶಿಯನ್ನೆ ಲಗ್ನವಾಗುತ್ತಾಳೆ. ಮಲ್ಲೇಶಿ ಬುದ್ಧಿವಂತ ಮತ್ತು ಪ್ರಾಮಾಣಿಕತೆಯ ನೆಲೆಯಲ್ಲಿ ದೊರೆಗಳ ಕೋಶಾಧಿಕಾರಿಯಾಗಿ ನೇಮಕವಾಗುತ್ತಾನೆ. ಕತೆಯು ಮಲ್ಲೇಶಿಯ ಏಳಿಗೆಯನ್ನು ಗುರುತಿಸುವ ಮೂಲಕ ಕೊನೆಗೊಳ್ಳುತ್ತದೆ. ಕತೆಯಲ್ಲಿ ಅಭಿವ್ಯಕ್ತವಾಗುವ ಸ್ಥಳೀಯ ಸ್ವರೂಪವು ನಮ್ಮ ಪರಂಪರೆಯನ್ನು ಒಳಗು ಮಾಡುತ್ತದೆ. ಗಿರಿಬಾಲೆ ಮಲ್ಲೇಶಿಯು ದಡ್ಡನೆಂದು ತಿಳುವಳಿಕೆ ಇದ್ದರೂ ಅವನಲ್ಲಿ ಗುಣಾತ್ಮಕವಾದ ಗುಣಗಳನ್ನು ಹುಡುಕುತ್ತಾಳೆ ಮತ್ತು ಹಾಸ್ಯದ ವಸ್ತುವಾಗಿ ಮಾಡಿಕೊಳ್ಳದೇ ತನಗೆ ಗೊತ್ತಿದ್ದ ಅಕ್ಷರ ಜ್ಞಾನ ಹಾಗೂ ಲೋಕಜ್ಞಾನವನ್ನು ಕಲಿಸುವ ಮೂಲಕ ಮಲ್ಲೇಶಿಯನ್ನು ಸಾಮಾಜೀಕರಣಗೊಳಿಸುತ್ತಾಳೆ. ಈ ಬಗೆಯ ಗಿರಿಬಾಲೆಯ ಚಿಕಿತ್ಸಾ ಮನಸ್ಸನ್ನು ಸ್ತ್ರೀ ಗುಣಾತ್ಮಕ ಸ್ಥಳೀಯತೆ ಎಂದು ಕರೆಯಬಹುದು.

ಕೇರೂರು ವಾಸುದೇವಾಚಾರ್ಯರು ವಸಾಹತುಶಾಹಿಯ ಧೋರಣೆಯ ಪ್ರಭಾವಕ್ಕೆ ಒಳಗಾದರೂ ತಮ್ಮ ಕತೆಗಳಲ್ಲಿ ಸ್ಥಳೀಯ ನಂಬಿಕೆ, ಜೀವನ ಮೌಲ್ಯ, ಪ್ರೀತಿ, ಪರಂಪರೆಯ ಕೆಲವು ಅಭಿವ್ಯಕ್ತಿಗಳನ್ನು ತಮ್ಮ ಆತ್ಮ ಗೌರವದ ಭಾಗದಂತೆ ಮಂಡಿಸುತ್ತಾರೆ. ಶಿಕ್ಷಣ ಹಾಗೂ ವೈಚಾರಿಕತೆಯನ್ನು ಅಪ್ಪಿಕೊಂಡಂತೆ ಕೇರೂರು ಕಂಡರೂ ಸಹಾ ಕತೆಯ ನೆಲೆಯಲ್ಲಿ ತಮ್ಮದೆ ಆದ ಸತ್ವಯುತ ಚೌಕಟ್ಟನ್ನು ಹಾಕಿಕೊಂಡು ನೋಡುತ್ತಾರೆ. ಸ್ತ್ರೀಯರ ಸುಧಾರಣೆಯನ್ನು ಒಲವನ್ನು ಹೊಂದಿರುವ ಕತೆಗಳು ಸ್ತ್ರೀ ಸ್ವಾತಂತ್ರ್ಯದ ಅಭಿವ್ಯಕ್ತಿಯನ್ನು ಜವಾಬ್ದಾರಿಯಿಂದ ನಿರೂಪಿಸುತ್ತವೆ. ಒಟ್ಟಿನಲ್ಲಿ ಕೇರೂರು ವಸುದೇವಾಚಾರ್ಯರ ಕತೆಗಳು ಭಾರತೀಯ ಸಂಪ್ರದಾಯದ ಚೌಕಟ್ಟಿನ/ ಆಯಕಟ್ಟಿನ ಒಳಗೆ ನಿಂತುಕೊಂಡೇ ಸುಧಾರಣೆಯ ಸ್ಪರ್ಶವನ್ನು ಪಡೆದುಕೊಳ್ಳುವ ಸ್ಥಳೀಯತೆಯ ಅಭಿವ್ಯಕ್ತಿಯನ್ನು ಮಂಡಿಸುತ್ತವೆ.

**ಮಾಸ್ತಿ ವೆಂಕಟೇಶ ಅಯ್ಯಂಗಾರ್**

ಮೊದಲ ತಲೆಮಾರಿನ ಕತೆಗಳಿಗೆ ಜೀವ ತುಂಬಿದ ಪ್ರಮುಖ ಕತೆಗಾರ ಮಾಸ್ತಿ. ವಸಾಹತುಶಾಹಿಯ ಧೋರಣೆಗಳಿಗೆ ಭಾರತೀಯ ಸಂಸ್ಕೃತಿ ಪರಂಪರೆಯನ್ನು ಮುಖಾಮುಖಿಯಾಗಿಸುವ ಮೂಲಕ ಸೂಕ್ಷ್ಮ ನೆಲೆಯಲ್ಲಿ ಗಂಭೀರವಾಗಿ ಕತೆಗಳ ಮೂಲಕ ಪ್ರತಿರೋಧಿಸಿದ ಮಾಸ್ತಿಯವರು ಮೊದಲ ತಲೆಮಾರಿನ ಕಥಾ ಪರಂಪರೆಗೆ ಸ್ಥಳೀಯತೆಯ ಭೂಮಿಕೆಯ ಮೂಲಕ ಶಕ್ತಿಯನ್ನು ಒದಗಿಸಿದರು. "ಪಂಜೆ, ಕಾಮತ್ ರಂತಹ ಕತೆಗಾರರು ಕಥಾ ಪರಂಪರೆಯನ್ನು ಆರಂಭಿಸಿ ಭೂಮಿಕೆ ಅಥವಾ ಗದ್ದೆಯನ್ನು ನಿರ್ಮಿಸಿದರೆ ಮಾಸ್ತಿಯು ಫಲವತ್ತಾದ ಬೆಳೆಗಳನ್ನು ತೆಗೆದರು' ಎಂಬ ಮಾತು ಮಾಸ್ತಿಯವರ ಕತೆಗಳ ಲೋಕವನ್ನು ಗುರುತಿಸುತ್ತದೆ. ಮಾಸ್ತಿಯು ವಸಾಹತುಶಾಹಿಯ ಆಡಳಿತ ವ್ಯವಸ್ಥೆಯೊಳಗೆ ಇದ್ದುಕೊಂಡು ವಸಾಹತುಶಾಹಿಯು ರೂಪಿಸುವ ಧೋರಣೆಯಿಂದ ಭಾರತೀಯ ಸಮಾಜದಲ್ಲಿ ಆಗುತ್ತಿದ್ದ ಬದಲಾವಣೆಯನ್ನು ಸೂಕ್ಷ್ಮವಾಗಿ ಗ್ರಹಿಸುವ ಮೂಲಕ ತನ್ನ ಪ್ರತ್ಯಕ್ಷ ಅನುಭವವನ್ನೇ ಭಾರತೀಯ ಸಂಸ್ಕೃತಿಯ ಸತ್ವದ ಭಾಗವಾಗಿ ಕತೆಯ ರಚನೆಯ ಭೂಮಿಕೆಯನ್ನು ರೂಪಿಸುತ್ತಾರೆ, ಮಾಸ್ತಿಯವರ ಹೆಚ್ಚಿನ ಕತೆಗಳು ಸ್ಥಳೀಯತೆಯನ್ನೆ ಜೀವಾಳವಾಗಿ ಹೊಂದಿವೆ.

'ಜೋಗ್ಯೋರ ಅಂಜಪ್ಪನ ಕೋಳಿ'ಯು ವಸಾಹತುಶಾಹಿಯು ರೂಪಿಸಿದ್ದ ನ್ಯಾಯಿಕ ವ್ಯವಸ್ಥೆಗೆ ಮುಖಾಮುಖಿಯಾಗಿ ಸ್ಥಳೀಯ ನೆಲೆಯ ಪರಂಪರೆಯ ಕೇಂದ್ರಿತವಾದ ನ್ಯಾಯಿಕ ವ್ಯವಸ್ಥೆಯನ್ನು ಅಂಜಪ್ಪನ ಬದುಕಿನ ಅನುಭವಗಳ ನೆಲೆಯಿಂದ ಸೂಕ್ಷ್ಮವಾಗಿ ವಿಮರ್ಶಿಸುತ್ತದೆ. ಕತೆಯು ಭಾರತೀಯ ಸಂಸ್ಕೃತಿಯ ನೆಲೆಗಳನ್ನು ಅಪ್ಪಿಕೊಂಡು ಬದುಕುತ್ತಿರುವ ಅಂಜಪ್ಪನ ಜೀವನಾನುಭವದ ಮೌಲ್ಯವು ವಸಾಹತುಸಾಹಿಯ ನ್ಯಾಯಿಕ ವ್ಯವಸ್ಥೆಗೆ ಎದುರಾಗಿ ನಿಲ್ಲುತ್ತದೆ, ವಸಾಹತುಶಾಹಿಯು ಅಂಜಪ್ಪನನ್ನು ಅಪರಾಧಿ ಎಂದು ನಿರ್ಧರಿಸಿದರೂ ಭಾರತೀಯ ಸ್ಥಳೀಯತೆಯ ಸತ್ವವು ನಿರಪರಾಧಿ ಎಂಬ ನಿಲುವನ್ನು ಧ್ವನಿಸುತ್ತದೆ. ಅಂಜಪ್ಪ, ಊರೂರು ತಿರುಗಾಡಿಕೊಂಡು ಹಾಡುಗಳನ್ನು ಹಾಡುತ್ತ ಬದುಕು ಕಟ್ಟಿಕೊಂಡಿದ್ದ ವ್ಯಕ್ತಿ. ಒಮ್ಮೆ ಅಂಜಪ್ಪನ ಹಾಡನ್ನು ಮೆಚ್ಚಿ ಹುಡುಗಿಯೊಬ್ಬಳು ಕೋಳಿಯನ್ನು ಜೋಳಿಗೆಗೆ ಹಾಕಿ, ನಾನು ಕೊಟ್ಟಿದ್ದೇನೆಂದು ಹೇಳಬಾರದೆಂದು ಅಂಜಪ್ಪನಿಗೆ ಹೇಳಿ, ಅಲ್ಲಿಂದ ಕಳುಹಿಸುತ್ತಾಳೆ. ಅಂಜಪ್ಪ ಕೋಳಿಯನ್ನು ಪಡೆದುಕೊಂಡು ಹೋದ ಮೇಲೆ ಕಳ್ಳನಾಗಿ, ಕೋಳಿ ಸಮೇತ ಸಿಕ್ಕಿ ಬೀಳುತ್ತಾನೆ. ಅಂಜಪ್ಪನೇ ಕೋಳಿಯನ್ನು ಕದ್ದನೆಂದು ಊರಿನ ಮುಖಂಡರು ನಿರ್ಧರಿಸಿ ಕೋರ್ಟಿಗೆ ಕೋಳಿ ಸಮೇತವಾಗಿ ಅಂಜಪ್ಪನನ್ನು

ಹಾಜರು ಪಡಿಸುತ್ತಾರೆ. ನ್ಯಾಯಾಧೀಶರು ಕೇಳುವ ಸಾಕ್ಷಿ ಹಾಗೂ ಇತರ ಪ್ರಶ್ನೆಗಳಿಗೆ ಉತ್ತರವಿದ್ದರೂ ಹೇಳಲಾಗದ ಸ್ಥಿತಿಯಲ್ಲಿ ಅಂಜಪ್ಪ ನನಗೆ ದೇವರೇ ಸಾಕ್ಷಿ ಎಂದು ನ್ಯಾಯಾಧೀಶರ ಮುಂದೆ ನುಡಿಯುತ್ತಾನೆ. ಈ ನಡುವೆ ಕೋರ್ಟು ಅಂಜಪ್ಪನನ್ನು ಅಪರಾಧಿ ಎಂದು ನಿರ್ಧರಿಸಿ, ದಂಡ ಹಾಕಿ ತೀರ್ಪು ನೀಡುತ್ತದೆ. ಅಂಜಪ್ಪ ಏನೂ ಹೇಳದೆ ದಂಡ ಕಟ್ಟಿ ಕೋರ್ಟಿನಿಂದ ಹೊರಬರುತ್ತಾನೆ.

ಕತೆಯು ವಸಾಹತುಶಾಹಿಯು ರೂಪಿಸಿದ ನ್ಯಾಯಿಕ ವ್ಯವಸ್ಥೆಯು ಸರಿಯಾದ ನ್ಯಾಯವನ್ನು ಒದಗಿಸುವುದಿಲ್ಲ ಎಂಬ ತಾತ್ವಿಕತೆಯನ್ನು ಮಂಡಿಸುತ್ತದೆ. ನಮ್ಮ ನೆಲದಲ್ಲಿ ಸ್ಥಳೀಯವಾಗಿ ಜಾರಿಯಲ್ಲಿ ಇರುವಂತಹ ಪಂಚಾಯಿತು ವ್ಯವಸ್ಥೆಯೇ ಗುಣಾತ್ಮಕವಾದ ನ್ಯಾಯಿಕ ವ್ಯವಸ್ಥೆಯಾಗಿದೆ. ಇಲ್ಲಿ ಕಣ್ಣಲ್ಲಿ ಕಂಡದನ್ನು, ಕಿವಿಯಲ್ಲಿ ಕೇಳಿದ್ದನ್ನು ಪರಾಮರ್ಶಿಸಿ ನೋಡುವ ಕ್ರಮ ಇರುವುದರಿಂದ ಸ್ಥಳೀಯ ನ್ಯಾಯಿಕ ವ್ಯವಸ್ಥೆಯು ವಸಾಹತುಶಾಹಿ ನ್ಯಾಯಿಕ ವ್ಯವಸ್ಥೆಗಿಂತ ಗುಣಾತ್ಮಕವಾದದ್ದು ಎನ್ನುವುದನ್ನು ಜೀವನಾನುಭವದ ನೆಲೆಯಲ್ಲಿ ಮಾಸ್ತಿ ನಿರೂಪಿಸುತ್ತಾರೆ. ಕತೆಯಲ್ಲಿ ಅಭಿವ್ಯಕ್ತಗೊಂಡಿರುವ ಅಂಜಪ್ಪನ ಅಲೆಮಾರಿತನ ಬದುಕು, ಜೀವನಾನುಭವ, ಪರಾಮರ್ಶಿಸಿ ನೋಡುವ ನಮ್ಮ ಪರಂಪರೆಯ ನ್ಯಾಯಿಕ ವ್ಯವಸ್ಥೆಗಳು ಸ್ಥಳೀಯತೆಯನ್ನು ಪ್ರತಿನಿಧಿಸುತ್ತವೆ. ಮಾಸ್ತಿಯವರು ಈ ಕತೆಯಲ್ಲಿ ಸ್ಥಳೀಯತೆಯನ್ನು ವಸಾಹತುಶಾಹಿಯ ಮುಖಾಮುಖಿಯಾಗಿ ಬಳಸುತ್ತಾರೆ.

'ಮಸುಮತ್ತಿ' ಎಂಬ ಮಾಸ್ತಿಯವರ ಕತೆಯು ಭಾರತೀಯ ನೆಲದ ಆಚಾರ, ನಂಬಿಕೆ, ಪರಿಸರ, ಸಂಸ್ಕೃತಿ ಹಾಗೂ ವಾಸ್ತು ಶಿಲ್ಪವನ್ನು ವಿದೇಶಿಯರಿಗೆ ಪರಿಚಯಿಸುತ್ತ ಹಾಗೂ ನಮ್ಮ ನೆಲದ ಜ್ಞಾನದ ಬಗ್ಗೆ ವಿದೇಶಿಯರಿಗೆ ಅರಿವು ನೀಡುವ ಮೂಲಕ ವಿದೇಶಿಯರಿಂದ ಗುಣಾತ್ಮಕವಾಗಿ ಮಂಡಿಸುವ ತಾತ್ವಿಕತೆಯನ್ನು ಹೊಂದಿದೆ. ವಸಾಹತುಶಾಹಿಯು ಯುರೋಪ್ ಕೇಂದ್ರಿತ ಚಿಂತನೆಯ ಭಾಗವಾಗಿ ಭಾರತವನ್ನು ಮತ್ತು ಭಾರತೀಯ ಸಂಸ್ಕೃತಿಯನ್ನು ಕೀಳೆಂದು ಗ್ರಹಿಸುವ ಪ್ರಜ್ಞೆ ಮಂಡಿತಗೊಂಡಿರುವ ಸಂದರ್ಭದಲ್ಲಿ ಮಾಸ್ತಿಯು ವಸಾಹತುಶಾಹಿಯ ಮೂಲಕವೇ ನಮ್ಮ ಸ್ಥಳೀಯ ಪರಂಪರೆಯನ್ನು ಉನ್ನತವೆಂದು ಹೇಳಿಸುವ ತಂತ್ರವನ್ನು ಬಳಸುವ ಮೂಲಕ ಸ್ಥಳೀಯತೆಯನ್ನು ನಿರೂಪಿಸುತ್ತಾರೆ.

ಕತೆಯಲ್ಲಿ ವಸಾಹತುಶಾಹಿಯು ರೂಪಿಸಿಕೊಂಡಿರುವ ಭಾರತದ ಬಗೆಗಿನ ಧೋರಣೆಯನ್ನು ಎಮಿಲಿ ಮತ್ತು ಫರ್ಕ್ಯುವರ್ ಮೂಲಕ ನಿರೂಪಿಸಲಾಗಿದೆ. ಭಾರತದಲ್ಲಿ ರಚಿತವಾಗಿದ್ದ ಕಲೆ, ವಾಸ್ತುಶಿಲ್ಪವನ್ನು ವಸಾಹತುಶಾಹಿಯು ಸೌಂದರ್ಯದ ಭಾಗವಾಗಿ,

ಸಂಪತ್ತಿನ ಭಾಗವಾಗಿ ಮತ್ತು ಐತಿಹಾಸಿಕ ಪ್ರಜ್ಞೆಯ ಭಾಗವಾಗಿ ವಸಾಹತುವಿನಿಂದ ಕೊಂಡು ಹೋಗುವ ಮನಸ್ಸನ್ನು ಮಾಸ್ತಿ ಸೂಕ್ಷ್ಮವಾಗಿ ನಿರೂಪಿಸುತ್ತಾರೆ. ಎಮಿಲಿ ಹಾಗೂ ಫರ್‍ಕುವರ್ ತಮ್ಮ ವಸ್ತು ಸಂಗ್ರಹಾಲಯಕ್ಕೆ ಭಾರತದ ಪುರಾತತ್ವದ ಅಮೂಲ್ಯವಾದ ವಸ್ತುಗಳನ್ನು ತೆಗೆದುಕೊಂಡು ಹೋಗಲು ನಿರ್ಧರಿಸಿ ಮಸುಮತಿ ಎಂಬ ಊರಿಗೆ ಬರುತ್ತಾರೆ. ಮಸುಮತ್ತಿ ಊರಿನ ಕೃಷ್ಣಯ್ಯರವರ ಮನೆಗೆ ಭೇಟಿ ನೀಡಿ ಅವರ ಮನೆಯಲ್ಲಿದ್ದ ಚಿತ್ರಪಟಗಳನ್ನು ತೋರಿಸುವಂತೆ ಮತ್ತು ಹಣಕ್ಕೆ ಕೊಡುವಂತೆ ಕೇಳುತ್ತಾರೆ. ಆದರೆ ಕೃಷ್ಣಯ್ಯ ಚಿತ್ರಪಟದ ಮೂಲಕ ಆ ಪ್ರದೇಶದ ನೆಲದಲ್ಲಿ ರೂಪುಗೊಂಡಿದ್ದ ಜ್ಞಾನ, ಪುರಾಣ, ನಂಬಿಕೆ ಶ್ರಮದ ಬದುಕಿನ ಮೌಲ್ಯವನ್ನು ವಿವರಿಸುತ್ತಾರೆ. ಭಾರತೀಯ ಇತಿಹಾಸ ಪ್ರಜ್ಞೆ ಹಾಗೂ ಜ್ಞಾನವನ್ನು ಅರ್ಥ ಮಾಡಿಕೊಂಡು ಗ್ರಹಿಸಿದ ಎಮಿಲಿ ಮತ್ತು ಫರ್‍ಕುವರ್ ಭಾರತೀಯ ಪರಂಪರೆಯ ಜ್ಞಾನವು ಉನ್ನತವಾದ್ದು ಮತ್ತು ಗುಣಾತ್ಮಕವಾದದ್ದು ಎಂಬ ನಿಲುವಿಗೆ ಬರುತ್ತಾರೆ. ಫರ್‍ಕುವರ್ ತನ್ನ ತಂಗಿ ಎಮಿಲಿಗೆ ಹೀಗೆ ಹೇಳುತ್ತಾನೆ "ನಾವು ಪಟ ಚೆನ್ನಾಗಿದೆ ಎಂದು ಪಟವನ್ನು, ವಿಗ್ರಹ ಚೆನ್ನಾಗಿದೆ ಎಂದು ವಿಗ್ರಹವನ್ನು ಇಲ್ಲಿಂದ ಹೊತ್ತುಕೊಂಡು ಹೋದರೆ ಈ ಸೀಮೆಗೆ ಬರುವ ನಾವು ಏನು ಉದ್ಧಾರ ಮಾಡಿದ ಹಾಗಾಯಿತು' ಎನ್ನುವ ವಸಾಹತುಶಾಹಿಯ ಮಾತು ಭಾರತೀಯ ಸಂದರ್ಭದಲ್ಲಿ ಮಹತ್ವದ್ದಾಗುತ್ತದೆ. ಮಾಸ್ತಿಯವರು ಕತೆಯೊಳಗೆ ವಸಾಹತುಶಾಹಿತ್ವವನ್ನು ಹಾಗೂ ಭಾರತೀಯ ಸ್ಥಳೀಯ ಸಂಸ್ಕೃತಿಯನ್ನು ಮುಖಾಮುಖಿಯಾಗಿ ಮಾಡುತ್ತಾರೆ. ವಸಾಹತುಶಾಹಿಯು ಭಾರತೀಯ ಸಂಪತ್ತು ಹಾಗೂ ಜ್ಞಾನ ಪರಂಪರೆಯನ್ನು ಕಚ್ಚಾವಸ್ತುವಿನಂತೆ ಕಾಣುತ್ತಿದ್ದ ಧೋರಣೆಯನ್ನು ಗ್ರಹಿಸಿದ ಮಾಸ್ತಿಯವರು ವಸಾಹತುಶಾಹಿಯ ಮೂಲಕವೇ ನಮ್ಮ ಪರಂಪರೆ, ಚರಿತ್ರೆ, ನಂಬಿಕೆ ಹಾಗೂ ಕಲೆಗಳನ್ನು ಉನ್ನತವೆಂಬ ಬಗೆಯಲ್ಲಿ ಹೇಳಿಸುವ ಕ್ರಮವನ್ನು ಸ್ಥಳೀಯತೆ ಎಂದು ಕರೆಯುತ್ತೇವೆ. ಮಾಸ್ತಿಯವರ 'ಮೊಸರಿನ ಮಂಗಮ್ಮ' ಮತ್ತು 'ವೆಂಕಟಿಗನ ಹೆಂಡತಿ' ಕತೆಗಳು ಸಹ ಬೆಸೆಯುವಂತಹ ಬದುಕಿನ ಸ್ಥಳೀಯ ಮೌಲ್ಯವನ್ನು ಪ್ರಧಾನವಾಗಿ ಕೇಂದ್ರಿಕರಿಸುತ್ತವೆ. ಮಾಸ್ತಿಯವರ ಹೆಚ್ಚಿನ ಕತೆಗಳಲ್ಲಿ ಸ್ಥಳೀಯತೆಯೇ ಕಾಳಜಿಯಾಗಿರುವುದು ವಿಶೇಷವಾಗಿದೆ.

**ಬಾಗಲೋಡಿ ದೇವರಾಯ**

ಮಾಸ್ತಿ ಸಂಪ್ರದಾಯದಲ್ಲಿ ಕಥನ ಪರಂಪರೆಯನ್ನು ರೂಪಿಸಿದ ಕತೆಗಾರ ಬಾಗಲೋಡಿ ದೇವರಾಯ ಇವರ ಕತೆಗಳ ಮುಖ್ಯ ಕಾಳಜಿ ಜೀವನ ಪ್ರೀತಿ, ಮಾನವೀಯ ತುಡಿತ

ಹಾಗೂ ಸ್ಥಳೀಯತೆಯ ಸಂಕಲನವೇ ಆಗಿದೆ. ವಸಾಹತುಶಾಹಿ ಸಂದರ್ಭದಲ್ಲಿ ಭಾರತೀಯ ಸಮಾಜದಲ್ಲಿ ಹುಟ್ಟಿಕೊಂಡ ಅನೇಕ ಸಮಸ್ಯೆಗಳನ್ನು ಕತೆಗಳ ಪರಿಸರವಾಗಿಸಿಕೊಂಡಿರುವ ದೇವರಾಯರು ವಸಾಹತುಶಾಹಿಯ ಕುರಿತ ಚಿತ್ರಣವನ್ನು ನೀಡುವ ಜೊತೆಗೆ ಬದುಕಿನ ಸಂದಿಗ್ಧತೆಗಳನ್ನು ಮುಖಾಮುಖಿಯಾಗಿಸುವ ತಾತ್ವಿಕತೆಯನ್ನು ಮಂಡಿಸುತ್ತಾರೆ. ಸ್ಥಳೀಯ ಪರಂಪರೆ, ನಂಬಿಕೆ, ಜೀವನದ ವಿನ್ಯಾಸ, ಮೌಲ್ಯ, ಆದರ್ಶಗಳು ಗುಣಾತ್ಮಕವಾಗಿ ನಿರೂಪಿತಗೊಂಡಿರುವುದನ್ನು ಇವರ ಕತೆಗಳಲ್ಲಿ ಕಾಣಬಹುದು.

'ಹುಚ್ಚು ಮುನಸೀಫರ' ಕತೆಯು ಹಳ್ಳಿಯೊಂದರ ಪರಿಸರ, ಬಾಲ್ಯದ ಜೀವನ ವಿನ್ಯಾಸ, ಪರಂಪರಾಗತವಾದ ವೃತ್ತಿ ಹಾಗೂ ಒಂದು ಪ್ರದೇಶದ ಸಾಂಸ್ಕೃತಿಕ ತಿಳುವಳಿಕೆಗಳು ವ್ಯಕ್ತಿಯ ಆಂತರ್ಯದ ಒಳಗೆ ಜೀವಂತವಾಗಿ ನೆಲೆನಿಂತಿರುತ್ತವೆ ಮತ್ತು ಆಧುನಿಕ ಬದುಕಿನ ಪಾದರಿಗೆ ಒಳಗಾದರೂ ತನ್ನ ಸ್ಥಳೀಯ ಪರಂಪರೆಯ ಸತ್ವವು ಮುಂದುವರಿದುಕೊಂಡು ಹೋಗುತ್ತದೆ ಎಂಬ ತಾತ್ವಿಕ ನೆಲೆಯನ್ನು ಈ ಕತೆಯು ಮಂಡಿಸುತ್ತದೆ. ಗೋಪಾಲಕ ಕಸುಬನ್ನು ನಡೆಸುತ್ತಿದ್ದ ಬಯಲು ಸೀಮೆಯ ಕುಟುಂಬ, ಬರಗಾಲದ ಸಂದರ್ಭದಲ್ಲಿ ಗೋವುಗಳನ್ನು ಹೊಡೆದುಕೊಂಡು ದಕ್ಷಿಣ ಕನ್ನಡ ಭಾಗಕ್ಕೆ ಬಂದ ಸಂದರ್ಭದಲ್ಲಿ 'ಬಸವ' ಎಂಬ ಗೋಪಾಲಕ ಹುಡುಗನನ್ನು ದಕ್ಷಿಣ ಕನ್ನಡದ ಬಿಲ್ಲವ ಕುಟುಂಬವು ದತ್ತಾಗಿ ಪಡೆದುಕೊಂಡು 'ಸುಂದರಪ್ಪ' ಎಂಬ ನಾಮಕರಣ ಮಾಡಿ ಬೆಳೆಸತೊಡಗಿತು. ಸುಂದರಪ್ಪನಿಗೆ ಬಸವನಾಗಿ ಇರುವುದೆ ಬಹುಪ್ರಿಯವಾಗಿತ್ತೇ ವಿನಾಃ ಸುಂದರಪ್ಪನಾಗಿ ಬದುಕುವುದು ಇಷ್ಟವಿರಲಿಲ್ಲ. ಆದರೆ ಪೋಷಕರ ಒತ್ತಾಯದಿಂದ ಇಂಗ್ಲಿಷ್ ಶಿಕ್ಷಣವನ್ನು ಪಡೆದು ವಕೀಲನಾಗಿ, ನ್ಯಾಯಾಧೀಶನಾಗಿ ವೃತ್ತಿಯನ್ನು ಆರಂಭಿಸುತ್ತಾನೆ. ಸುಂದರಪ್ಪ, ವಸಾಹತುಶಾಹಿ ವ್ಯವಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಾ, ಶ್ರೀಮಂತಿಕೆಯ ಜೀವನ ನಡೆಸುತ್ತಿದ್ದರೂ ಸುಂದರಪ್ಪನಿಗೆ ಬಾಲ್ಯದ ನೆನಪು ಹಾಗೂ ಗೋಪಾಲಕ ವೃತ್ತಿಯ ಪ್ರಜ್ಞೆ ಹುಟ್ಟಿಕೊಳ್ಳುತ್ತದೆ. ತಾನು ಏಕಾಂಗಿಯಾಗಿ, ಏಕಾಂತದಲ್ಲಿ ಇದ್ದಾಗ ಗೋವುಗಳ ನೆನಪಾಗಿ, ಗುಡ್ಡಕ್ಕೆ ನಡೆದು ಹೋಗಿ ಗೋವುಗಳೊಂದಿಗೆ ಮಾತನಾಡುತ್ತ, ಮೈಸವರುತ್ತ ಕಾಲಕಳೆಯುತ್ತಾನೆ. ಕೋರ್ಟಿನಲ್ಲಿ ಕೊಲೆಗೆ ಸಂಬಂಧಿಸಿದ ಪ್ರಕರಣದಲ್ಲಿ ತೀರ್ಪು ನೀಡುವ ಸಂದರ್ಭದಲ್ಲಿ ದನವನ್ನು ಕೋರ್ಟಿಗೆ ಸಾಕ್ಷಿಯಾಗಿ ಕರೆಸಿ, ಆ ಮೂಲಕ ನೈಜವಾದ ಕೊಲೆಗಾರನಿಗೆ ಶಿಕ್ಷೆ ವಿಧಿಸುತ್ತಾನೆ. ಸುಂದರಪ್ಪ ತನ್ನ ಬಿಡುವಿನ ವೇಳೆಯಲ್ಲಿ ಗೋವುಗಳಿದ್ದ ಗೋವು ಮಾಳಕ್ಕೆ ತೆರಳಿ ಗೋವುಗಳೊಂದಿಗೆ ಕಾಲ ಕಳೆಯುತ್ತಿದ್ದ, ಕೊನೆಗೆ ತಾನು ಸಾಯುವಾಗ ಬೆಳ್ಳಿ-ಕೆಂಪಿ ಎಂಬ ಗೋವಿನ ಹೆಸರುಗಳನ್ನೆ ಪಠಿಸುತ್ತ

ಪ್ರಾಣ ಬಿಡುತ್ತಾನೆ.

ಕತೆಗಾರರು ಸುಂದರಪ್ಪನ ಮೂಲಕ ನಮ್ಮ ಪರಂಪರೆ ಕಸಬು ಹಾಗೂ ಮೂಲ ಸಂಸ್ಕೃತಿಯು ಇನ್ನೊಂದು ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದರೂ ಅದರ ಮೂಲ ಸತ್ವ ಕಾಪಿಟ್ಟುಕೊಂಡಿರುತ್ತದೆ ಎಂಬ ನಿಲುವನ್ನು ಸ್ಥಳೀಯತೆಯ ನೆಲೆಯಲ್ಲಿ ಮಂಡಿಸುತ್ತಾರೆ. ಸ್ಥಳೀಯತೆ ಎಂಬುವುದು ಕಸುಬಿನ ನೆಲೆಯಲ್ಲಿ ಹಾಗೂ ಮೂಲ ಬದುಕಿನ ಸಂಸ್ಕೃತಿಯ ಭೂಮಿಕೆಯಲ್ಲಿ ವ್ಯಕ್ತಿ ಹೊಂದಿರಬಹುದಾದ ಕೃಷಿ ಬದುಕಿನ ನೆಲೆ, ಪ್ರಾಣಿ–ಪಕ್ಷಿಗಳೊಂದಿಗಿನ ಸಂಬಂಧ ಅಭಿವ್ಯಕ್ತಿಯಲ್ಲಿ ಸ್ಥಳೀಯತೆಯು ಈ ಕತೆಯಲ್ಲಿ ಮಂಡಿತವಾಗುತ್ತದೆ. ಮೂಲ ಸಂಸ್ಕೃತಿ, ಅದರ ಪರಿಸರ ಹಾಗೂ ಪರಂಪರೆಯೊಂದಿಗಿನ ಸಂಬಂಧವನ್ನು ಕಳೆದುಕೊಂಡಾಗ ವ್ಯಕ್ತಿ ಅನಾಥನಾಗುತ್ತಾನೆ ಎಂಬ ತಾತ್ವಿಕತೆಯನ್ನು ಹೊಂದಿರುವ ಕತೆ **'ಅಜ್ಜನೆಟ್ಟ ಮರ'** ಈ ಕತೆಯು ಸ್ಥಳೀಯತೆಯ ನೆಲೆಯನ್ನು ವ್ಯವಹಾರಿಕ ಬದುಕಿನ ಮೂಲಕ ಕಳೆದುಕೊಳ್ಳುತ್ತ ಹೋದಂತೆ ವ್ಯಕ್ತಿಯು ಸಾಂಸ್ಕೃತಿಕವಾಗಿ, ದೈಹಿಕವಾಗಿ, ಮಾನಸಿಕವಾಗಿ ಬಡವಾಗುತ್ತಾನೆ ಮತ್ತು ಸಮಸ್ಯೆಗಳ ಗೂಡಾಗುತ್ತಾನೆ ಎಂಬ ಆಶಯವನ್ನು ನಿರೂಪಿಸುತ್ತದೆ.

ಸಂಪಿಗೆರಾಯ ತನ್ನ ಹಿರಿಯರು ನೆಟ್ಟು ಬೆಳೆಸಿದ ಸಂಪಿಗೆ ಮರದ ಬಡದಲ್ಲಿಯೇ ಮನೆ ಕಟ್ಟಿಕೊಂಡು ಬದುಕು ಸಾಗಿಸುತ್ತಿದ್ದ. ಆ ಸಂಪಿಗೆ ಮರದೊಂದಿಗೆ ನಿಕಟವಾದ ಸಂಬಂಧ ಸಂಪಿಗೆರಾಯನ ಕುಟುಂಬಕ್ಕಿತ್ತು. ಇಂತಹ ಸಮಯದಲ್ಲಿ ವಸಾಹತುಶಾಹಿಯ ಪರಿಸರದಲ್ಲಿ ವ್ಯವಹಾರ ಮಾಡುತ್ತಿದ್ದ ಒಬ್ಬ ಮರದ ವ್ಯಾಪಾರಿಯು ಸಂಪಿಗೆ ಮರವನ್ನು ಕತ್ತರಿಸಿ ಹಲಗೆಯಾಗಿಸಿದರೆ ಒಂದು ಅಮೂಲ್ಯವಾದ ಮನೆಯನ್ನು ಕಟ್ಟಬಹುದು. ಹಾಗೂ ನಿಮಗೆ ಚಿನ್ನದ ಬೆಲೆಯನ್ನು ಮರಕ್ಕೆ ಕೊಡುತೇನೆಂದಾಗ ಸಂಪಿಗೆರಾಯ ಹಾಗೂ ಅವನ ಹೆಂಡತಿ ಹಣದ ಆಸೆಗಾಗಿ ಮರವನ್ನು ಕತ್ತರಿಸಲು ಒಪ್ಪುತ್ತಾರೆ. ಆದರೆ ಸಂಪಿಗೆರಾಯನ ಮಗ ಶ್ರೀನಿವಾಸ ಮರವನ್ನು ಕಡಿಯದಂತೆ ಪ್ರತಿಭಟಿಸುತ್ತಾನೆ. ಕೊನೆಗೆ ಅಪ್ಪನಿಂದ ಪೆಟ್ಟುತಿಂದು, ಅಪ್ಪ ಕೊಟ್ಟ ಹಣದ ಆಸೆಯಿಂದ ಸುಮ್ಮನಾಗುತ್ತಾನೆ. ಶ್ರೀನಿವಾಸ ಬೆಳೆದ ಮೇಲೆ ವ್ಯವಹಾರ ಚತುರನಾಗಿ ಹಣಗಳಿಸುತ್ತಾನೆ, ಅಂಗಡಿ, ಬಡ್ಡಿ ವ್ಯವಹಾರ, ಮನೆ ಮಾರಾಟ, ಹಾಗೂ ವಸಾಹತುಶಾಹಿಯೊಂದಿಗಿನ ಕಳ್ಳ ವ್ಯವಹಾರದಿಂದ ಬಹುಬೇಗ ಶ್ರೀಮಂತನಾಗುತ್ತಾನೆ ಮತ್ತು ತನ್ನ ಸ್ಥಾನಕ್ಕೆ ತಕ್ಕ ಕನ್ಯೆಯನ್ನು ಲಗ್ನವಾಗಿ ಸ್ವಾತಂತ್ರ್ಯ ಸುಖಿ ಬದುಕಿಗಾಗಿ ಪಟ್ಟಣದಲ್ಲಿ ಮನೆಮಾಡುತ್ತಾನೆ ಮತ್ತು ತಂದೆ ತಾಯಿಯನ್ನು ಊರಿನಲ್ಲಿಯೇ ಉಳಿಸುತ್ತಾನೆ. ವ್ಯವಹಾರ ಬೆಲೆದಂತೆ ಹಣಕಾಸಿನ ಸ್ಥಿತಿಯು ವ್ಯಾಪಿಸುತ್ತದೆ. ಆದರೆ ಯುದ್ಧದ ಕಾಲ ಬಂದಿದ್ದರಿಂದ ಹಣಕಾಸಿನ ತೊಂದರೆ ಉಂಟಾಗಿ ಲಾಭದ ಉದ್ದೇಶದಿಂದ

ಶ್ರೀನಿವಾಸ ಹೆಂಡತಿಯ ಚಿನ್ನವನ್ನು ಉಪಯೋಗಿಸುತ್ತಾನೆ. ನಂತರದಲ್ಲಿ ತನ್ನ ತಂದೆಯ ಮನೆಯಲ್ಲಿದ್ದ ದೇವರ ಬಂಗಾರ ಪೀಠವನ್ನು ತಂದೆಯ ವಿರೋಧದ ನಡುವೆ ಮಾರಾಟ ಮಾಡಿ ಹಣವನ್ನು ವ್ಯಾಪಾರದಲ್ಲಿ ತೊಡಗಿಸುತ್ತಾನೆ.

ಸಂಪಿಗೆರಾಯನು ವರ್ಷದಲ್ಲಿ ಒಂದು ಭಾರಿ ತನ್ನ ಮನೆತನದ ಸಂಪ್ರದಾಯದಂತೆ ಹೋಮದಂತಹ ಪೂಜೆಯನ್ನು ಮಾಡಿಸುವ ಮೂಲಕ ಬ್ರಾಹ್ಮಣರಿಗೆ ಹಾಗೂ ಊರಿನ ಬಂಧು ಬಾಂಧವರಿಗೆ ಅನ್ನದಾನವನ್ನು ಮಾಡಿಸುತ್ತಿರುತ್ತಾನೆ. ಶ್ರೀನಿವಾಸನ ತಂದೆಯ ಸಂಪ್ರದಾಯಯುತ ಕಾರ್ಯವನ್ನು ವಿರೋಧಿಸಿ ದೇವರು-ದಿಂಡಿರು ಎಂಬ ಹೆಸರಿನಲ್ಲಿ ದಾನ ಧರ್ಮ ಮಾಡುವುದು ಹಣವನ್ನು ವ್ಯರ್ಥ ಮಾಡಿದಂತೆಯೇ. ಅದೇ ಹಣವನ್ನು ವ್ಯಾಪಾರಕ್ಕೆ ಬಳಸಿದರೆ ಲಾಭ ಗಳಿಸಬಹುದೆಂದು ಎಲ್ಲಾ ಧರ್ಮಕಾರ್ಯವನ್ನು ನಿಲ್ಲಿಸುತ್ತಾನೆ, ಸಂಪಿಗೆರಾಯ ಜೀವನದ ಆದರ್ಶ ಪರಂಪರೆಯೊಂದಿಗಿನ ಸಂಬಂಧವನ್ನು ಕಳೆದುಕೊಂಡು ನೆಮ್ಮದಿಯ ಸತ್ವವಿಲ್ಲದೆ ತನ್ನ ಹಿರಿಯರ ಮನೆಯಲ್ಲಿ ಹೆಂಡತಿಯೊಂದಿಗೆ ಬದುಕು ಸಾಗಿಸಲು ಆರಂಭಿಸುತ್ತಾನೆ. ಆದರೆ ಶ್ರೀನಿವಾಸನ ಹಣದ ವ್ಯಾಮೋಹದಿಂದ ತನ್ನ ತಂದೆ-ತಾಯಿದ್ದ ಮೂಲ ಮನೆಯನ್ನು ಮಾರಾಟ ಮಾಡುತ್ತಾನೆ. ಸಂಪಿಗೆರಾಯ ಎಷ್ಟೇ ಪ್ರತಿಭಟಿಸಿದರು ಮೂಲ ಮನೆಯನ್ನು ಉಳಿಸಿಕೊಳ್ಳಲಾರದೆ ಎಲ್ಲವನ್ನು ಕಳೆದುಕೊಂಡು ಬದುಕಲಾರದ ಸ್ಥಿತಿಗೆ ಸಂಪಿಗೆರಾಯ ಬರುತ್ತಾನೆ. ಈ ಕತೆಯಲ್ಲಿ ಕತೆಗಾರರು ವಸಾಹತುಶಾಹಿಯ ಪ್ರಭಾವದಿಂದಾಗಿ ಸಮಾಜದಲ್ಲಾದ ಪಲ್ಲಟಗಳು ವ್ಯಕ್ತಿಯ ಆಂತರಿಕ ಪ್ರಜ್ಞೆಯನ್ನು ನಾಶಮಾಡಿದ ಬಗೆಯನ್ನು ಹಾಗೂ ಸ್ಥಳೀಯತೆಯನ್ನು ಕಳೆದುಕೊಳ್ಳುತ್ತ ವ್ಯಕ್ತಿ ಅನಾಥನಾಗುವ ತಾತ್ವಿಕತೆಯನ್ನು ಮಂಡಿಸುತ್ತಾರೆ. ಹಣದ ಕೇಂದ್ರೀಕೃತ ಬದುಕು ನಮ್ಮ ಜೀವನ ಮೌಲ್ಯವನ್ನು ಪರಂಪರೆಯನ್ನು ನೆಮ್ಮದಿಯನ್ನು ಜೊತೆಗೆ ತನ್ನ ತನವನ್ನು ಅಸ್ಥಿರವಾಗಿಸಿ ಟೊಳ್ಳು ವ್ಯಕ್ತಿಯಾಗಿ ರೂಪಿಸುತ್ತದೆ ಎಂಬ ಆಶಯವನ್ನು ಕತೆ ಕೇಂದ್ರೀಕರಿಸುತ್ತದೆ. ಬಾಗಲೋಡಿ ದೇವರಾಯರ ಕತೆಗಳಲ್ಲಿ ವಸಾಹತುಶಾಹಿಯ ಪ್ರಭಾವದಿಂದ ಭಾರತೀಯ ಸಮಾಜದಲ್ಲಿ ಉಂಟಾದ ಪಲ್ಲಟ ಹಾಗೂ ಈ ಪಲ್ಲಟವು ಹುಟ್ಟು ಹಾಕಿದ ವ್ಯಕ್ತಿಗತ ಮತ್ತು ಸಾಮಾಜಿಕ ಸಮಸ್ಯೆಯನ್ನು ಅತ್ಯಂತ ಗಂಭೀರವಾಗಿ ಗ್ರಹಿಸುವ ಮೂಲಕ ನಮ್ಮ ಸ್ಥಳೀಯ ಬದುಕನ್ನು, ಸಂಪ್ರದಾಯವನ್ನು, ಮೌಲ್ಯಯುತ ಬದುಕಿನ ಪ್ರಜ್ಞೆಯನ್ನು ಸೂಕ್ಷ್ಮವಾಗಿ ವಸಾಹತುಶಾಹಿಗೆ ಮುಖಾಮುಖಿಯಾಗಿ ಮಂಡಿಸುವ ಆಶಯವನ್ನು ಕಾಣಬಹುದು.

ತ್ರಿವೇಣಿ

ಮೊದಲ ತಲೆಮಾರಿನ ಕತೆಗಳಿಗೆ ಹೊಸ ಸ್ಪರ್ಶ ನೀಡಿದ ಪ್ರಮುಖ ಕತೆಗಾರ್ತಿ ತ್ರಿವೇಣಿ. ಸ್ತ್ರೀ ಸಂವೇದನೆಯ ಮೂಲಕ ಮಹಿಳಾ ಅಭಿವ್ಯಕ್ತಿಯನ್ನು ಸ್ಥಳೀಯತೆಯ ಲೋಕದಲ್ಲಿ ನಿರೂಪಿಸುವ ತ್ರಿವೇಣಿಯವರು ಬದುಕಿನೊಳಗೆ ಸೇರಿಕೊಂಡಿರುವ ಅನೇಕ ಸಮಸ್ಯೆಯ ಮನಶಾಸ್ತ್ರದ ನೆಲೆಯಲ್ಲಿ ಶೋಧಿಸುವುದನ್ನು ಕಾಣಬಹುದು. ಹೆಣ್ಣು ಹಾಗೂ ಹೆಣ್ಣಿನ ಲೋಕವೇ ಇವರ ಕತೆಯ ಕೇಂದ್ರ. ಭಾರತೀಯ ಪರಂಪರೆಯು ಹೆಣ್ಣಿಗೆ ಆರೋಪಿಸಿರುವ ಗುಣಗಳನ್ನು ಸೂಕ್ಷ್ಮವಾಗಿ ದಾಟುವ ಮೂಲಕ ಸ್ತ್ರೀಯೊಬ್ಬಳ ಅಸ್ಮಿತೆಯನ್ನು ಭಾರತೀಯ ನೆಲೆದ ಸತ್ವದೊಳಗೆ ಕಟ್ಟುವ ತುಡಿತ ತ್ರಿವೇಣಿಯವರ ಕತೆಗಳಲ್ಲಿ ಅಭಿವ್ಯಕ್ತವಾಗಿವೆ. ಈ ಅಭಿವ್ಯಕ್ತಿಯನ್ನು ಸ್ಥಳೀಯತೆ ಎಂದು ಗುರುತಿಸಬಹುದು.

'ಸಮಸ್ಯೆ ಮಗು' ಕತೆಯು ಕೌಟುಂಬಿಕ ಕೇಂದ್ರವಾಗಿಸಿಕೊಂಡು ಮನಃಶಾಸ್ತ್ರದ ನೆಲೆಯನ್ನು ತಾತ್ವಿಕತೆಯಾಗಿ ಮಂಡಿಸಿದರೂ ತಂದೆ-ತಾಯಿ ಹಾಗೂ ಮಕ್ಕಳ ಸಂಬಂಧವನ್ನು ಬೆಸೆಯುವಂತಹ ಭಾರತೀಯ ಪರಂಪರೆಯ ಸತ್ವವೇ ಪಟ್ಟಿಯಾಗಿ ಕಾಣುತ್ತದೆ. ಕತೆಯಲ್ಲಿ ಗೋಪಾಲರಾಯ ಹಾಗೂ ಜಾನಕಮ್ಮಗೆ ಬಹುವರ್ಷಗಳ ನಂತರ ಹುಟ್ಟಿದ ನಾಗೇಂದ್ರ ಅತ್ಯಂತ ಪ್ರೀತಿಯ ಮಗುವಾಗಿ ಬೆಳೆದ. ಆದರೆ ನಂತರ ನಾಗೇಶ ಹುಟ್ಟಿದ ಮೇಲೆ ಜಾನಕಮ್ಮ ಹಾಗೂ ಗೋಪಾಲರಾಯು ಕಾಳಜಿ, ಪ್ರೀತಿ ನಾಗೇಶನ ಕಡೆಗೆ ಕೇಂದ್ರೀಕರಣವಾಯಿತು. ನಾಗೇಂದ್ರ ತನ್ನನ್ನು ತಂದೆ-ತಾಯಿಗಳು ದೂರಮಾಡಿದನ್ನು ಗಮನಿಸಿದ ಮತ್ತು ತಾನು ಅವರಿಂದ ಪ್ರೀತಿಯನ್ನು ಕಳೆದುಕೊಳ್ಳುವ ಕಾರಣ ನನ್ನ ತಮ್ಮ ನಾಗೇಶನೆಂದು ಅರಿತು, ನಾಗೇಶನ ಮೇಲೆ ಸಿಟ್ಟು, ದ್ವೇಷವನ್ನು ಸಾಧಿಸುತ್ತಾನಲ್ಲದೆ, ನಾಗೇಶನನ್ನು ಕಂಡರೆ ಸಿಟ್ಟಿನಿಂದ ಕುದಿಯುತ್ತಾನೆ, ತನ್ನ ತಂದೆ ತಾಯಿ ಪ್ರೀತಿ, ಕಾಳಜಿ ತನ್ನ ಕಡೆ ಕೇಂದ್ರೀಕೃತವಾಗಬೇಕೆಂದು ತನ್ನನ್ನು ದಂಡಿಸಿಕೊಳ್ಳುವ ಮನೆಬಿಟ್ಟು ಹೋಗುವಂತ ಕಾರ್ಯ ಮಾಡುತ್ತಾನೆ. ಈ ಎಲ್ಲಾ ಘಟನೆಗಳಿಂದ ಗೋಪಾಲರಾಯರು ಮತ್ತು ಜಾನಕಮ್ಮ ನಾಗೇಂದ್ರನಿಗೆ ಹುಚ್ಚು ಹಿಡಿದ್ದಿದೆ ಎಂದು ತಿಳಿದು ಅವನನ್ನು ದಂಡಿಸುವ ಮತ್ತು ನಿರ್ಲಕ್ಷ್ಯದಿಂದ ಕಾಣಲು ಆರಂಭಿಸಿದರು. ಈ ನಡುವೆ ನಾಗೇಂದ್ರನ ಮೂಲಕ ಪರಿಚಯಗೊಂಡ ನಿರೂಪಕರು ನಾಗೇಂದ್ರನ ಮಾನಸಿಕ ಸ್ಥಿತಿಯನ್ನು ಅರ್ಥ ಮಾಡಿಕೊಂಡು ಗೋಪಾಲರಾಯ ಮತ್ತು ಜಾನಕಮ್ಮಗೆ ನಾಗೇಂದ್ರ ಸಮಸ್ಯೆಯ ಮಗುವಾಗಲು ಕಾರಣವನ್ನು ಗುರುತಿಸಿ, ತಂದೆ-ತಾಯಿಗಳಿಬ್ಬರ ತಪ್ಪನ್ನು ಅವರಿಗೆ ಅರಿಕೆ ಮಾಡಿ ನಾಗೇಂದ್ರ ನಾಗೇಶ, ಗೋಪಾಲರಾಯರು-ಜಾನಕಮ್ಮ ಒಟ್ಟಿಗೆ ಪ್ರೀತಿಯಿಂದ ಬದುಕುವ ಸಂಬಂಧದ

ಬೆಸುಗೆಯನ್ನು ಕತೆಯು ವ್ಯಕ್ತಪಡಿಸುತ್ತದೆ.

ಕುಟುಂಬದ ನೆಲೆಯಲ್ಲಿ ಸಾಮಾಜೀಕರಣಕ್ಕೆ ಒಳಗಾಗುವ ಮಕ್ಕಳು ತಂದೆ-ತಾಯಿಯಿಂದ ಪ್ರಧಾನವಾಗಿ ಪ್ರಭಾವಕ್ಕೆ ಒಳಗಾಗುತ್ತಾರೆ. ತಂದೆ-ತಾಯಿಗಳ ನಡತೆಯೇ ಮಕ್ಕಳ ಮನಸಿನ ಮೇಲೆ ತೀವ್ರವಾದ ಪರಿಣಾಮವನ್ನು ತರುತ್ತದೆ. ಈ ನೆಲೆಯಲ್ಲಿ ಮಕ್ಕಳ ಮನಸನ್ನು ಅರ್ಥ ಮಾಡಿಕೊಳ್ಳುವ ಪೋಷಕರ ಕರ್ತವ್ಯವೆನ್ನುವ ಲೋಕಜ್ಞಾನವನ್ನು ಮನಃಶಾಸ್ತ್ರೀಯ ನೆಲೆಯಲ್ಲಿ ಈ ಕತೆಯು ಅಭಿವ್ಯಕ್ತಿಸುತ್ತದೆ. ನಾಗೇಂದ್ರ ತಂದೆ-ತಾಯಿಗೆ ಸಮಸ್ಯೆಯ ಮಗುವಾಗಿದ್ದವನು ಕೊನೆಗೆ ಮುದ್ದಿನ ಮಗನಾಗುವ ನೆಲೆಯಲ್ಲಿ ಸಂಬಂಧವನ್ನು ಬೆಸೆಯುವ ಆಶಯವೇ ನಮ್ಮ ಪರಂಪರೆಯ ಭಾಗವಾಗಿದೆ. ಹಾಗಾಗಿ ಇದನ್ನೆ ಸ್ಥಳೀಯತೆ ಎಂದು ಕರೆಯಬಹುದು.

ಸಂಬಂಧವನ್ನು ಬೆಸೆಯುವ ತಾತ್ವಿಕತೆಯನ್ನು ಹೊಂದಿರುವ ತ್ರಿವೇಣಿಯವರ 'ಮಗಳ ಮನಸ್ಸು' ಕತೆಯು ಸ್ತ್ರೀ ಅಸ್ತಿತ್ವ ಹಾಗೂ ಸಂವೇದನೆಯ ತತ್ವಗಳನ್ನು ಒಳಗೊಂಡಿದೆ. ಕತೆಯ ಅಂತ್ಯದಲ್ಲಿ ತಂದೆ ಮಗಳ ಸಂಬಂಧವನ್ನು ಗುಣಾತ್ಮಕವಾಗಿಯೇ ಅಭಿವ್ಯಕ್ತಿಸುತ್ತದೆ. ಈ ಅಭಿವ್ಯಕ್ತಿಯನ್ನೇ ಸ್ಥಳೀಯತೆ ಎಂದು ಕರೆಯಬಹುದು. ನರಸಪ್ಪ ತನ್ನ ತುಂಡು ಭೂಮಿಯಲ್ಲಿ ಕೃಷಿ ಮಾಡಿಕೊಂಡು ಬದುಕುತ್ತಿದ್ದ ಬಡ ರೈತನಾಗಿದ್ದ ತನ್ನ ಮೂರು ಜನ ಹೆಣ್ಣು ಮಕ್ಕಳಲ್ಲಿ ಇಬ್ಬರನ್ನು ಲಗ್ನ ಮಾಡಿಕೊಡಲು ರಾಮಯ್ಯನು ಊರ ಗೌಡನ ಕೈಯಿಂದ ಸಾಲಪಡೆದಿದ್ದ. ಸಾಲ ತೀರಿಸಲಾಗದೆ ಕೊನೆಗೆ ಮುದುಕ ರಾಮಯ್ಯನಿಗೆ ತನ್ನ ಕಿರಿ ಮಗಳಾದ ಚಂದ್ರಾಳನ್ನು ಲಗ್ನಮಾಡಿ ಕಳುಹಿಸಿದ. ಚಂದ್ರ ತನ್ನೆಲ್ಲ ಆಸೆ-ಆಕಾಂಕ್ಷೆಗಳನ್ನು ಮಣ್ಣುಪಾಲು ಮಾಡಿ ರಾಮಯ್ಯನ ಹಿಂದೆ ಹೋಗಬೇಕಾಯಿತು. ನಾಲ್ಕು ವರ್ಷಗಳಾದರು ಚಂದ್ರಾ ತವರು ಮನೆಗೆ ಬರಲಿಲ್ಲ. ತನ್ನ ತಂದೆ ಹಣಕ್ಕಾಗಿ ನನ್ನನ್ನು ಮುದಿಯನಿಗೆ ಮಾರಾಟ ಮಾಡಿದ ಎಂಬ ತಿಳುವಳಿಕೆಯಿಂದ ತಂದೆ ಹಾಗು ತವರು ಮನೆಯನ್ನು ದ್ವೇಷದಿಂದ ಕಾಣಲಾರಂಬಿಸಿದಳು.

ನರಸಪ್ಪ ಮಗಳ ಚಿಂತೆಯಲ್ಲಿ ಹಣ್ಣಾದ ತನ್ನ ಹೆಂಡತಿ ಹಾಗೂ ಕಿರೀಮಗನ ಆರೋಗ್ಯ ಅಸ್ಥಿರವಾಗಿದ್ದರಿಂದ ಮದ್ದು ಕೊಡಿಸಿ ಇವರನ್ನು ಆರೋಗ್ಯವಂತರಾಗಿ ಮಾಡಬೇಕಾದ ಕಾರಣ ಹಣದ ಅಗತ್ಯವಾಯಿತು. ಈ ಸಂದರ್ಭದಲ್ಲಿ ನರಸಪ್ಪ ತನ್ನ ಮಗಳ ಮನೆಹೋಗಿ ಮಗಳಿಗೆ ತನ್ನ ಮುಖ ತೋರಿಸಿದ, ಚಂದ್ರ ತಂದೆಯನ್ನು ಕಂಡು ಸಿಟ್ಟಿನಿಂದ ಕುದಿದಳು, ತಂದೆ ಎಂಬ ನೆಲೆಯಿಂದ ಉಪಚರಿಸದೆ ಒಳಹೋದಳು. ನರಸಪ್ಪ ಸಮಯ ನೋಡಿ ಮಗಳಲ್ಲಿ ಮಾತು ತೆಗೆದು 'ಮಗು ನಿನ್ನ ತಾಯಿ, ತಮ್ಮಂದಿರು

ಹಳ್ಳಿಯಲ್ಲಿ ಖಾಯಿಲೆಯಿಂದ ಸಾಯುತ್ತಿದ್ದಾರೆ ಎಂದು ಮಾತು ನಿಲ್ಲಿಸಿದ, ಚಂದ್ರಾ ಕಸಿವಿಸಿಗೊಂಡರೂ ತಂದೆಯನ್ನು ಒಪ್ಪಲಿಲ್ಲ. "ಯಾವ ದಿನ ನನ್ನನ್ನು ನೀನು ದುಡ್ಡಿಗಾಗಿ ಮಾರಿದೆಯೇ ಅಂದೇ ನನ್ನ ನಿನ್ನ ಸಂಬಂಧ ಕಸಿದುಹೋಯಿತು, ನಾನು ನಿನ್ನ ಮಗಳಲ್ಲ! ನೀನು ನನ್ನ ತಂದೆಯಲ್ಲ" ಎಂದು ನರಸಪ್ಪನಿಗೆ ಹೇಳಿ ಮನೆಯೊಳಕ್ಕೆ ಸೇರಿಕೊಂಡಳು, ನರಸಪ್ಪ ಮಗಳ ಮಾತುಕೇಳಿ ಮನೆಯ ದಾರಿ ಹಿಡಿದ.

ಚಂದ್ರಾಳಿಗೆ ತಂದೆಯ ಬಗೆಗಿನ ದ್ವೇಷ, ಸಿಟ್ಟು ತಣ್ಣಗಾಗಿ, ತಂದೆಯ ಸ್ಥಿತಿ ಮನವರಿಕೆಯಾಗುತ್ತದೆ. ತಾನು ಮುದುಕನನ್ನು ಲಗ್ನವಾಗಿ ಬಂದು ಆಗಿದೆ. ಅದು ಜನ್ಮಕ್ಕೆ ಅಂಟಿದ ನಂಟು. ತನ್ನ ಆಸೆಗೆಲ್ಲ ಮಣ್ಣುಗೂಡಿಯಾಗಿದೆ. ಆದರೆ ಮನೆಯವರಿಗೆ ಸಹಾಯ ಮಾಡುವ ಶಕ್ತಿಯಿದೆ ಎಂದು ತಿಳಿದು, ತಂದೆಯನ್ನು ಹುಡುಕಿಗೊಂಡು ಓಡಿಬಂದ ಚಂದ್ರಾ ತನ್ನ ಕೈಯಲ್ಲಿದ್ದ ಬಳೆಯನ್ನು ತಂದೆಗೆ ನೀಡಿ, ತಂದೆಯ ಕಾಲನ್ನು ಕಣ್ಣಿಗೆ ಒತ್ತಿಗೊಂಡು ಮನೆ ಸೇರುತ್ತಾಳೆ. ಕತೆಗಾರ್ತಿಯು ಚಂದ್ರಾಳ ಮೂಲಕ ಸ್ತ್ರೀ ಅಸ್ಮಿತೆಯನ್ನು ಶೋಧಿಸುತ್ತಾರೆ. ತನ್ನ ತಂದೆ ಮುದಿಗೌಡನಿಗೆ ಹಣದ ನೆಲೆಯಿಂದ ಲಗ್ನ ಮಾಡಿದನ್ನು ಬಲುಸಿಟ್ಟು, ದ್ವೇಷದಿಂದ ಒಪ್ಪಿಕೊಳ್ಳುವಂತೆ ಆಗುತ್ತದೆ. ತನ್ನ ಆಸೆ-ಆಕಾಂಕ್ಷೆಗಳನ್ನು ಮೂಲೆಗುಂಪು ಮಾಡಿದ ತವರನ್ನು ನೆನಪು ಮಾಡಿಕೊಳ್ಳದೆ ದೂರವಿರಿಸುತ್ತಾಳೆ. ಹೆಣ್ಣಿನ ಅಸ್ತಿತ್ವದ ಗೆರೆಗಳು ಚಂದ್ರಳ ಮೂಲಕ ವ್ಯಕ್ತಪಡಿಸುವ ಕತೆಗಾರ್ತಿ ಕತೆಯ ಕೊನೆಯಲ್ಲಿ ನಮ್ಮ ಪರಂಪರೆಯ ಸತ್ವದ ಚೌಕಟ್ಟನ್ನು ರೂಪಿಸುತ್ತಾರೆ. ಚಂದ್ರಾ ತನಗಾದ ಅನ್ಯಾಯವನ್ನು ಜನ್ಮಕಂಟಿದ ಗುಂಟು ಎಂದು ಕಳೆದುಕೊಳ್ಳುವ ಜೊತೆಗೆ ತಂದೆಯ ಕಾಲಿಗೆ ಬಿದ್ದು, ತನ್ನ ಬಳೆಗಳನ್ನು ತಂದೆಗೆ ನೀಡಿ ಆರ್ಥಿಕ ಬೆಂಬಲ ನೀಡುತ್ತಾಳೆ. ಈ ಬಗೆಯ ಚಂದ್ರಾಳ ನಿಲುವುಗಳನ್ನು ಸ್ಥಳೀಯತೆ ಎಂದು ಕರೆಯಬಹುದು.

ತ್ರಿವೇಣಿಯವರ ಹೆಚ್ಚಿನ ಕತೆಯ ಕೇಂದ್ರ ವಸ್ತು ಹೆಣ್ಣು ಮತ್ತು ಅವಳ ಸುತ್ತಲಿನ ಪುರುಷ ಪ್ರಧಾನ ಪರಿಸರ. ಹೆಣ್ಣಿನ ಸಮಸ್ಯೆಯನ್ನು ಹಾಗೂ ಸಾಮಾಜಿಕ ಸಮಸ್ಯೆಯನ್ನು ಆಧುನಿಕ ಚಿಕಿತ್ಸಾ ಮನೋಧರ್ಮದಿಂದ ನೋಡುವ ತ್ರಿವೇಣಿ ಭಾರತೀಯ ಪರಂಪರೆಯ ಒಳಗೆಯೇ ನಿಂತು ಸ್ತ್ರೀ ಅಸ್ಮಿತೆಯನ್ನು ಕಟ್ಟುವ ಕಾರ್ಯವನ್ನು ಮಾಡುತ್ತಾರೆ, ಕತೆಗಳಲ್ಲಿ ವ್ಯಕ್ತವಾಗುವ ಗಂಡು ಹೆಣ್ಣಿನ ಸಂಬಂಧ ಬೆಸೆಯುವ ನಿಲುವು, ಭಾರತೀಯ ಮೌಲ್ಯ ಆದರ್ಶ ಹಾಗೂ ಪರಂಪರೆಯನ್ನು ಕತೆಯ ಸತ್ವವಾಗಿ ಉಳಿಸಿಕೊಳ್ಳುವ ತಾತ್ವಿಕತೆಯನ್ನೆ ಸ್ಥಳೀಯತೆ ಎಂದು ಕರೆಯಬಹುದು.

**ಟೆಂಗ್ಸೆ ಗೋವಿಂದರಾವ್**

ಮಾನವ ಸಂಬಂಧ, ಪ್ರೀತಿ, ಕಾಳಜಿಯನ್ನು ಕತೆಯ ಸತ್ವವಾಗಿ ಮಂಡಿಸಿದ ಪ್ರಮುಖವಾದ ಉತ್ತರ ಕರ್ನಾಟಕ ಭಾಗದ ಲೇಖಕ ಟೆಂಗ್ಸೆ ಗೋವಿಂದರಾವ್ ವಸಾಹತುಶಾಹಿಯ ಧೋರಣೆಗಳು ಭಾರತೀಯ ಸಮಾಜದ ದುಡಿಯುವ ವರ್ಗದ ಮೇಲೆ ಉಂಟು ಮಾಡಿದ ಬಂಡವಾಳ ಕೇಂದ್ರಿತ ಚಿಂತನೆಯನ್ನು ಬಹುಸೂಕ್ಷ್ಮವಾಗಿ ಗ್ರಹಿಸಿ ಗೋವಿಂದರಾವ್ ಸ್ಥಳೀಯ ನೆಲದ ದುಡಿಮೆ, ಆಚಾರ, ಭಾಷೆ ಹಾಗೂ ಪರಂಪರೆಯನ್ನು ಕತೆಯ ನೆಲೆಯಲ್ಲಿ ಅಭಿವ್ಯಕ್ತಿಸುತ್ತಾರೆ. ಈ ಅಭಿವ್ಯಕ್ತಿಯನ್ನೆ ಸ್ಥಳೀಯತೆ ಎಂದು ಕರೆಯಬಹುದು.

'ಗಂಗೆಯ ಗುತ್ತಿಗೆ' ಎಂಬ ಕತೆಯು ಅಗಸರ ಬದುಕಿನ ಪರಿಸರವನ್ನು ಕೇಂದ್ರೀಕರಿಸಿದರೂ ಸಹ ವಸಾಹತುಶಾಹಿಯ ಸಂದರ್ಭದಲ್ಲಿ ವೃತ್ತಿಯಲ್ಲಿ ಆದ ಪಲ್ಲಟವನ್ನು ಹಾಗೂ ಸ್ಥಳೀಯ ಜನರ ಹೊಂದಾಣಿಕೆಯ ಬದುಕನ್ನು ಸ್ಥಳೀಯತೆಯ ನೆಲೆಯಲ್ಲಿ ತಾತ್ವಿಕರಿಸುತ್ತದೆ. ಗಂಗೆ ಹಾಗೂ ಅವಳ ತಂದೆ ಪರಂಪರೆಯಿಂದ ಬಂದ ವೃತ್ತಿಯಾದ ಅಗಸಗಾರಿಕೆಯನ್ನೆ ನೆಚ್ಚಿಕೊಂಡು ಬದುಕು ಸಾಗಿಸುತ್ತಿರುತ್ತಾರೆ, ಈ ನಡುವೆ ತಮ್ಮ ಸಂಬಂಧಿಗಳಾದ ಬೈರ ಮತ್ತು ಆತನ ಅಣ್ಣನು ಗೌಡರ ಬಾವಿಯನ್ನು ಗುತ್ತಿಗೆ ಹಿಡಿದು 'ಜುಬೀಲಿ ವಾಷಿಂಗ್' ಕಂಪನಿಯನ್ನು ಸ್ಥಾಪಿಸುತ್ತಾರೆ. ಈ ಕಂಪೆನಿಯ ಆರಂಭದಿಂದ ಗೌಡರ ಮನೆ ಬಟ್ಟೆಗಳು ಗಂಗೆಯ ಕಡೆಗೆ ತೊಳೆಯಲು ಬರಲಿಲ್ಲ, ಬದಲಿಗೆ ಜುಬೀಲಿ ವಾಷಿಂಗ್ ಕಂಪನಿಯ ಕಡೆಗೆ ಹೋದವು. ಗಂಗೆಯ ಕುಟುಂಬಕ್ಕೆ ಆಧಾರವಾಗಿದ್ದ ಬಾವಿಯು ಗುತ್ತಿಗೆಯ ನೆಲೆಯಿಂದ ಬೈರನ ಪಾಲಾಯಿತು. ಜುಬೀಲಿ ವಾಷಿಂಗ್ ಕಂಪನಿಯ ಆರಂಭವು ಗಂಗೆಯ ಕುಟುಂಬ ಕಾಯಕಕ್ಕೆ ಹಾಗೂ ಹೊಟ್ಟೆಗೆ ಹೊಡೆತ ನೀಡಿತು. ಆದರೆ ಕತೆಯ ಅಂತ್ಯದಲ್ಲಿ ಗಂಗೆ ಹಾಗೂ ಬೈರನ ಲಗ್ನದ ಮೂಲಕ ಎರಡು ಕುಟುಂಬಗಳು ಒಂದೇ ಬಾವಿಯಿಂದ ನೀರನ್ನು ಬಳಸಿಕೊಂಡು ಬದುಕನ್ನು ಕಟ್ಟಿಕೊಳ್ಳುತ್ತವೆ. ಈ ಕತೆಯಲ್ಲಿ ಕತೆಗಾರರು ವಸಾಹತುಶಾಹಿಯ ಬಂಡವಾಳ ಕೇಂದ್ರಿತ ಸಾಮಾಜಿಕ ವ್ಯವಸ್ಥೆಗೆ ಸ್ಥಳೀಯ ಸಂಬಂಧವನ್ನು ಬೆಸೆಯುವ ಭಾರತೀಯ ಪರಂಪರೆಯ ನೆಲೆಯನ್ನು ಮುಖಾಮುಖಿ ಯಾಗಿಸುವ ಮೂಲಕ ಕುಟುಂಬವನ್ನು ಒಟ್ಟಿಗೆ ತರುವ ತಾತ್ವಿಕತೆಯನ್ನು ಅಭಿವ್ಯಕ್ತಿಸುತ್ತಾರೆ. ಈ ಅಭಿವ್ಯಕ್ತಿಯೇ ಸ್ಥಳೀಯತೆಯಾಗಿದೆ.

ಭಾರತೀಯ ಪರಂಪರೆಯ ನೆಲೆಯ ಭಾಗವಾದ ಜಮೀನುದಾರಿಕೆಯ ವ್ಯವಸ್ಥೆಯ ಪರಿಸರವನ್ನು ಸೂಕ್ಷ್ಮವಾಗಿ ಗ್ರಹಿಸುವ 'ಸಣ್ಣ ಮೀನು ದೊಡ್ಡ ಮೀನ' ಕತೆಯು ಕೃಷಿ

ಪರಿಸರದಲ್ಲಿ ನಡೆಯುವ ಆರ್ಥಿಕ ಸಂಘರ್ಷ ಹಾಗೂ ಸಣ್ಣ ರೈತರು ಮತ್ತು ಜಮೀನುದಾರಿಗಳೊಂದಿಗಿನ ಸಂಬಂಧವನ್ನು ಕೋರ್ಟು ಹಾಗೂ ಸಾಕ್ಷಿಗಳೆಂಬ ಅಭಿವ್ಯಕ್ತಿಯ ನೆಲೆಯಲ್ಲಿ ನಿರೂಪಿಸುತ್ತದೆ. ಭಾರತವು ಕೃಷಿ ಪ್ರಧಾನ ಸಮಾಜವನ್ನು ಹೊಂದಿರುವುದರಿಂದ ಕೃಷಿ ನೆಲೆಯಲ್ಲಿಯೇ ನಮ್ಮ ಸಂಸ್ಕೃತಿ ಹಾಗೂ ಆಧಿಕಾರ ವ್ಯವಸ್ಥೆ ರಚನೆಗೊಂಡಿದೆ. ರೈತರು ತಮ್ಮ ಕಷ್ಟ ಸುಖಗಳಿಗೆ ಶ್ರೀಮಂತ ಜಮೀನುದಾರಿಗಳನ್ನು ನೆಚ್ಚಿಕೊಂಡಿದ್ದರು. ಸಣ್ಣ ರೈತರು ಹಾಗೂ ಭೂಮಾಲಿಕರೊಂದಿಗೆ ಪರಂಪರಾಗತವಾದ ಸಂಬಂಧ ಸಂಘರ್ಷಗಳು ಸರ್ವೇಸಾಮಾನ್ಯವಾಗಿದ್ದವು. ಆದರೆ ವಸಾಹತುಶಾಹಿಯ ಆಗಮನದ ನಂತರದಲ್ಲಿ ಈ ವ್ಯವಸ್ಥೆಯು ಪಲ್ಲಟವಾಗಲು ಆರಂಭವಾಯಿತು. ಬ್ಯಾಂಕ್ ಹಾಗೂ ಕೋರ್ಟುಗಳೆಂಬ ವಸಾಹತುಶಾಹಿ ವ್ಯವಸ್ಥೆಯು ರೈತರಿಗೆ ಭೂಮಾಲಿಕ ವ್ಯವಸ್ಥೆಯಿಂದ ಸ್ವಾತಂತ್ರ್ಯ ಹೊಂದುವ ಆಶಾಕಿರಣ ಹುಟ್ಟಿಕೊಂಡಿತು. ಈ ಆಶಾಕಿರಣದ ಸೂಕ್ಷ್ಮ ತರಂಗಗಳು ಈ ಕತೆಯಲ್ಲಿ ಹೆಪ್ಪುಗಟ್ಟಿ ಜೀವಪಡೆಯುವುದನ್ನು ಗುರುತಿಸಬಹುದು. ರೈತರ ಸುಧಾರಣೆಯನ್ನು ಮಾತನಾಡುತ್ತ ರೈತರ ಕಾಳಜಿಯನ್ನು ಹೊಂದಿದ ವಕೀಲನೊಬ್ಬನ ಮಾತನ್ನು ಅರಿತುಕೊಂಡ ರೈತನೊಬ್ಬ ತನಗೆ ಭೂಮಾಲಿಕರಿಂದ ಆಗುವ ಆರ್ಥಿಕ ಶೋಷಣೆಯನ್ನು ವಕೀಲನ ಮುಂದಿರಿಸಿ ಪರಿಹಾರ ಯಾಚಿಸುತ್ತಾನೆ. ವಕೀಲನು ರೈತನಿಗೆ ಸಾಲಕ್ಕೆ ಬ್ಯಾಂಕುಗಳಿವೆ ಹಾಗೂ ಭೂಮಾಲೀಕ ಸೊಕ್ಕು ಮುರಿದು ನಿಮ್ಮ ಸಮಸ್ಯೆಯನ್ನು ಬಗೆಹರಿಸಲು ಕೋರ್ಟುಗಳಿವೆ ಎಂಬ ಭರವಸೆಯ ಮಾತುಗಳನ್ನು ರೈತನಿಗೆ ಹೇಳಿ ಕೋರ್ಟಿನಲ್ಲಿ ಭೂಮಾಲಿಕನ ವಿರುದ್ಧ ಖಟ್ಲೆ ಹೂಡುವ ಆದರೆ ನಿಮ್ಮ ಪರವಾದ ಸಾಕ್ಷಿ ಅಗತ್ಯ ಎಂದ ವಕೀಲನ ಮಾತನ್ನು ನಂಬಿದ ರೈತ ಮರುದಿನ ಹಣವನ್ನು ಸಾಕ್ಷಿಗಾಗಿ ಜೋಡಿಸಿಕೊಂಡು ಕೋರ್ಟಿಗೆ ನಡೆದು ಖಟ್ಲೆ ಹಾಕಿದ ಮತ್ತು ಬ್ಯಾಂಕಿಗೂ ಸಾಲಕ್ಕಾಗಿ ಅರ್ಜಿಸಲ್ಲಿಸಿದ. ವಕೀಲನ ನೆಲೆಯಲ್ಲಿ ಕೋರ್ಟಿನ ಕೆಲಸಗಳು ಮುಂದುವರಿದು ವಿಚಾರಣೆ ಆರಂಭವಾಯಿತು. ರೈತನ ಪರವಾಗಿದ್ದ ಸಾಕ್ಷಿದಾರರು ಕೋರ್ಟಿನಲ್ಲಿ ಭೂಮಾಲಿಕನ ಪರವಾಗಿ ಹೇಳಿಕೆ ಕೊಟ್ಟರು. ರೈತನು ಭೂಮಾಲಿಕನ ವಿರುದ್ಧ ಜಯಕಾಣಲಾಗಲಿಲ್ಲ. ಹಾಗೂ ಬ್ಯಾಂಕಿನಲ್ಲಿ ರೈತನ ಅರ್ಜಿಯು ಶ್ರೀಮಂತ ವರ್ತಕರ ನೆಲೆಯಿಂದಾಗಿ ಅಡಿಬಿದ್ದು ವಿಳಂಬದ ಹಾದಿ ಹಿಡಿಯಿತು.

ರೈತನನ್ನು ಕಂಡ ವಕೀಲನು ದೊಡ್ಡಮೀನು ಸಣ್ಣ ಮೀನುಗಳನ್ನು ತಿಂದು ಬದುಕುತ್ತದೆ, ಸಣ್ಣ ಮೀನು ದೊಡ್ಡ ಮೀನನ್ನು ನುಂಗಲು ಸಾಧ್ಯವಾಗುವುದಿಲ್ಲ ಎನ್ನುವ ಕತೆಯನ್ನು ಹೇಳುವ ಮೂಲಕ ಇರುವ ವ್ಯವಸ್ಥೆಯಲ್ಲಿ ಹೊಂದಿಕೊಂಡು ಹೋಗಬೇಕೆಂಬ ತತ್ವವನ್ನು

ರೈತನಿಗೆ ಹೇಳುತ್ತಾನೆ. ಕತೆಯಲ್ಲಿ ಅಭಿವ್ಯಕ್ತಗೊಂಡಿರುವ ರೈತನ ಜೀವನ ವಿನ್ಯಾಸ ಭೂಮಾಲಿಕ ವ್ಯವಸ್ಥೆಯೊಂದಿಗಿನ ಸಂಬಂಧ ಹಾಗೂ ಹೊಂದಿಕೊಂಡು ಹೋಗಬೇಕೆನ್ನುವ ತತ್ವವು ಸ್ಥಳೀಯತೆಯ ಮೀಮಾಂಸೆಯನ್ನು ಗುರುತಿಸುತ್ತದೆ. ಟೆಂಗ್ಸೆ ಗೋವಿಂದರಾವ್ ಅವರ ಕತೆಗಳು ವಸಾಹತುಶಾಹಿಯ ಧೋರಣೆಯು ಭಾರತೀಯ ಜೀವನ ಮೀಮಾಂಸೆಯ ಮೇಲೆ ಉಂಟು ಮಾಡಿದ ಪರಿಣಾಮವನ್ನು ಸೂಕ್ಷ್ಮವಾಗಿ ಗುರುತಿಸುತಿಸುವ ಮೂಲಕ ಸ್ಥಳೀಯತೆಯ ಸ್ವರೂಪವನ್ನು ಕತೆಗಳ ಪ್ರಜ್ಞೆಯಾಗಿ ನಿರೂಪಿಸುತ್ತಾರೆ. ವಸಾಹತುಶಾಹಿ ಧೋರಣೆಯ ಲೋಕಗ್ರಹಿಕೆಯಲ್ಲಿ ನಮ್ಮ ನೆಲದ ಪರಂಪರೆಯ ಸತ್ವವನ್ನು ಉಳಿಸುವ ಹಾಗೂ ಸಂಕರವಾಗಿಸುವ ತಾತ್ವಿಕತೆಯನ್ನು ಇವರ ಕತೆಗಳು ಒಳಗೊಂಡಿವೆ.

**ಕಡೆಂಗೋಡ್ಲು ಶಂಕರಭಟ್ಟ**

ಮೊದಲ ತಲೆಮಾರಿನ ಕತೆಗಾರರಲ್ಲಿ ಕಡೆಂಗೋಡ್ಲು ಶಂಕರಭಟ್ಟರು ಪ್ರಮುಖರು. ಮಾನವಿಕ ಸಂಬಂಧದ ಮೇಲೆ ಸಂಕೀರ್ಣವಾದ ಬೆಳಕು ಚೆಲ್ಲುವ ಇವರ ಕತೆಗಳು ಪ್ರಾಮಾಣಿಕತೆ, ನಂಬಿಕೆ, ಆಚಾರ, ಜೀವನ ಮೌಲ್ಯಗಳಂತಹ ಭಾರತೀಯ ಪರಂಪರೆಯ ಸತ್ವಗಳು ನಿರೂಪಣೆಗೊಂಡಿರುವುದನ್ನು ಕಾಣಬಹುದು. ವಸಾಹತುಶಾಹಿಯು ರೂಪಿಸಿದ ಧೋರಣೆಗೆ ಬ್ರಾಹ್ಮಣ ಸಮೂಹವು ಹೆಚ್ಚು ಸಾಂಸ್ಕೃತಿಕ ಆಕ್ರಮಣಕ್ಕೆ ಒಳಗಾಯಿತು ಮತ್ತು ವಸಾಹತುಶಾಹಿಯ ಆಲೋಚನಾ ಕ್ರಮಕ್ಕೆ ತನ್ನನ್ನು ತೆರೆದುಕೊಂಡಿತು. ಈ ನಡುವೆ ಹುಟ್ಟಿಕೊಂಡ ವಸಾಹತುಶಾಹಿ ಸಂಸ್ಕೃತಿಯೊಂದಿಗಿನ ಸಂಘರ್ಷವು ನಮ್ಮ ಸ್ಥಳೀಯ ಬದುಕಿನ ಕ್ರಮವನ್ನು ಸಾಂಸ್ಕೃತಿಕ ಎಳೆಗಳನ್ನು ಜೋಡಿಸುವ ಮೂಲಕ ಅದರ ಅಸ್ತಿತ್ವವನ್ನು ಉಳಿಸಿಕೊಳ್ಳುವ ನೆಲೆಯಲ್ಲಿ ಶಂಕರಭಟ್ಟರ ಕತೆಗಳು ಸ್ಥಳೀಯತೆಯನ್ನು ಎದುರುಗೊಳ್ಳುತ್ತವೆ.

ಮೊದಲ ಕತೆಗಳು ಭಾವುಕತೆ ಹಾಗೂ ನೀತಿಬೋಧಕ ನೆಲೆಯನ್ನು ಹೊಂದಿದ್ದವು. ನಂತರ ಕತೆಗಳು ವಿಶಿಷ್ಟ ಸಾಮಾಜಿಕ ಕಾಳಜಿಯನ್ನು ಮುಡಿಸಿಕೊಂಡವಲ್ಲದೆ, ಜಾತಿ ಧರ್ಮದಂತಹ ಸೂಕ್ಷ್ಮ ವಸ್ತುಗಳನ್ನು ಭಾರತೀಯ ನೆಲೆಯಲ್ಲಿ ವಸಾಹತುಶಾಹಿಯ ಪ್ರತಿಯಾಗಿ ರೂಪಿಸುವ ಆಲೋಚನೆಯನ್ನು ಪ್ರತಿನಿಧಿಸುತ್ತದೆ. ಪ್ರೊ. ಎ.ವಿ.ನಾವಡ ಅವರು ಒಂದು ಕಡೆ ಹೀಗೆ ಬರೆಯುತ್ತಾರೆ 'ಸಾಂಸ್ಕೃತಿಕ ಮೌಲ್ಯಗಳನ್ನಾಗಲೀ, ತನ್ನ ಕಾಲದ ಬದುಕಿನ ನಂಬಿಕೆಗಳ ಬದ್ಧತೆಯಾಗಲಿ ಇಲ್ಲಿ ಕಾಣಿಸುವುದಿಲ್ಲ. ಎಲ್ಲ ನಿರೂಪಣೆಗಳಲ್ಲೂ ನ್ಯಾಯಾಧೀಶ ಕಡೆಂಗೋಡ್ಲು ಮುಂದೆ ನಿಂತು ಭೌತಿಕ ಕಸರತ್ತು ನಡೆಸಿದಂತೆ ಕಾಣುತ್ತದೆ.

ಈ ಮಾತು ಕಡೆಂಗೋಡ್ಲು ಶಂಕರಭಟ್ಟರ ಕತೆಯ ಜಗತ್ತನ್ನು ಹೇಳುತ್ತದೆ. ಇವರ ಕತೆಗಳಲ್ಲಿ ಸ್ಥಳೀಯತೆ ಎಂಬುವುದು ಮಾನವ ಸಂಬಂಧ ನೆಲೆಯಲ್ಲಿ, ಭೂ ಮಾಲಿಕ ಹಾಗೂ ದುಡಿಯುವ ವರ್ಗ ಬದುಕಿನ ಮೀಮಾಂಸೆಯ ಅಭಿವ್ಯಕ್ತಿ ಸಂಕಲಿತ ರೂಪವೇ ಸ್ಥಳೀಯತೆಯ ಪ್ರಜ್ಞೆಯಾಗಿ ಕತೆಗಳಲ್ಲಿ ನಿರೂಪಿತವಾಗಿದೆ.

'ಅಡ್ಡಿಟ್ಟು' ಎಂಬ ಕತೆಯು ಬ್ರಾಹ್ಮಣ ಸಮುದಾಯದ ಪರಿಸರವನ್ನು ಅನುಸಂಧಾನಕ್ಕೆ ಒಳಪಡಿಸಿದಂತೆ ಕಂಡರೂ ಕತೆಯಲ್ಲಿ ಸ್ಥಳೀಯವಾದ ನೆಲದ ಸಂಪ್ರದಾಯ, ವೈದಿಕರ ನೆಲೆಯ ಶ್ರಾದ್ಧದಂತಹ ಕಾರ್ಯದ ತಿಳಿವಳಿಕೆ, ಹೆಣ್ಣು ಒಬ್ಬಳ ಬಡತನದ ಬದುಕಿನ ಮೀಮಾಂಸೆಯು ಅನುಭವದ ಮೌಲ್ಯದ ನಿರೂಪಣೆಯಲ್ಲಿ ಸ್ಥಳೀಯತೆಯ ಸ್ವರೂಪವು ಕಾಣುತ್ತದೆ. ಬಡತನದ ಕುಟುಂಬದಲ್ಲಿ ಶಾರದೆಯು ಬೆಳೆಯುತ್ತಾಳೆ. ಆರ್ಥಿಕ ಬಡತನವಿತ್ತೇ ವಿನಾ ಸಾಂಸ್ಕೃತಿಕ ಬಡತನವಿರಲಿಲ್ಲ. ಉತ್ತಮ ಸಂಸ್ಕಾರದೊಂದಿಗೆ ಬೆಳೆದು ದೊಡ್ಡವಳಾದ ಮೇಲೆ ತಂದೆ ತಾಯಿಗಳಿಗೆ ಮದುವೆ ಮಾಡುವದೇ ಬಹುಕಷ್ಟವಾಯಿತು. ವರನನ್ನು ಹುಡುಕಿ ಹುಡುಕಿ ಸೋತಿದ್ದ ತಂದೆ ತಾಯಿಗೆ ಸಿಕ್ಕ ಒಬ್ಬ ವರನಿಗೆ ಹಿಂದು ಮುಂದು ನೋಡದೆ ಲಗ್ನ ಮಾಡಿಕೊಟ್ಟರು. ಮೊದಲು ಒಳ್ಳೆಯವನಾಗಿಯೇ ಇದ್ದ ಶಾರದೆಯ ಗಂಡ ನಾರಾಯಣ. ನಾರಾಯಣನ ಅಕ್ಕ ಗಂಡನನ್ನು ಬಿಟ್ಟು ತವರು ಮನೆಯನ್ನು ಸೇರಿದಳು. ಶಾರದೆ ಹಾಗೂ ನಾರಾಯಣನ ಅಕ್ಕನ ನಡುವಿನ ಸಂಘರ್ಷ ಕುಟುಂಬ ನೆಮ್ಮದಿಯನ್ನು ಹಾಳುಮಾಡಿತು. ನಾರಾಯಣನು ಅಕ್ಕನ ಬೆಂಬಲಕ್ಕೆ ನಿಂತು ಹೆಂಡತಿಯನ್ನು ಹಿಂಸಿಸಲು ಆರಂಭಿಸಿದ. ಶಾರದೆಗೆ ಬೈಗುಳ, ಅಪಮಾನ, ನಿಂದನೆ, ಹೊಡೆತಗಳು ದಿನದ ಮಾತಾದವು. ನೊಂದು ಬೆಂದು ಎಲ್ಲವನ್ನು ಸಹಿಸಿಕೊಂಡ ಶಾರದೆ ಗರ್ಭಿಣಿಯಾದಳು. ಒಂದು ದಿನ ಶಾರದೆ ಮತ್ತು ನಾರಾಯಣನ ಅಕ್ಕ ನಡುವಿನ ಅಡ್ಡಿಟ್ಟಿಗಾಗಿ ನಡೆದ ಜಗಳವು ಮುಂದೆ ನಾರಾಯಣನ ಹೊಡೆತದಿಂದ ಶಾರದೆ ಸಾವನ್ನು ಅಪ್ಪುತ್ತಾಳೆ.

ಕತೆಯು ಬ್ರಾಹ್ಮಣ ಸಮುದಾಯದಲ್ಲಿ ಹೆಣ್ಣಿನ ಮೇಲಾಗುತ್ತಿದ್ದ ಹಿಂಸೆಯನ್ನು ನಿರೂಪಿಸುವ ಜೊತೆಗೆ ಸಂಪ್ರದಾಯ ಬದ್ಧವಾದ ಹೆಣ್ಣಿನ ಕಾರ್ಯವನ್ನು ಕತೆಯು ಸ್ಥಳೀಯ ಭಾಗವಾಗಿ ಉಳಿಸಿಕೊಂಡು ಬರುತ್ತದೆ. ಶಾರದೆಗೆ ಗಂಡ ಮನೆಯಲ್ಲಿ ಎಷ್ಟೇ ನೋವುಗಳಾದರು ಗಂಡನ ಮನೆಯನ್ನು ಬಿಟ್ಟು ತವರು ಮನೆ ಬರದೆ ತನಗಾದ ನೋವನ್ನು ಸಂಪ್ರದಾಯ ಬದ್ಧವಾದ ಕರ್ಮ ಸಿದ್ಧಾಂತವೆಂದು ಭಾವಿಸಿ ಅನುಸರಿಸುತ್ತಾಳೆ. ಶಾರದೆಯ ಸಾವನ್ನು ಕಣ್ಣಾರೆ ಕಂಡ ಪಾರ್ವತಮ್ಮ ಬಲವಾಗಿ ಪ್ರತಿಭಟಿಸದೆ ಮೌನವಾಗಿಯೇ

ಪ್ರತಿಕ್ರಿಯಿಸುವ ಕ್ರಮವನ್ನು ಸ್ಥಳೀಯತೆಯ ಪ್ರಜ್ಞೆ ಎಂದು ಕರೆಯಬಹುದು.

ದುಡಿಯುವ ಮಕ್ಕಳು ಎಂಬ ಕತೆಯು ಭೂಮಾಲೀಕ ವ್ಯವಸ್ಥೆಯಲ್ಲಿ ದುಡಿಯುವ ಜನರ ಸಂವೇದನೆಯ ನೆಲೆಯಲ್ಲಿ ಸ್ಥಳೀಯತೆಯು ಅಭಿವ್ಯಕ್ತವಾಗುತ್ತದೆ. ಸೋಮ ಮತ್ತು ಕೆಂಚಿ ತನ್ನ ಒಡೆಯರ ಮನೆಯಲ್ಲಿ ತಮ್ಮದೆ ಮನೆಯ ಕೆಲಸವೆಂದು ದುಡಿಯುವುದು. ಸೋಮ ತನಗೆ ಬಂದ ಪತ್ರವನ್ನು ಅಂಚೆಯವಲ್ಲಿ ಓದಲು ಹೇಳಿದಾಗ ಪತ್ರವನ್ನು ಚೂರು ಮಾಡಿ ಸೋಮನ ಮುಖಕ್ಕೆ ಎಸೆದು ಹೋಗುವ ಮೂಲಕ ಸೋಮನನ್ನ ಅವಮಾನ ಮಾಡುವುದು. ಸೋಮ ಕೆಂಚಿ ತನ್ನ ಮಗನನ್ನು ಓದಿಸಿ, ದೊಡ್ಡವನಾಗಿ ಮಾಡಬೇಕೆಂದು ಆಸೆಪಟ್ಟು, ತನ್ನ ಮಗನಾದ ಲಿಂಗಣ್ಣನನ್ನು ಶಾಲೆಗೆ ಸೇರಿಸಕೊಳ್ಳಬೇಕೆಂದು ತಮ್ಮ ಒಡೆಯರಾದ ನಾಯಕರಲ್ಲಿ ಕೇಳಿ ಒಪ್ಪಿಗೆ ಪಡೆದು ಲಿಂಗನನ್ನು ಶಾಲೆಗೆ ಸೇರಿಸಿದ ಮೇಲೆ ಲಿಂಗಣ್ಣ ಹಾಗೂ ನಾಯಕರ ಮಗನ ನಡುವಿನ ಸಂಘರ್ಷ. ಲಿಂಗಣ್ಣ ಓದಿನ ಆಸಕ್ತಿ, ಕಲಿಯುವಿಕೆ ಮತ್ತು ಬರಹದ ಬಗೆಗಿನ ಬೆಳವಣಿಗೆಯು ಯಜಮಾನಿಕೆಯ ವ್ಯವಸ್ಥೆ ಕೆಣಕಿಸುತ್ತದೆ. ಕಲಿಯಲು ಹೋದ ಲಿಂಗಣ್ಣ ಹೆಣವಾಗಿ ಮನೆಸೇರುತ್ತಾನೆ.

ಕತೆಯಲ್ಲಿ ಕತೆಗಾರರು ಅಭಿವ್ಯಕ್ತಿಸುವ ಸಾಮಾಜಿಕ ವ್ಯವಸ್ಥೆಯ ನೆಲೆ, ಭೂಮಾಲೀಕ ವ್ಯವಸ್ಥೆ ಮತ್ತು ದುಡಿಯುವ ವರ್ಗಗಳ ಸಂಬಂಧ, ಸೋಮ ಮತ್ತು ಕೆಂಚಿಯ ಪ್ರೇಮ ಹಾಗೂ ದಾಂಪತ್ಯ, ಸೋಮನ ಬೆಳವಣಿಗೆಯನ್ನು ಪ್ರತಿರೋಧಿಸುವ ಉತ್ತಮ ವರ್ಗಗಳೆಲ್ಲವೂ ಸ್ಥಳೀಯ ಬದುಕಿನ ಸತ್ವವಾಗಿ ಕತೆಯಲ್ಲಿ ನಿರೂಪಣೆಗೊಳ್ಳುತ್ತದೆ. ಕಡೆಂಗೋಡ್ಲು ಶಂಕರ ಭಟ್ಟರ ಕತೆಗಳು ಸಾಮಾಜಿಕ ವಾಸ್ತವದ ಕಡೆಗೆ ಮುಖ ಮಾಡಿದಂತೆ ಬಾಸವಾದರು ಕತೆಯ ಮೀಮಾಂಸೆಯು ನಮ್ಮ ಬದುಕಿನ ಸತ್ವ, ಪರಂಪರೆ, ಆದರ್ಶ, ಮೌಲ್ಯಗಳ ಗುಣಾತ್ಮಕ ಜೋಡಣೆ ಎಂಬಂತೆ ಗೋಚರವಾಗುತ್ತದೆ.

**ಎಂ.ಎನ್. ಕಾಮತ್**

ಪಂಜೆ, ಕಾರಂತ, ಮಾಸ್ತಿಯ ಕಾಲದಲ್ಲಿ ಬರೆಯುತ್ತಿದ್ದ ಕತೆಗಾರರಲ್ಲಿ ಎಂ.ಎನ್.ಕಾಮತ್ ಅವರು ಪ್ರಮುಖರು. ಬಂಗಾಳಿ ಸಾಹಿತ್ಯದಿಂದ ಪ್ರಭಾವಿತರಾಗಿ ಕನ್ನಡದಲ್ಲಿ ಸೃಜನಶೀಲವಾದ ಕತೆಗಳನ್ನು ನೀಡಿದ ಕಾಮತರು ತಮ್ಮ ಕತೆಗಳಲ್ಲಿ ಜೀವನಾನುಭವ ಹಾಗೂ ವಸಾಹತುಶಾಹಿಯ ಆಧುನಿಕ ಶಿಕ್ಷಣ ಕ್ರಮ, ವೈಚಾರಿಕತೆಯನ್ನು ಗುಣಾತ್ಮಕವಾದ ನೆಲೆಯಲ್ಲಿ ಅನುಸಂಧಾನ ಮಾಡುತ್ತಾರೆ. ಹಾಗೆಯೇ ಸ್ಥಳೀಯತೆಯನ್ನು ನಿರಾಕರಿಸುತ್ತಾರೆ ಎಂದಲ್ಲ. ಸ್ಥಳೀಯತೆಯ ಜ್ಞಾನ ಪ್ರಜ್ಞೆಯನ್ನು ವಸಾಹತುಶಾಹಿಯ ಧೋರಣೆಯೊಂದಿಗೆ

ಸಂಕರವಾಗಿಸುವ ತಾತ್ವಿಕ ನಿಲುವುಗಳನ್ನು ಇವರ ಕತೆಗಳು ಹೊಂದಿವೆ.

'ವೈದ್ಯರಾಜ ಧನ್ವಂತರಿ' ಎನ್ನುವ ಕತೆಯು ಭಾರತೀಯ ಪರಂಪರೆಯ ವೈದ್ಯಕೀಯ ಮೀಮಾಂಸೆಯನ್ನು ಗುಣಾತ್ಮಕವೆಂದು ಹೇಳುವ ಜೊತೆಗೆ ವಸಾಹತುಶಾಹಿಯು ರೂಪಿಸಿದ ಬಂಡವಾಳ ಕೇಂದ್ರಿತ ಆಸ್ಪತ್ರೆ ಹಾಗೂ ಆಧುನಿಕ ಔಷಧಿ ಉಪಚಾರಗಳನ್ನು ನಿರಾಕರಿಸುವ ನೆಲೆಯಲ್ಲಿ ಸ್ಥಳೀಯ ಪ್ರಜ್ಞೆಯು ಅನಾವರಣವಾಗುತ್ತದೆ.

ಊರಿನ ಜನರಲ್ಲೆ ನಾಟಿ ವೈದ್ಯರಿಂದಲೇ ತಮ್ಮ ಆರೋಗ್ಯವನ್ನು ಕಾಪಾಡಿಕೊಂಡಿದ್ದರು. ಸೋಮು ಆ ಸಂದರ್ಭದಲ್ಲಿ ಪ್ರಸಿದ್ಧವಾದ ನಾಟಿ ವೈದ್ಯೆಯಾಗಿದ್ದಳು. ಬಾಲ ಮಕ್ಕಳ ಬಾಲಗ್ರಹದಿಂದ ಹಿಡಿದು ಮುದುಕರ ಸೊಂಟ ನೋವಿನವರೆಗೂ ಕಷಾಯ, ಬೇರು ಲೇಪ, ಚಿಗುರು ಎಂಬ ಔಷಧಿಯನ್ನು ನೀಡಿ ಗುಣಪಡಿಸುತ್ತಿದ್ದಳು. ಸೋಮುವಿನ ಮರಣದ ನಂತರ ಊರಿನ ಹಳಬರೊಬ್ಬರು ಔಷಧಿ ನೀಡಲು ಆರಂಭಿಸಿದರು. ಈ ಸಂದರ್ಭಕ್ಕೆ ಆವೂರಿಗೆ ಬೋರ್ಡಿನ ಆಸ್ಪತ್ರೆ ಪ್ರವೇಶ ಪಡೆದು ಡಾಕ್ಟರ್ ನರ್ಸ್‌ಗಳು ಓಡಾಡತೊಡಗಿದರು. ಎಲ್ಲಾ ವರ್ಗದವರನ್ನು ಮುಟ್ಟ ಪರೀಕ್ಷಿಸುವ ಜೊತೆಗೆ ಬಾಟಲಿಯಲ್ಲಿ ತುಂಬಿಸಿದ ಔಷಧಿ ಮಾತ್ರೆಗಳು ರಕ್ತ, ಮೂತ್ರದಂತಹ ದೇಹದ ಅಂಗಗಳ ಪರೀಕ್ಷೆ ಆರಂಭವಾಯಿತು. ಈ ನಡುವೆ ನಾಟಿ ಔಷಧಿಯನ್ನು ಜನ ನಿರಾಕರಿಸಿ, ಆಂಗ್ಲ ಆಸ್ಪತ್ರೆಯನ್ನು ನೆಚ್ಚಿಕೊಂಡು ನಡೆದರು. ಆದರೆ ಈ ನೆಚ್ಚಿಕೆ ಹೆಚ್ಚು ದಿನ ಮುಂದುವರಿಯಲಿಲ್ಲ. ಸಾವಿನ ಸಂಖ್ಯೆ ಹೆಚ್ಚಾಯಿತು, ಬಂಡವಾಳ ಕೇಂದ್ರಿತವಾದ ಆಸ್ಪತ್ರೆಯು ಜನರ ಹಣವನ್ನು ದೋಚಲು ಆರಂಭಿಸಿತು. ರೋಗಗಳ ಪಟ್ಟಿ ಔಷಧಿಗಳ ಪಟ್ಟಿ ಹೆಚ್ಚಾದಂತೆ ಜನರು ಆಂಗ್ಲ ಆಸ್ಪತ್ರೆಯನ್ನು ನಿರಾಕರಿಸಿ ನಾಟಿ ಧನ್ವಂತರಿ ಔಷಧಿಯ ಕಡೆಗೆ ಮುಖ ಮಾಡಿದರು.

ಕತೆಗಾರರು ವಸಾಹತುಶಾಹಿಯು ರೂಪಿಸಿದ ಬೋರ್ಡಿನ ಆಸ್ಪತ್ರೆಯನ್ನು ವಿಮರ್ಶಾತ್ಮಕವಾಗಿ ನೋಡುವ ಜೊತೆಗೆ ಸ್ಥಳೀಯ ವೈದ್ಯಶಾಸ್ತ್ರವನ್ನು ಗುಣಾತ್ಮಕವೆಂದು ಮಂಡಿಸುತ್ತಾರೆ. ಈ ಅಭಿವ್ಯಕ್ತಿಯೇ ಸ್ಥಳೀಯತೆಯಾಗಿದೆ.

'ಕದ್ದವರು ಯಾರು'. ಎಂಬ ಕತೆಯು ವಸಾಹತುಶಾಹಿಯ ವೈಚಾರಿಕತೆಯನ್ನು ಗುಣಾತ್ಮಕವೆಂದು ಒಪ್ಪಿಕೊಳ್ಳುವ ಜೊತೆ ನಮ್ಮ ಪರಂಪರೆಯಲ್ಲಿ ಬೇರು ಬಿಟ್ಟಿರುವ ಮೂಢನಂಬಿಕೆಗಳನ್ನು ಹೊರಹಾಕುವಂತಹ ತಾತ್ವಿಕತೆಯನ್ನು ಮಂಡಿಸುತ್ತದೆ. ಆವೂರಿನಲ್ಲಿ ಉಗ್ಗಪ್ಪ ಶೆಟ್ಟಿಯು ಪಟೇಲನಾಗಿ ನಾರಾಯಣರಾಯ ಶ್ಯಾನುಭೋಗನಾಗಿ ಊರಿನ ಆಡಳಿತವನ್ನು ನಿರ್ವಹಿಸಿದ್ದರೂ, ಪಟೇಲನ ಧರ್ಮಪತ್ನಿ ಕೆರೆಯಲ್ಲಿ ಮೀಯಲು ಹೋದಾಗ ತನ್ನ 'ಗೆಜ್ಜೆ ಟೀಕು' ಕಳೆದು ಹೋಗಿದೆ ಎಂದು ತಾನು ಮೀಯುವಾಗ ಶ್ಯಾನುಬೋಗರ

ಹೆಂಡತಿ ನಾಗಮ್ಮ ಇದ್ದರೆಂದು ಅವರೇ ತೆಗೆದಿರಬೇಕೆಂದು ಅನುಮಾನ ಹುಟ್ಟಿ, ಪಟೇಲರು ಶ್ಯಾನುಭೋಗರಿಗೆ ವಿಷಯ ತಿಳಿಸಿ, ಗೆಜ್ಜೆಟೀಕು ತಂದು ಕೊಡುವಂತೆ ಕೇಳುತ್ತಾರೆ. ಶ್ಯಾನುಭೋಗ ನಾರಾಯಣರು ತಮ್ಮ ಕೆಲಸವನ್ನು, ಮರ್ಯಾದೆಯನ್ನು ತೆಗೆದಳೆಂದು ಮನೆಗೆ ಬಂದು ಹೆಂಡತಿಯನ್ನು ಗೆಜ್ಜೆಟೀಕು ಕೊಡು ಎಲ್ಲಿ ಇಟ್ಟೀದ್ದೀಯ ಎಂದು ಬೈದು ನಿಂದಿಸಿ ಗದರಿಸುತ್ತಾರೆ. ನಾಗಮ್ಮ ನನಗೆ ತಿಳಿದಿಲ್ಲವೆಂದು ಅಳುತ್ತಾಳೆ. ಆದರು ಬಿಡದ ಶ್ಯಾನುಭೋಗರು 'ಇತ್ತ ಬಂದೆ ಎನ್ನಬೇಡ ಇತ್ತ ತಂದೆ ಎನ್ನು ಎಲ್ಲಿಟ್ಟಿದ್ದಿ ಅದನ್ನು? ಈಗಲೇ ಕೊಡು. ನಾನು ಬಡವನು, ಈ ಮನೆ, ಹಿತ್ತಿಲು ಎಲ್ಲವೂ ಪಟೇಲರು. ಅವರ ಪಟೇಲಿಕೆಯೂ, ನನ್ನ ಶಾನುಭೋಗಿಕೆಯೂ ನನ್ನವಾದರೂ, ನಮ್ಮಿಬ್ಬರ ಜೀವನವು ನಡೆಯುತ್ತಿರುವುದು ಅವರ ಅನುಗ್ರಹದಿಂದ. ಬಡತನವಿದ್ದರೆ ಚಿಂತಿಲ್ಲ. ಮೂಗುತಿಯಿದ್ದರೆ ಸಾಕು. ಮಂಗಲಸೂತ್ರ ಸಾಕು, ಗೆಜ್ಜೆ ಟೀಕಿನ ಆಸೆ ಮಾಡಬೇಡ ಎಲ್ಲಿದೆ ಕೊಡು' ಎಂದು ಎಷ್ಟು ಕೇಳಿದರೂ ನಾಗಮ್ಮ ನನಗೆ ಗೊತ್ತಿಲ್ಲವೆಂದಾಗ ಶ್ಯಾನುಬೋಗರು ನಿನಗೆ ಭೂತ ಮೆಟ್ಟಿರಬೇಕೆಂದು ರುಕ್ಕುವಿನ ಹತ್ತಿರ ಮಂತ್ರವಾದಿಯನ್ನು ಕರೆಕಳಿಸಿದರು. ಮಂತ್ರವಾದಿ ಬಂದವನು ಎಲ್ಲಾ ವಿಚಾರ ತಿಳಿದುಕೊಂಡು ನಾಗಮ್ಮಗೆ ಜಲದುರ್ಗೆ ಮೆಟ್ಟಿಕೊಂಡಿದ್ದಾಳೆ. ಹಾಗಾಗಿ ಆಭರಣವನ್ನು ಅಡಗಿಸಿಬಿಟ್ಟಿದ್ದಾಳೆ. ಜಲದುರ್ಗೆಯ ಉಚ್ಚಾಟನೆಯಾದರೆ ಗೆಜ್ಜೆ ಟೀಕು ಸಿಗುವುದೆಂದು ಆಜ್ಞಾಪಿಸಿ ತನ್ನ ಮಂತ್ರ ಮೀಮಾಂಸೆಯನ್ನು ಆರಂಭಿಸಿ ಅಗ್ನಿಯ ಕುಂಡದಲ್ಲಿ ನಾಗಮ್ಮನನ್ನು ಕೂರಿಸಿ ಕೂಗಾಡುತ್ತಿದ್ದಾಗ, ಜಿಲ್ಲಾ ಕಲೆಕ್ಟರ್ ಅಲ್ಲಿಗೆ ಆಗಮಿಸಿ ಆ ಪರಿಸರವನ್ನು ಗಮನಿಸಿ ಏನೆಂದು ವಿಚಾರಿಸಿ, ನಾಗಮ್ಮನನ್ನು ಹಿಂಸಿಸುವುದು ತಪ್ಪೆಂದು ಹೇಳಿ ತನ್ನ ಜೇಬಿನಿಂದ ಗೆಜ್ಜೆ ಟೀಕನ್ನು ತೆಗೆದು ಪಟೇಲರಿಗೆ ನೀಡಿ ಮಂತ್ರವಾದಿಯ ತಂತ್ರ ಮಾಟವೆಲ್ಲ ಮೋಸವೆಂದು ಹಳ್ಳಿಯ ಜನರಿಗೆ ಮೋಸ ಮಾಡುವ ಇಂತಹ ಮಂತ್ರವಾದಿ ಹಳ್ಳಿಯಲ್ಲಿ ಇರಬಾರದೆಂದು ಮಂತ್ರವಾದಿಯ ವಿಚಾರಣೆಗೆ ನಗರಕ್ಕೆ ಕರೆದುಕೊಂಡು ಹೋಗಬೇಕೆಂದು ಆಜ್ಞೆ ಮಾಡುತ್ತಾಸೆ.

ಕತೆಗಾರರು ಭಾರತೀಯ ಮೌಢ್ಯ ಪರಂಪರೆಯನ್ನು ನಿರಾಕರಿಸುವ ಜೊತೆಗೆ ವಸಾಹತುಶಾಹಿಯ ವೈಚಾರಿಕ ನಿಲುವುಗಳನ್ನು ಉನ್ನತವಾದದು ಎಂಬ ಭಾವನೆಯನ್ನು ತಾಳುತ್ತಾರೆ. ಕತೆಯಲ್ಲಿ ಅಭಿವ್ಯಕ್ತಗೊಳ್ಳುವ ಪಟೇಲ ಮತ್ತು ಶಾನುಭೋಗರ ಸಂಬಂಧ ನಾಗಮ್ಮ ಗೆಜ್ಜೆ ಟೀಕು ಕದ್ದಿಲ್ಲವೆಂದು ಹೇಳಿದರೂ ನಂಬದ ಗಂಡ ಶ್ಯಾನುಭೋಗರ ನಾರಾಯಣ ಬೈಯುವ ಬೈಗುಳ ಹಾಗೂ ಅಪಮಾನ, ಹಿಂಸೆ ಇವುಗಳೆಲ್ಲ ತಾಳಿಕೊಂಡು ಮೌನವಾಗಿರುವ ನಾಗಮ್ಮನ ಗುಣ, ಮಂತ್ರವಾದಿಯ ನಡತೆ ಹಾಗೂ ದೈವವನ್ನು

ಬಿಡಿಸುವ ಬಗೆಗಳು ಸ್ಥಳೀಯ ಬದುಕಿನ ಸ್ವರೂಪವಾಗಿದೆ. ಎಂ.ಎನ್. ಕಾಮತರು ತಮ್ಮ ಕತೆಗಳಲ್ಲಿ ಸ್ಥಳೀಯತೆಯನ್ನು ಆಧುನಿಕತೆಯ ಟಂಕಸಾಲೆಯಿಂದ ನಿರೂಪಿಸಿರುವುದನ್ನು ಗುರುತಿಸಬಹುದು.

**ಕುವೆಂಪು**

ಮೊದಲ ತಲೆಮಾರಿನ ಕತೆಗಾರರಲ್ಲಿ ಮಲೆನಾಡಿನ ಜೀವನ ಮೀಮಾಂಸೆಯನ್ನು ದಾರ್ಶನಿಕ ಅಭಿವ್ಯಕ್ತಿಯ ನೆಲೆಯಲ್ಲಿ ಮಂಡಿಸಿದ ಕತೆಗಾರ ಕುವೆಂಪು. ಕುವೆಂಪು ಅವರ ಕಥಾಪ್ರಪಂಚವೇ ಸ್ಥಳೀಯತೆ, ವಸಾಹತುಶಾಹಿಯ ಉತ್ತಮವಾದ ಲೋಕಗ್ರಹಿಕೆಯನ್ನು ತಮ್ಮದಾಗಿಸಿಕೊಂಡ ಕುವೆಂಪು ಅವರು ವೈಚಾರಿಕತೆ ಮತ್ತು ವಿಜ್ಞಾನವನ್ನು ಭಾರತೀಯ ಪರಂಪರೆಯ ಜೀವನ ದೃಷ್ಟಿಯಲ್ಲಿ ರೂಪಿಸಲು ಪ್ರಯತ್ನಿಸುತ್ತಾರೆ. ಇವರ ಕತೆಗಳ ಕೇಂದ್ರ ಸ್ಥಳೀಯ ಬದುಕಿನ ಪ್ರಪಂಚದ ಆಗುಹೋಗುಗಳಾಗಿವೆ. ಭಾರತೀಯ ನಂಬಿಕೆ ಪರಂಪರೆ ಆಚಾರ ಧರ್ಮ ಜೀವನ ಮೌಲ್ಯಗಳನ್ನು ಗುಣಾತ್ಮಕವಾದ ನಿಲುವಿನಲ್ಲಿ ಕತೆಗಳಲ್ಲಿ ಅಭಿವ್ಯಕ್ತವಾಗಿದೆ. ಭೂಮಾಲಿಕ ವ್ಯವಸ್ಥೆ ಆ ವ್ಯವಸ್ಥೆಯೊಂದಿಗಿನ ದುಡಿಯುವ ವರ್ಗಗಳ ಸಂಬಂಧ ಜೀವನ ಪ್ರೀತಿ ನಂಬಿಕೆ ಮಾನವೀಯ ಚಿಂತನೆಯ ಅಭಿವ್ಯಕ್ತಿಗಳೇ ಸ್ಥಳೀಯತೆಯ ಪ್ರತಿಪಾದಕ ಅಂಶಗಳಾಗಿವೆ.

'ನನ್ನ ದೇವರು' ಕತೆಯು ಭಾರತೀಯ ಜೀವನ ಮೌಲ್ಯಗಳನ್ನು ಕಾಪಿಟ್ಟುಕೊಂಡು ಮಾನವನ ಮೂಲ ಸ್ವಭಾವವನ್ನು ಅಭಿವ್ಯಕ್ತಿಸುವ ಕತೆಯಾಗಿದೆ. ಹದಿನೈದು ವರ್ಷ ತುಂಬಿದ ಹುಡುಗಿ ತನ್ನ ಗಂಡನನ್ನು ಕಳೆದುಕೊಂಡು ದುಃಖಿತಳಾಗಿ ತನ್ನೆಲ್ಲ ಸೌಭಾಗ್ಯ ನಾಶವಾಯಿತೆಂದು ದುಃಖ ಮಡುವಿನಲ್ಲಿಯೇ ದಿನ ದೂಡುವಾಗ ಅತ್ತೆ ಭಾವನವರು ಹುಡುಗಿಯನ್ನು ಸಮಾಧಾನಿಸಿ ಜಗತ್ತು ದರ್ಶನ ಬೇರೆ "ಅಮ್ಮ ನಿನ್ನ ಪತಿ ನನಗೆ ತಮ್ಮನಲ್ಲವೇ? ನನಗೆ ದುಃಖವಿಲ್ಲವೇ? ನಮ್ಮ ಕಣ್ಣಿಗೆ ಮರೆಯಾದ ಮಾತ್ರಕ್ಕೆ ಅವನು ಇಲ್ಲವೆಂದುಕೊಂಡೆಯಾ? ನಾವು ಆತನ ದೇಹವನ್ನು ಮಾತ್ರ ಪ್ರೀತಿಸುತ್ತಿದ್ದೇವೆ. ಹಾಗಾದರೆ, ದೇಹದ ಪ್ರೀತಿ ದೇಹದೊಡನೆ ಏಕೆ ಹೋಗಲಿಲ್ಲ? ಅವನಿನ್ನೂ ಇದ್ದಾನೆ, ನಾನು ಬಲ್ಲೆ. ನೀನು ತಿಳಿಯ ಬಲ್ಲೆ" ಎಂಬ ಮಾತಿನ ಮೂಲಕ ಹೊಸ ಉಲ್ಲಾಸವನ್ನು ಹುಡುಗಿಯಲ್ಲಿ ಮೂಡಿಸುತ್ತಾರೆ.

ಗಂಡನ ಅಣ್ಣನಾಗಿ ಪರಿಚಯವಾಗಿದ್ದ ಭಾವನ ನಡುವೆ ಮಾತುಕತೆ ಆರಂಭವಾಗಿ ತುಂಬ ಸಲುಗೆ ಹುಟ್ಟಿಕೊಳ್ಳುತ್ತದೆ. ತಾನು ಓದಿದ ಪುಸ್ತಕವನ್ನು ಭಾವನೊಂದಿಗೆ ಚರ್ಚಿಸುವುದು

ಅವನ ನೋಡುತ್ತಲೆ ತನ್ನನ್ನ ಮರೆಯುವ ಜೊತೆಗೆ ಭಾವನ ಮೇಲೆ ಪ್ರೀತಿ ಮೂಡುತ್ತದೆ. ಆ ಪ್ರೀತಿ ಹೆಪ್ಪುಗಟ್ಟಿ ಒಂದು ದಿನ ರಾತ್ರಿ ಭಾವನಿದ್ದ ಕೋಣೆಗೆ ಹೋಗಿ ಭಾವನನ್ನು ಸೇರಬೇಕು ಎಂದು ಕೊಂಡು ಭಾವನ ಕೋಣೆಗೆ ಹೋಗಿ ಭಾವನ ಮುಖನೋಡುವಾಗ ತನ್ನ ಗಂಡನೇ ಎದುರಿಗೆ ಬಂದಂತೆ ಭಾಸವಾಗಿ ಮೂರ್ಛೆ ಹೋಗುತ್ತಾಳೆ ನಂತರ ಎಚ್ಚರವಾಗಿ ನೋಡುವಾಗ ಭಾವ ದೇವರಂತೆ ಕಾಣುತ್ತಾನೆ. ಕತೆಯಲ್ಲಿ ಕತೆಗಾರರು ಜೀವನ ಮೌಲ್ಯವನ್ನು ಕಾಪಿಟ್ಟುಕೊಂಡು, ಗಂಡನನ್ನು ಕಳೆದುಕೊಂಡ ಎಳೆವಯಸ್ಸಿನ ಹುಡುಗಿ ತನ್ನ ಭಾವನಿಗೆ ಮನಸೋತು, ಪ್ರೀತಿ ಮೋಹವನ್ನು ಕಂಡು ಅವನನ್ನು ಸೇರಬೇಕು ಎನ್ನುವಾಗ ಅವಳಿಗೆ ಭಾವ ದೇವರಂತೆ ಕಾಣುತ್ತಾನೆ ಹಾಗೂ ಅವಳ ಮನಸಿನ ಭಾವನೆಗಳೆಲ್ಲ ಶುದ್ಧವಾಗುತ್ತದೆ. ಈ ನಿಲುವನ್ನು ನಾವು ಸ್ಥಳೀಯತೆ ಎಂದು ಕರೆಯಬಹುದು.

ಭೂ ಮಾಲಿಕ ವ್ಯವಸ್ಥೆಯ ಮೀಮಾಂಸೆಯನ್ನು ತಾತ್ವಿಕರಿಸುವ ಮೂಲಕ ದುಡಿಯುವ ಜನರ ಬದುಕಿನ ವಿನ್ಯಾಸವನ್ನು ಸ್ಥಳೀಯತೆಯ ನೆಲೆಯಲ್ಲಿ ನಿರೂಪಿಸುವ ಕತೆ 'ಸಾಲದ ಮಗು' ಗೌಡರಿಂದ ಸಾಲ ಪಡೆದ ಸುಬ್ಬನ ತಂದೆ ಸಾಲ ತೀರಿಸಲಾಗದೆ ಸಾವನ್ನು ಕಂಡ ನಂತರದಲ್ಲಿ ಸುಬ್ಬ ಗೌಡರ ಜೀತದಾಳಾಗಿ ಬದುಕಬೇಕಾಯಿತು. ಸುಬ್ಬ ಸಣ್ಣ ಹುಡುಗನೆಂದು ನೋಡದೆ ಗೌಡರು ಬೆತ್ತದಿಂದ ದಂಡಿಸಿ ದುಡಿಸುತ್ತಿದ್ದರು. ಒಮ್ಮೆ ರಾತ್ರಿ ಜೋರಾಗಿ ಮಳೆ ಸುರಿಯಲು ಆರಂಭಿಸಿದಾಗ ಗೌಡರು ಸುಬ್ಬನನ್ನು ಏಳಿಸಿ ಹೊಡೆದು ಮೀನಿನ ಕೂಣಿ ನೋಡಲು ಕಳುಹಿಸಿದರು. ಜೋರು ಮಳೆಯಲ್ಲಿ ಲಾಟಿನು ಹಿಡಿದು ಗದ್ದೆಗೆ ಬಂದ ಸುಬ್ಬ ಮೀನಿನ ಕೂಣಿ ಎತ್ತುವಾಗ ವಿಷಸರ್ಪ ಕಚ್ಚಿ ಮರಣ ಹೊಂದಿದ. ಈ ಕತೆಯಲ್ಲಿ ಗೌಡರು ಜೀತಮಕ್ಕಳನ್ನು ನೋಡುತ್ತಿದ್ದ ಬಗೆ, ಸುಬ್ಬನ ಜೀವನ ವಿನ್ಯಾಸ, ದುಡಿಮೆ ಹಾಗೂ ಸಾವು ಸ್ಥಳೀಯತೆಯ ಸ್ವರೂಪವು ಒಳಗೊಂಡ ಜೀವನ ಪರಿಸರವಾಗಿದೆ. ಕುವೆಂಪು ಅವರ ಕತೆಗಳು ಮೌಢ್ಯವನ್ನು ನಿರಾಕರಿಸಿದರೂ ಭಾರತೀಯ ಸಂಸ್ಕೃತಿಯ ಅಭಿವ್ಯಕ್ತಿಯನ್ನು ಕಾಪಾಡಿಕೊಂಡು ಬರುತ್ತವೆ. ವಸಾಹತುಶಾಹಿಯು ರೂಪಿಸಿದ ಯಂತ್ರ ನಾಗರೀಕತೆ, ಕೃಷಿ ವಾಣಿಜ್ಯೀಕರಣ ಆಧುನಿಕತೆಯನ್ನು ಪ್ರತಿರೋಧಿಸುವ ನೆಲೆಯು ಕತೆಯಲ್ಲಿ ಅಭಿವ್ಯಕ್ತವಾಗುತ್ತದೆ. ಧನ್ವಂತರಿಯ ಚಿಕಿತ್ಸೆ ಕತೆಯು ಈ ಅಭಿವ್ಯಕ್ತಿಗೆ ಬಲವಾದ ಉದಾಹರಣೆಯಾಗಿದೆ. ಸ್ಥಳೀಯತೆಯ ಸ್ವರೂಪವು ಕತೆಯ ಪರಿಸರದ ನೆಲೆಯಲ್ಲಿ ಹಾಗೂ ಕತೆಯ ಆಶಯದ ನೆಲೆಯಲ್ಲಿ ಅಭಿವ್ಯಕ್ತವಾಗಿರುವುದನ್ನು ಕುವೆಂಪು ಅವರ ಕತೆಗಳು ಬಿಂಬಿಸುತ್ತವೆ.

**ಸೇಡಿಯಾಪು ಕೃಷ್ಣಭಟ್ಟ**

ಮೊದಲ ತಲೆಮಾರಿನ ಸಂದರ್ಭದಲ್ಲಿ ಆಧುನಿಕ ಸಣ್ಣಕತೆಗಳನ್ನು ನೀಡಿದ ಪ್ರಮುಖ ಕತೆಗಾರ ಸೇಡಿಯಾಪು ಕೃಷ್ಣಭಟ್ಟರು. ಸ್ಥಳೀಯತೆ ಕೇಂದ್ರವಾದ ಇವರ ಕತೆಗಳು ವಸಾಹತುಶಾಹಿ ಸಂದರ್ಭದಲ್ಲಿ ಅಳಿದು ಹೋದ ಸ್ಥಳೀಯ ಪರಂಪರೆಯ ಜ್ಞಾನ ವಸ್ತು ಹಾಗೂ ಪರಿಸರವನ್ನು ಮರುಕಟ್ಟುವ ನೆಲೆಯಲ್ಲಿ ತಮ್ಮ ಕತೆಯ ಆಶಯವನ್ನು ರೂಪಿಸುತ್ತಾರೆ. ಸೇಡಿಯಾಪು ಅವರ ಕತೆಗಳ ನಡೆಯೇ ಸ್ಥಳೀಯತೆಯ ಅಸ್ತಿತ್ವವನ್ನು ಕಟ್ಟುವುದಾಗಿದೆ. ವಸಾಹತುಶಾಹಿಯು ಆಧುನಿಕತೆಯ ಭಾರತೀಯ ಪರಿಸರದಲ್ಲಿ ಪ್ರವೇಶ ಪಡೆದ ಮೇಲೆ ನಮ್ಮ ಪರಂಪರೆ ಸತ್ವ ನಾಶವಾಗಲು ಆರಂಭವಾಯಿತು. ಈ ರೀತಿಯ ಸಾಂಸ್ಕೃತಿಕ ಪಲ್ಲಟವನ್ನು ಗಮನಿಸಿದ ಸೇಡಿಯಾಪು ಕೃಷ್ಣಭಟ್ಟರು ಸಣ್ಣಕತೆಗಳ ಮೂಲಕ ನಮ್ಮ ನೆಲದ ಸಾಂಸ್ಕೃತಿಕ ಪರಂಪರೆಯನ್ನು ನಿರೂಪಿಸುವ ತಾತ್ವಿಕತೆಯನ್ನು ಒಳಪಡುತ್ತದೆ. ನಾಗರ ಬೆತ್ತ ಹಾಗೂ ಚೆನ್ನಮಣೆಯಂತಹ ಕತೆಯು ಭಾರತೀಯ ಸಂಸ್ಕೃತಿಯ ಪುರಾತನವಾದ ವಸ್ತುಗಳ ಗುಣಾತ್ಮಕ ನಿರೂಪಣೆಯ ಅನುಸಂಧಾನವಾಗಿದೆ. ನಾಗರ ಬೆತ್ತ ಕತೆಯು ವಸಾಹತುಶಾಹಿಯ ಧೋರಣೆ ಹಾಗೂ ಸಾಂಸ್ಕೃತಿಕ ಪ್ರಜ್ಞೆಯ ನಡುವೆ ಸ್ಥಳೀಯ ಬದುಕಿನ ಮೀಮಾಂಸೆಯನ್ನು ಮಂಡಿಸುತ್ತದೆ. ಕತೆಯು ನಾಗರ ಬೆತ್ತದ ಸುತ್ತ ನಿರೂಪಣೆಗೊಳ್ಳುತ್ತದೆ. ಹಾಗೂ ನಂಬಿಕೆಯ ಗೆಲುವನ್ನು ನಿರೂಪಿಸುತ್ತದೆ. ಸ್ಥಳೀಯ ಪರಿಸರದಲ್ಲಿನ ಬೆತ್ತವು ಧಾರ್ಮಿಕ ಆಯಾಮವನ್ನು ಪಡೆದ ನಾಗರ ಬೆತ್ತವಾಗಿ ಭಾರತೀಯ ಸಂಸ್ಕೃತಿಯ ಭೂಮಿಕೆಯನ್ನು ಪ್ರತಿನಿಧಿಸುತ್ತದೆ. ಸೇಡಿಯಾಪು ಕೃಷ್ಣಭಟ್ಟರು ವಸಾಹತುಶಾಹಿಯ ಧೋರಣೆಗಳಿಗೆ ಮೌನದಿಂದ ಉತ್ತರಿಸುವ ಹಾಗೂ ವಸಾಹತುಶಾಹಿಯ ಅಭಿವೃದ್ಧಿಯ ಪರಿಕಲ್ಪನೆಯನ್ನು ನೈಜ ನೆಲೆಯ ಅಭಿವ್ಯಕ್ತಿಯ ಮೂಲಕ ಸ್ಥಳೀಯತೆಯನ್ನು ಕಟ್ಟುತ್ತಾರೆ.

ದೇವಜ್ಜಿಯ ಗಂಡ ವೈಚಾರಿಕವಂತ, ಪಾಶ್ಚಾತ್ಯವಾದಿ ಹಾಗೂ ವಸಾಹತುಶಾಹಿಯ ಧೋರಣೆಯ ಬಗ್ಗೆ ಒಲವು ಹೊಂದಿರುವವನಾಗಿದ್ದ. ಅಭಿವೃದ್ಧಿಯಂತಹ ಪರಿಕಲ್ಪನೆಯನ್ನು ನೆಚ್ಚಿಕೊಂಡಿದ್ದ. ಆದರೆ ಭಾರತದ ಆಚಾರ, ನಂಬಿಕೆ ಸಂಸ್ಕಾರಗಳನ್ನು ನಿರಾಕರಿಸುತ್ತಾರೆ. ನಾಗರ ಬೆತ್ತವನ್ನು ಬೆತ್ತವೆಂದು ಸೌಂದರ್ಯದ ಭಾಗವಾಗಿ ಬೆಳ್ಳಿಯ ಕಟ್ಟು ಹಾಕಿಸಿಕೊಂಡು ತರುವಾಗ ಬ್ರಿಟಿಷ್ ಸೈನಿಕರ ಕಣ್ಣಿಗೆ ನಾಗರಬೆತ್ತವು ಕಾಣಿಸುತ್ತದೆ. ನಾಗರಬೆತ್ತವನ್ನು ತನ್ನದಾಗಿಸಿಕೊಳ್ಳುವ ನೆಲೆಯಲ್ಲಿ ಬ್ರಿಟಿಷ್ ಸೈನಿಕರು ದೇವಜ್ಜಿಯ ಗಂಡನನ್ನು ಕೊಂದು, ಬೆತ್ತ ಪಡೆಯುತ್ತಾರೆ. ಕತೆಗಾರರು ಈ ಕತೆಯಲ್ಲಿ ಸೂಕ್ಷ್ಮವಾಗಿ ಭಾರತೀಯರಿಗೆ

ವಸಾಹತುಶಾಹಿಯ ಬಗ್ಗೆ ಇದ್ದ ಮನೋಭಾವವನ್ನು ಇಂಗ್ಲಿಷರ ಉದಾರ ನೀತಿ, ನ್ಯಾಯನಿಷ್ಠೆ ಅಭಿವೃದ್ಧಿ ಚಿಂತನೆ ಏಕರೀತಿಯ ಕಾನೂನು ಇತ್ಯಾದಿಗಳನ್ನು ದೇವಜ್ಜಿಯ ಗಂಡನ ನೆಲೆಯಿಂದ ಕುಂಪಿನಿಯವರನ್ನು ದೇವರೇ ನಮ್ಮೂರಿಗೆ ಕಳುಹಿಸಿದ್ದು! ಅವರನ್ನು ಕಂಡರೆ ಎದ್ದು ನಿಂತು ಕೈ ಮುಗಿಯಬೇಕು ಎಂದರಂತೆ' ಎಂದು ಮಂಡಿತವಾದರೆ ಭಾರತೀಯ ಜನರ ಹಾಗೂ ಸಂಪತ್ತಿನ ಬಗೆಗಿನ ವಸಾಹತುಶಾಹಿಯ ಧೋರಣೆಯನ್ನು ಬ್ರಿಟಿಷ್ ಸೈನಿಕರ ವರ್ತನೆಯ ಮೂಲಕ ಮಂಡಿತವಾಗುತ್ತದೆ. ಈ ನಡುವೆ ಸ್ಥಳೀಯ ಪ್ರಜ್ಞೆಯನ್ನು ಕತೆಗಾರರು ಕಾಪಿಟ್ಟುಕೊಳ್ಳುತ್ತಾರೆ. 'ದೇವಜ್ಜಿ ತನ್ನ ಗಂಡನ ಸಾವಿಗೆ ಬ್ರಿಟಿಷರನ್ನು ದೂರುವುದಿಲ್ಲ, ಬದಲಿಗೆ ತನ್ನ ಹಣೆಬರಹ ನನ್ನ ಹಣೆಯಲ್ಲಿ ಗಂಡನನ್ನು ಉಳಿಸಿಕೊಳ್ಳುವ ಭಾಗ್ಯವಿರಲಿಲ್ಲ, ಕೆಟ್ಟಗತಿ, ಅದೃಷ್ಟವಿಲ್ಲ ಎಂದೆಲ್ಲ ಹೇಳಿ ಕೊಳ್ಳುತ್ತಾಳೆ. ಈ ಹೇಳಿಕೆಯೇ ನಮ್ಮ ಬದುಕಿನ ಪರಂಪರೆಯ ಭಾಗವಾಗಿದೆ. ಈ ರೀತಿಯ ನಿಲುವುಗಳನ್ನು ಸ್ಥಳೀಯತೆ ಎಂದು ಕರೆಯಬಹುದು.

ಕತೆಯಲ್ಲಿ 'ಬೆತ್ತ ನಾಗರ ಬೆತ್ತವಾಗಿ, ನಂಬಿಕೆಯ ಭಾಗವಾಗಿ ನಿಲ್ಲುತ್ತದೆ. ಕೃಷ್ಣನು ಘಟ್ಟದಿಂದ ಆಟವಾಡಲು ತಂದ ಸುಂದರವಾದ ಕಟ್ಟು ಹಾಕಿಸಿದ ಬೆತ್ತವು ಅಜ್ಜನ ದೃಷ್ಟಿಗೆ ಬಿದ್ದು ಪುಡಿಪುಡಿಯಾಗುತ್ತದೆ. ಇನ್ನೊಂದು ಭಾಗದಲ್ಲಿ ದೇವಜ್ಜಿಯ ಗಂಡ ಸೌಂದರ್ಯದ ಭಾಗವಾಗಿ ಕಟ್ಟು ಹಾಕಿಸಿ ತಂದ ಬೆತ್ತ ವಸಾಹತುಶಾಹಿಯ ದೃಷ್ಟಿಗೆ ಬಿದ್ದು, ಅದರ ವಶವಾಗುತ್ತದೆ. ಕತೆಯು ಬೆತ್ತವನ್ನು ಕಾರ್ಣಿಕದ ಭಾಗವಾದ 'ನಾಗರ ಬೆತ್ತವಾಗಿ', ನಂಬಿಕೆಯ ಮುಷ್ಟಿಯಲ್ಲಿ ವಸಾಹತುಶಾಹಿಯ ಆಲೋಚನೆಗೆ ಮುಖಾಮುಖಿಯಾಗಿಸುವುದನ್ನು ಕಾಣಬಹುದು. ಅಂತೆಯೇ ವಸಾಹತುಶಾಹಿಯ ಕೃಷಿ ವಾಣಿಜ್ಯೀಕರಣದ ಭಾಗವಾಗಿ ಘಟ್ಟ ಪ್ರದೇಶದ ನಮ್ಮ ನೆಲದ ಸಸ್ಯಮರಗಳು ನಾಶವಾಗಿ ಬಂಡವಾಳ ಕೇಂದ್ರಿತ ಕಾಫಿ ಮತ್ತು ಟೀ ತೋಟಗಳು ಹುಟ್ಟಿಕೊಂಡವು ಎಂಬ ಆಲೋಚನೆಯನ್ನು ಈ ಕತೆಯು ಅಭಿವ್ಯಕ್ತಿಸುತ್ತದೆ.

ಸೇಡಿಯಾಪು ಕೃಷ್ಣಭಟ್ಟರು ತಮ್ಮ ಕಥಾಭೂಮಿಕೆಯಲ್ಲಿ ಪರಂಪರೆಯ ಮುಂದುವರಿದ ಚಿಂತನೆಯಂತೆ ಸ್ಥಳೀಯತೆಯನ್ನು ಕಟ್ಟುತ್ತಾರೆ. ಇವರ ಕತೆಗಳಲ್ಲಿ ಸ್ಥಳೀಯತೆಯು ಅಭಿವ್ಯಕ್ತವಾಗುವುದು ವಸಾಹತುಶಾಹಿಯು ರೂಪಿಸಿದ ಧೋರಣೆಯ ಪ್ರಭಾವ ಅಸ್ಮಿತೆಯನ್ನು ಕಳೆದುಕೊಂಡ ನಮ್ಮ ನೆಲದ ಸತ್ವಗಳನ್ನು ಮರುರೂಪಿಕೆಯಾಗಿಸುವ ನೆಲೆಯಲ್ಲಿ ಸ್ಥಳೀಯತೆ ಜೀವ ಪಡೆದಿದೆ.

ವಾಣಿ

ಕನ್ನಡದ ಮೊದಲ ತಲೆಮಾರಿನ ಕತೆಗಾರ್ತಿಯರಲ್ಲಿ ಸ್ತ್ರೀ ಸಂವೇದನೆಯನ್ನು ಸಾಮಾಜಿಕ ಅಭಿವ್ಯಕ್ತಿಯಾಗಿ ರೂಪಿಸಿದರು ವಾಣಿ. ಪುರುಷಕೇಂದ್ರಿತವಾಗಿದ್ದ ಕಥಾಪರಂಪರೆಗೆ ಮಹಿಳಾ ಅಸ್ಮಿತೆಯನ್ನು ನೀಡುವ ಕಾರ್ಯವನ್ನು ವಾಣಿಯು ತನ್ನ ಕತೆಗಳ ಮೂಲಕ ಮಾಡುತ್ತಾರೆ. ಇವರ ಕತೆಗಳು ಸಾಮಾಜಿಕ ವಿಚಾರಗಳನ್ನೇ ಪ್ರಧಾನವಾಗಿ ಗ್ರಹಿಸಿದರೂ ಮಾನವ ಸಂಬಂಧ ಪ್ರೀತಿ ದುಡಿಮೆ ಹಸಿವಿನ ನೆಲೆ ವ್ಯಕ್ತಿ ಸ್ವಾತಂತ್ರ್ಯ ಹಾಗೂ ಸ್ತ್ರೀ ಸಂವೇದನೆಯಂತಹ ವಿಚಾರಗಳು ಕತೆಯ ಆಶಯವಾಗಿ ರೂಪುಗೊಂಡಿದೆ. ವಾಣಿಯವರ ಕತೆಗಳು ಸ್ಥಳೀಯತೆಯನ್ನು ಭಾರತೀಯ ಪರಂಪರೆಯ ಭಾಗವಾಗಿ ಅನುಸಂಧಾನ ಮಾಡುತ್ತವೆ.

'ಮನೆಗೆ ಬಂದಾಗ' ಎಂಬ ಕತೆಯು ಗಂಡ ಹೆಂಡತಿಯನ್ನು ಒಟ್ಟಿಗೆ ತರುವ ಹಾಗು ಅವರ ಇಬ್ಬರ ಕರ್ತವ್ಯವನ್ನು ಅವರಿಗೆ ಅರಿವುಗೊಳಿಸುವ ಮೂಲಕ ಇಬ್ಬರ ಸಂಬಂಧವನ್ನು ಪೂರಕವಾಗಿ ಬೆಸೆಯುವ ಸ್ಥಳೀಯತೆಯ ಪ್ರಜ್ಞೆಯನ್ನು ರೂಪಿಸುತ್ತದೆ. ಸೀತಮ್ಮನನ್ನು ನಂಜಪ್ಪ ಲಗ್ನವಾದ ಮೇಲೆ ನಂಜಪ್ಪ ಯಜಮಾನ ಎಂಬ ಹೆಸರಿಗೆ ಹೊಂದಿಕೊಂಡ. ಆದರೆ ಜವಾಬ್ದಾರಿಯನ್ನು ದೂರೀಕರಿಸಿ ಸೋಮಾರಿಯಾಗಿ ಕಾಲಕಳೆದು ಬಿಟ್ಟ. ಸೀತಮ್ಮಳೇ ಎಲ್ಲಾ ಕೆಲಸ ಕಾರ್ಯಗಳನ್ನು ಹೆಗಲಿಗೆ ಹಾಕಿಕೊಂಡು ಬದುಕನ್ನು ನಿರ್ವಹಿಸಿದಳು ಮತ್ತು ಈ ರೀತಿಯ ಬದುಕಿನ ವಿನ್ಯಾಸವು ಅವಳಿಗೆ ಅಭ್ಯಾಸವಾಯಿತು. ನಂಜಪ್ಪ ತಾನು ಸ್ವತಂತ್ರವಾಗಿ ದುಡಿದು ಹಣ ಮಾಡಬೇಕು ಎಂದು ಕೊಂಡು ಹೆಂಡತಿ ಕೂಡಿಟ್ಟ ಹಣವನ್ನು ತೆಗೆದುಕೊಂಡು ಮನೆಬಿಟ್ಟು ಪಟ್ಟಣ ಸೇರಿದ. ಅಲ್ಲಿ ಇಲ್ಲಿ ಅಂತ ಅಲೆದ. ಅವನಲ್ಲಿದ್ದ ಹಣ ಕರಗಿದ ಮೇಲೆ ಕೆಲಸಕ್ಕಾಗಿ ತಿರುಗಾಡಿ ಒಂದು ಮನೆಯಲ್ಲಿ ಸಂಬಳವಿಲ್ಲದೆ ಹೊಟ್ಟೆಯ ಪಾಡಿಗೆ ಕೆಲಸಕ್ಕೆ ಸೇರಿಕೊಂಡ. ನಂಜಪ್ಪನಿಗೆ ತನ್ನ ತಪ್ಪಿನ ಅರಿವು ಆಗತೊಡಗಿತು. ನಂಜಪ್ಪ ತನ್ನ ಮನೆಯಲ್ಲಿ ಯಾವ ಕೆಲಸವನ್ನು ಮಾಡದೆ ಯಜಮಾನಿ ಹೆಂಡತಿಯನ್ನು ನೋಯಿಸುತ್ತಿದ್ದು ಎಲ್ಲವನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದ ಸೀತಮ್ಮಳ ಕಷ್ಟಗಳು ಪಟ್ಟಣದಲ್ಲಿ ತನ್ನದೆಂದು ಎಲ್ಲ ಕೆಲಸ ಮಾಡುತ್ತಿದ್ದ ನಂಜಪ್ಪನಿಗೆ ಅರ್ಥವಾಗಿ ಪುನಃ ತನ್ನ ಮನೆಸೇರಿ ಹೊಸ ನಂಜಪ್ಪನಾಗಿ ಹೆಂಡತಿ ಮಕ್ಕಳೊಂದಿಗೆ ಕೂಡಿ ದುಡಿದು ಬದುಕುವವನಾದ.

ಕತೆಗಾರ್ತಿ ಕತೆಯಲ್ಲಿ ಸ್ತ್ರೀ ಸಂವೇದನೆಯನ್ನು ಪುರುಷ ಲೋಕಕ್ಕೆ ಅರ್ಥ ಮಾಡಿಸುವ ಜೊತೆಗೆ ಒಟ್ಟಿಗೆ ಬಾಳ್ವೆ ಮಾಡುವಂತಹ ತಾತ್ವಿಕತೆಯನ್ನು ರೂಪಿಸುತ್ತಾರೆ. ಸೀತಮ್ಮ ಗಂಡ

ಸೋಮಾರಿಯಾದರು ತಾನೇ ಎಲ್ಲ ಕಾರ್ಯಗಳನ್ನು ಮಾಡುವ ಮೂಲಕ ಬದುಕನ್ನು ಕಟ್ಟುತ್ತಾಳೆ, ನಂಜಪ್ಪನಿಗೆ ಪಟ್ಟಣ ಸೇರಿ ದುಡಿಯುವಾಗ ತನ್ನ ಹೆಂಡತಿಯ ಶ್ರಮದ ಪ್ರಜ್ಞೆಯ ಅರಿವಾಗಿ ತಾನು ತಪ್ಪು ಮಾಡಿದೆ ಎಂದು ತಿಳಿದು ಪುನಃ ಮನೆಗೆ ಬಂದು ಹೊಸ ಬದುಕನ್ನು ಸೀತಮ್ಮಳೊಂದಿಗೆ ಆರಂಭಿಸುತ್ತಾನೆ. ಈ ರೀತಿಯ ಬದುಕಿನ ಬೆಸೆಯುವ ನಿಲುವನ್ನು ಸ್ಥಳೀಯತೆ ಎಂದು ಕರೆಯಬಹುದು.

ವಾಣಿಯವರ ಹೆಚ್ಚಿನ ಕತೆಗಳು ಹೆಣ್ಣಿನ ಕರ್ತವ್ಯವನ್ನು ಶ್ರಮವನ್ನು ಗುರುತಿಸುವ ಮೂಲಕ ಹೆಣ್ಣಿನ ಸಂವೇದನೆಗೆ ಮಾನ್ಯತೆಯನ್ನು ಒದಗಿಸುವ ನೆಲೆಯನ್ನು ಕತೆಯ ಭೂಮಿಕೆಯಾಗಿಸುತ್ತಾರೆ. ಕತೆಗಳಲ್ಲಿ ಮುಖ್ಯವಾಗಿ ಗಂಡು–ಹೆಣ್ಣುಗಳು ಸಮುದಾಯದ ಒತ್ತಡಕ್ಕೆ ಲಗ್ನವಾಗುವ ಆ ನಂತರದಲ್ಲಿ ಗಂಡು ತನ್ನ ಹೆಂಡತಿಯನ್ನು ನಿರಾಕರಿಸಿ ಬದುಕುವುದು. ಹೆಂಡತಿಯಿದ್ದರೂ ಅವಳನ್ನು ಅವಳ ಬಯಕೆಯನ್ನು ದೂರಮಾಡಿ ಇನ್ನೊಂದು ಹೆಣ್ಣಿನ ನೆನಪಿನಲ್ಲಿ ಕಾಲದೂಡುವುದು. ಲಗ್ನವಾಗಿ ಕೆಲವು ವರ್ಷಗಳಲ್ಲಿಯೇ ಹೆಂಡತಿಯನ್ನು ಬಿಟ್ಟು ಬೇರೆ ಊರು ಪಟ್ಟಣಗಳಿಗೆ ಉದ್ಯೋಗಕ್ಕೆ ಹೋಗಿ ಅಲ್ಲಿಯೇ ಬೇರೆ ಹೆಣ್ಣಿನ ಮೋಹಕ್ಕೆ ಒಳಗಾಗಿ ಲಗ್ನವಾಗಿ ಬದುಕು ಕಟ್ಟಿಕೊಳ್ಳುವುದು ತನ್ನ ತಪ್ಪಿನ ಅರಿವಾಗಿ ಮೂಲಮನೆ ಧರ್ಮಪತ್ನಿಯಲ್ಲಿಗೆ ಬಂದು ಹೆಂಡತಿಯಲ್ಲಿ ಕ್ಷಮೆಯಾಚಿಸಿ ಅವಳೊಂದಿಗೆ ಸೇರಿಕೊಂಡು ಬದುಕು ಆರಂಭಿಸುವುದು ಇವೆಲ್ಲ ಪುರುಷ ಪಾತ್ರಗಳ ಅಭಿವ್ಯಕ್ತಿಯಾಗಿದೆ. 'ತುಂಗಭದ್ರ' ಕತೆಯಲ್ಲಿನ ಸಾಹೇಬರು ಮನೆಗೆ ಬಂದಾಗ ಕತೆಯ ನಂಜಪ್ಪ, ಮುಕುಂದನ ಉಡುಗೊರೆ ಕತೆಯ ಮುಕುಂದ ಪಾತ್ರಗಳು

ವಾಣಿಯವರು ಸ್ತ್ರೀ ಪಾತ್ರವನ್ನು ರೂಪಿಸುವಾಗ ಪುರುಷನಿಗೆ ಪ್ರತಿಯಾದ ಅಂದರೆ ವಿರೋಧವನ್ನು ಒಡ್ಡುವ ಮೂಲಕ ತನ್ನ ಲೋಕವನ್ನು ಕಟ್ಟಿಕೊಳ್ಳುವ ಪಾತ್ರವನ್ನು ನಿರೂಪಿಸುವುದಿಲ್ಲ. ಇವರ ಕತೆಗಳಲ್ಲಿ ಸ್ತ್ರೀ ಅಭಿವ್ಯಕ್ತಿಯು ಪುರುಷ ಲೋಕವನ್ನು ಕಣ್ಣು ತೆರೆಸುವ ಜೊತೆಗೆ ಅವನೊಂದಿಗೆ ಸೇರಿಕೊಳ್ಳುವ ತಾತ್ವಿಕತೆಯನ್ನು ಹೊಂದಿವೆ. ಗಂಡನು ಹೆಂಡತಿಯ ಆಸೆ–ಆಕಾಂಕ್ಷೆಗಳನ್ನು ದೂರಮಾಡಿ ಮೌನವಾಗಿ ಇನ್ನೊಬ್ಬಳ ನೆನಪಿನಲ್ಲಿ ಕಾಲ ಕಳೆಯುವಾಗ ಗಂಡನನ್ನು ತನ್ನ ಕಡೆ ಸೆಳೆಯಲು ಬಹು ಪ್ರಯತ್ನ ಪಡುವ ತನ್ನ ಆಸೆ ಆಕಾಂಕ್ಷೆಗಳನ್ನು ನೋವುಗಳನ್ನು ಮನದೊಳಗೆ ನುಂಗಿಕೊಂಡು ನಗುಮುಖದಿಂದ ಇರುವ ಗಂಡನು ತನ್ನ ಬಿಟ್ಟು ಪಟ್ಟಣಗಳಿಗೆ ಹೋಗಿ ತನ್ನ ಅಸ್ಮಿತೆಯನ್ನು ಮರೆತಾಗ ಗಂಡನ ನೆನಪಿನಲ್ಲಿಯೇ ಪತಿವ್ರತೆಯಾಗಿ ದುಡಿದು ನೋವು ನಲಿವನ್ನು ಮನಸ್ಸಿನಲ್ಲಿಯೇ ಇಂಗಿಸಿಕೊಂಡು ಬದುಕುವ ಹೆಣ್ಣುಗಳು ಕೊನೆಗೆ ಕ್ಷಮಿಸಿ ತನ್ನದು ತಪ್ಪಾಯಿತು ಎಂದು

ಬಂದ ಗಂಡನನ್ನು ಸೇರಿಸಿಕೊಂಡು ಬದುಕು ಕಟ್ಟಿಕೊಳ್ಳುವ ಅಭಿವ್ಯಕ್ತಿಯ ನೆಲೆಗಳು ವಾಣಿಯ ಕತೆಗಳು ಮಂಡಿಸುತ್ತವೆ.ವಾಣಿಯವರು ಸ್ಥಳೀಯತೆಯ ಪ್ರಜ್ಞೆಯನ್ನು ಸ್ತ್ರೀಲೋಕ ದೃಷ್ಟಿಯಲ್ಲಿ ಕಾಪಿಟ್ಟುಕೊಳ್ಳುತ್ತಾರೆ. ಅಲ್ಲದೆ ಗಂಡು ಹೆಣ್ಣನ್ನು ಬೆಸೆಯುವ ನಿಲುವಿಗೆ ತನ್ನ ಕತೆಗಳನ್ನು ದುಡಿಸಿಕೊಳ್ಳುತ್ತಾರೆ. ವ್ಯಕ್ತಿಯ ಬದುಕಿನ ಮೂಲ ಸತ್ವವೇ ಅವನ ನೆಮ್ಮದಿಗೆ ಆಧಾರವಾಗಿ ಎಂಬುವುದನ್ನು ಶೋಧಿಸುವ ನೆಲೆಯಲ್ಲಿ ಸ್ಥಳೀಯತೆಯ ಪ್ರಜ್ಞೆಯು ರೂಪ ಪಡೆದಿದೆ.

**ದೇವುಡು**

ಭೂತವನ್ನು ವರ್ತಮಾನದೊಂದಿಗೆ ಬೆಸೆಯಬಲ್ಲ ಹಾಗೂ ಭಾರತೀಯ ಪರಂಪರೆಯ ಚಿಂತನಧಾರೆಯನ್ನು ಮೈಗೂಡಿಸಿಕೊಂಡು ಮೊದಲ ತಲೆಮಾರಿನ ಕತೆಗಳಿಗೆ ಹೊಸ ಮನೋರ್ಥ ನೀಡಿದ ಕತೆಗಾರ ದೇವುಡು ವೈದಿಕ ಪರಂಪರೆಯನ್ನು ಅಪ್ಪಿಕೊಂಡಿದ್ದು ತನ್ನ ಕತೆಗಳಲ್ಲಿ ವೈದಿಕ ಪರಂಪರೆಯಲ್ಲಿ ಜೀವನ ದೃಷ್ಟಿಯಲ್ಲಿ ಶೋಧಿಸುತ್ತಾರೆ. ಇವರ ಕತೆಗಳಲ್ಲಿ ಗತಿಸಿಹೋದ ಸಮಾಜವೊಂದರ ಮೌಲ್ಯಗಳನ್ನು ಕಟ್ಟುವ ನೆಲೆಯಲ್ಲಿ ಸ್ಥಳೀತೆಯ ಸ್ವರೂಪಗಳು ಗೋಚರವಾಗುತ್ತವೆ.

ಅಂದಿನ ಕತೆಯು ಕೃಷಿ ಬದುಕಿನ ಪರಂಪರೆಯನ್ನು ಅನುಸಂಧಾನ ಮಾಡುತ್ತದೆ. ಅಲ್ಲದೆ ಎರಡು ತಲೆಮಾರುಗಳಲ್ಲಿ ಪಲ್ಲಟವಾದ ಕೃಷಿಸಂಬಂಧಿತ ಮೌಲ್ಯಗಳನ್ನು ಶೋಧಿಸುವ ಕಾರ್ಯವನ್ನು ಮಾಡುತ್ತದೆ. ನಾರಾಯಣಿಯ ಧನಿಯು ಕೃಷಿಕನಾಗಿದ್ದುಕೊಂಡು, ಕೃಷಿ ಬದುಕಿನ ಮೀಮಾಂಸೆಯನ್ನು ಹೊಂದಿದ್ದನಲ್ಲದೆ ಪ್ರಕೃತಿ ಕೊಟ್ಟಿದ್ದನ್ನು ಪ್ರಕೃತಿಗೂ ನೀಡಬೇಕೆಂಬ ನಿಲುವಿನಲ್ಲಿ ದಾನ ಧರ್ಮದ ಮೂಲಕ ಸತ್ವಪೂರ್ಣ ಬದುಕನ್ನು ಕಟ್ಟಿಕೊಂಡಿದ್ದ. ನೀಡುವವರಿಗೆ ದೇವರು ಕೊಡುತ್ತಾನೆ ಎಂಬ ನಂಬಿಕೆ ಅವನದು ಆದರೆ ಅವನ ಮಕ್ಕಳಿಗೆ ದಾನ ಧರ್ಮದಲ್ಲಿ ಆಸಕ್ತಿಯಿಲ್ಲ, ತಂದೆಯ ಬದುಕಿನ ವಿನ್ಯಾಸವನ್ನು ವಿರೋಧಿಸಿದರು. ತಂದೆ ಮಕ್ಕಳ ಮನಸ್ಸನ್ನು ಅರಿತವನೇ ತನ್ನ ಆಸ್ತಿ ವ್ಯವಹಾರ ಎಲ್ಲವನ್ನು ಮಕ್ಕಳಿಬ್ಬರಿಗೆ ಕೊಟ್ಟು ಕಾಶಿಯಾತ್ರೆ ಕೈಗೊಂಡ ಮಕ್ಕಳಿಬ್ಬರು ಕೆಲವು ವರ್ಷದಲ್ಲಿ ಎಲ್ಲವನ್ನು ಕಳೆದುಕೊಂಡು ನಿರ್ಗತಿಕರಾದರೂ ಕತೆಯಲ್ಲಿ ಅಭಿವ್ಯಕ್ತಗೊಂಡ ದಾನ ಧರ್ಮದಂತಹ ಬದುಕಿನ ವಿನ್ಯಾಸವನ್ನು ಸ್ಥಳೀಯತೆ ಎಂದು ಕರೆಯಬಹುದು.

'ಮೂರು ಕನಸು ಕತೆಯಲ್ಲಿ ದೇವುಡು ಅವರು ಭಾರತೀಯ ವೈದಿಕ ನಂಬಿಕೆಗಳಾದ ಪಾಪ ಪುಣ್ಯ ಕರ್ಮ ಅಂತ್ಯ ಸಂಸ್ಕಾರದಂತಹ ಕಾರ್ಯದ ನಿಲುವುಗಳನ್ನು

ವರ್ತಮಾನದೊಂದಿಗೆ ಅನುಸಂಧಾನ ಮಾಡುವ ಮೂಲಕ ಬದುಕಿನ ಮೌಲ್ಯಗಳನ್ನು ಮರುಕಟ್ಟುವ ನಿಲುವಿನಲ್ಲಿ ಸ್ಥಳೀಯತೆಯನ್ನು ಮಂಡಿಸುತ್ತಾರೆ. ಕಿಟ್ಟಮ್ಮ ಅಕ್ಕಿ ಹಿಟ್ಟು ರುಬ್ಬಿ ಬದುಕು ಮಾಡುತ್ತಿದ್ದರು. ಅವಳಲ್ಲಿ ಒಂದು ಕೊರಗು ಇದೆ. ತಾನು ಸತ್ತರೆ ಶವವನ್ನು ಸಂಸ್ಕಾರ ಮಾಡಿ ಅದರ ಕ್ರಿಯಾ ವಿಧಿಗಳನ್ನು ಮಾಡುವ ಮೂಲಕ ಮುಕ್ತಿ ನೀಡುವವರು ಯಾರು ಎಂಬ ಚಿಂತನೆಯಲ್ಲಿ ಮೌನವಾಗುತ್ತಾಳೆ. ತನ್ನ ಅಕ್ಕನ ಮಗನಾದ ಸುಬ್ಬ ತನ್ನ ಶವವನ್ನು ಸಂಸ್ಕಾರ ಮಾಡಿ ನನಗೆ ಮುಕ್ತಿ ಕಾಣಿಸುತ್ತಾನೆ ಎಂಬ ನಂಬಿಕೆಯಿಂದ ಅವನನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾಳೆ. ತಾನು ದುಡಿದ ಹಣವನ್ನು ಸಂಗ್ರಹಿಸಿ ಡಬ್ಬಿಯಲ್ಲಿ ಹಾಕಿ ಮಣ್ಣಿನಡಿ ಹೂತಿಟ್ಟು ಆ ಹಣ ಹೂತಿಟ್ಟ ಜಾಗವನ್ನು ಸುಬ್ಬನಿಗೆ ತೋರಿಸಿ ಈ ಹಣದಿಂದ ತನ್ನ ಸಂಸ್ಕಾರ ಮಾಡಬೇಕೆಂದು ಕೇಳುತ್ತಾಳೆ.

'ಕಿಟ್ಟಮ್ಮ' ತನ್ನ ಸಂಸ್ಕಾರಕ್ಕೆ ಹಣವನ್ನು ಸಂಗ್ರಹಿಸುವ, ಸುಬ್ಬನನ್ನು ಪ್ರೀತಿಯಿಂದ ಕಾಣುವ ಸಂಸ್ಕಾರ ಹಾಗೂ ಕ್ರಿಯಾ ವಿಧಾನದಿಂದ ತನಗೆ ಮುಕ್ತಿ ಸಿಗುತ್ತದೆ ಎಂದು ನಂಬುವ ನಿಲುವನ್ನು ಸ್ಥಳೀಯತೆ ಎಂದು ಗುರುತಿಸಬಹುದು. ದೇವುಡುರವರ ಹೆಚ್ಚಿನ ಕತೆಗಳಲ್ಲಿ ಭಾರತೀಯ ಪರಂಪರೆಯನ್ನು ಪ್ರತಿನಿಧಿಸುವ ರಾಜಶಾಹಿ ಪರಂಪರೆಯನ್ನು ಅನುಸಂಧಾನ ಮಾಡುವ ಕತೆಗಳಿವೆ. ಕತೆಗಳ ಆಶಯಗಳು ಭಾರತೀಯ ಜೀವನದ ಮೌಲ್ಯಗಳನ್ನು ವರ್ತಮಾನದಲ್ಲಿ ವಿಮರ್ಶಿಸುವ ಬಗೆಯೇ ಆಗಿದೆ. ಮುಖ್ಯವಾಗಿ ದೇವುಡು ಅವರ ಕತೆಗಳು ಪರಂಪರಾಗತವಾದ ಸ್ಥಳೀಯತೆಯನ್ನು ಹುಟ್ಟು ಹಾಕುತ್ತದೆ.

**ಎಚ್.ವಿ. ಸಾವಿತ್ರಮ್ಮ**

ಮೊದಲ ತಲೆಮಾರಿನ ಸಂದರ್ಭದಲ್ಲಿ ತನ್ನ ಕಾಲಮಾನದ ಸಮಸ್ಯೆಗಳಿಗೆ ಸ್ತ್ರೀ ಸಂವೇದನೆಯ ನೆಲೆಯಿಂದ ತೀವ್ರವಾಗಿ ಸ್ಪಂದಿಸಿದ ಕತೆಗಾರ್ತಿ ಎಚ್.ವಿ. ಸಾವಿತ್ರಮ್ಮ. ಇವರ ಕತೆಗಳ ಮೇಲೆ ವಸಾಹತುಶಾಹಿಯ ಧೋರಣೆಗಳ ಪ್ರಭಾವ ಹಾಗೂ ಗಾಂಧಿ, ಟಾಗೋರರ ಬರಹ ಹೋರಾಟದ ಪ್ರೇರಣೆಗಳಿವೆ. ಸ್ವಾತಂತ್ರ್ಯ ಹೋರಾಟ ಈ ಹೋರಾಟಕ್ಕೆ ಗಾಂಧೀಜಿಯ ನಡೆ, ಹಿಂದೂ ಮುಸ್ಲಿಂ ಸಂಘರ್ಷ ಹಾಗೂ ವಸಾಹತುಶಾಹಿಯ ಪ್ರಭಾವಕ್ಕೆ ಭಾರತದ ಸಮಾಜದಲ್ಲಿನ ತಲ್ಲಣಗಳಿಗೆ ಮಹಿಳಾ ಲೋಕದ ಪ್ರತಿಕ್ರಿಯೆಗಳನ್ನು ಇವರ ಕತೆಗಳು ಭೂಮಿಕೆಯಾಗಿ ಪಡೆದಿವೆ. ಎಚ್.ವಿ. ಸಾವಿತ್ರಮ್ಮ ತಮ್ಮ ಕತೆಗಳಲ್ಲಿ ಪುರುಷ ಲೋಕ ಗ್ರಹಿಕೆಯನ್ನು ದಾಟುವ ಹಾಗೂ ಮಹಿಳೆಯೊಬ್ಬಳು ಹೊರಜಗತ್ತಿನ ಆಗುಹೋಗುಗಳಿಗೆ ತನ್ನನ್ನು ಭಾಗಿಯನ್ನಾಗಿಸಿಕೊಂಡಾಗ ತನ್ನಲ್ಲಿ ಉಂಟಾಗುವ

ಬದಲಾವಣೆಯನ್ನು ಸ್ಥಳೀಯತೆಯ ನೆಲೆಯಲ್ಲಿ ಮಂಡಿತವಾಗುತ್ತದೆ.

'ಪಶ್ಚಾತ್ತಾಪ' ಎಂಬ ಕತೆಯು ಕೌಟುಂಬಿಕ ಬದುಕಿನ ತಲ್ಲಣಗಳನ್ನು ನಿರೂಪಿಸುವ ಜೊತೆಗೆ ಜೀವನ ಮೀಮಾಂಸೆಯನ್ನು ಹೇಳುತ್ತದೆ. ಗಂಡ-ಹೆಂಡತಿ ಬದುಕನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕೆಂಬ ಧರ್ಮವನ್ನು ಕತೆಯು ಧ್ವನಿಸುತ್ತದೆ. ಇದನ್ನೆ ನಾವು ಸ್ಥಳೀಯತೆ ಎಂದು ಕರೆಯಬಹುದು. ಸುಬ್ಬು ಶಾರದೆಯನ್ನು ಅಪ್ಪನ ಆಣತಿಯಂತೆ ಲಗ್ನವಾಗುತ್ತಾನೆ. ಶಾರದೆ ಸುಬ್ಬುವನ್ನು ಅವನ ಯೋಗಕ್ಷೇಮವನ್ನು, ಭೌತಿಕ ಸುಖವನ್ನು ಮನಸಿಗೆ ಹಾಕಿಕೊಳ್ಳದೆ, ತಾನು ಮಡಿ ಮೈಲಿಗೆ, ದೇವರು, ಧರ್ಮ, ಉಪವಾಸ ಎಂದೆಲ್ಲ ಕಾಲ ಕಳೆಯುತ್ತಾಳೆ. ಸುಬ್ಬುವಿಗೆ ತನ್ನ ಹೆಂಡತಿಯ ವರ್ತನೆಯು ಸರಿ ಕಾಣಲಿಲ್ಲ, ಜೊತೆಗೆ ಬೇಸತ್ತು ತನ್ನ ಗೆಳೆಯ ವಿಶ್ವನ ಮನೆಯಲ್ಲಿ ಪರಿಚಯವಾದ ಬಾಲ ವಿಧವೆ ಸರಸ್ವತಿಯನ್ನು ಇಷ್ಟಪಟ್ಟು ವಿವಾಹವಾಗಲು ನಿರ್ಧರಿಸುತ್ತಾನೆ, ಶಾರದೆ ಗಂಡನ ಈ ರೀತಿಯ ವರ್ತನೆಯಿಂದ ಮನನೊಂದು ತವರು ಮನೆಗೆ ಬಂದು ಧ್ಯಾನ, ಉಪವಾಸ, ಮಡಿ-ಮೈಲಿಗೆ ಆಚಾರಗಳನ್ನು ಮೈಗೂಡಿಸಿಕೊಂಡು ಜೀವನ ಸಾಗಿಸುತ್ತಾಳೆ. ಕೆಲವು ವರ್ಷಗಳ ನಂತರ ಸುಬ್ಬು ಶಾರದೆಯನ್ನು ಹಿಂದಿನ ಘಟನೆಗಳನ್ನು ಮರೆತು ನನ್ನವಳಾಗಿ ಮನೆಗೆ ಬಾ ಎಂದು ಕರೆಯುತ್ತಾನೆ. ಶಾರದೆ ಆ ಕ್ಷಣಕ್ಕೆ ಸರಸ್ವತಿ ಎಲ್ಲಿ ಎಂದು ಪ್ರಶ್ನೆಮಾಡುತ್ತಾಳೆ. ಸರಸ್ವತಿಯು ಮರಣ ಹೊಂದಿದ್ದಳೆಂದು, ಅವಳಿಗೆ ಚಿಕ್ಕ ಮಗು ಇದೆ ಎಂಬ ವಿಚಾರವನ್ನು ಸುಬ್ಬು ಹೇಳಿದ ಮೇಲೆ ಶಾರದೆಯು ನಾನು ತವರು ಮನೆಯನ್ನು ಬಿಟ್ಟು ಬರುವುದಿಲ್ಲವೆಂದು, ಬೇಕಾದರೆ ಮಗುವನ್ನು ಬೆಳೆಸಿಕೊಡುವುದಾಗಿ ಹೇಳುತ್ತಾಳೆ. ಕತೆಗಾರ್ತಿಯು ಗಂಡು ಹೆಣ್ಣುಗಳ ಮನೋಧರ್ಮವನ್ನು ಅನುಸಂಧಾನ ಮಾಡುವುದರ ಜೊತೆಯಲ್ಲಿ ಗಂಡ-ಹೆಂಡತಿಯು ಯಾವ ರೀತಿಯಲ್ಲಿ ಬದುಕನ್ನು ಅರ್ಥ ಮಾಡಿಕೊಳ್ಳಬೇಕು ಎಂಬುವುದನ್ನು ತಾತ್ವಿಕವಾಗಿ ಮಂಡಿಸುತ್ತಾರೆ. ಈ ಕತೆಯಲ್ಲಿ ವ್ಯಕ್ತವಾದ ಬದುಕನ್ನು ಅರ್ಥ ಮಾಡಿಕೊಂಡು ಸಾಗಬೇಕೆಂಬ ನಮ್ಮ ನೆಲದ ಸತ್ವವನ್ನೆ ಸ್ಥಳೀಯತೆ ಎಂದು ಗುರುತಿಸಬಹುದು.

'ನಿರಾಶ್ರಿತೆ' ಕತೆಯು ಸ್ವಾತಂತ್ರ್ಯ ಹೋರಾಟದ ಪರಿಸರವನ್ನು ದುಡಿಸಿಕೊಂಡರೂ ಕುಟುಂಬವನ್ನು ಬೆಸೆಯುವ ಆಶಯವನ್ನು ಹೊಂದಿದೆ. ಚಂದ್ರನು ತುಳಸಿಯನ್ನು ಲಗ್ನವಾದ ಮೇಲೆ ವೈದ್ಯಕೀಯ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ರಾವಲ್ಪಿಂಡಿಯಲ್ಲಿ ಸರ್ಕಾರಿ ಕೆಲಸವನ್ನು ಪಡೆದುಕೊಂಡು ಅತ್ತೆ-ಮಾವನ ಪ್ರತಿರೋಧದ ನಡುವೆ ಹೆಂಡತಿಯೊಂದಿಗೆ ರಾವಲ್ಪಿಂಡಿಗೆ ತೆರಳಿ ವೈದ್ಯ ವೃತ್ತಿಯನ್ನು ಆರಂಭಿಸಿದ. ಮೂರು-ನಾಲ್ಕು ವರ್ಷ ಕಳೆದ ಮೇಲೆ ಹಿಂದೂ-

ಮುಸ್ಲಿಂ ಸಂಘರ್ಷದಿಂದ ಚಂದ್ರನ ಮನೆ ಬೆಂಕಿಗೆ ಬಲಿಯಾಯಿತು. ತನ್ನ ಮಗು ಸುಟ್ಟು ಜೀವ ಬಿಟ್ಟಿತು, ತುಳಸಿ ನಿರಾಶ್ರಿತೆಯಾಗಿ ಕಾಣೆಯಾದಳು. ಚಂದ್ರ ಊರಿಗೆ ಬಂದು ನೋವಿನಿಂದ ಹೆಂಡತಿ–ಮಗುವಿನ ನೆನಪಿನಲ್ಲಿ ನಿರಾಶ್ರಿತರ ಆರೋಗ್ಯವನ್ನು ಕಾಪಾಡಲು ದುಡಿಮೆಯನ್ನು ಆರಂಭಿಸಿದ. ಗಾಂಧೀಜಿಯ ಉಪದೇಶಕ್ಕೆ ಒಳಗಾಗಿ ತುಳಸಿ ಬರುವಳೆಂಬ ಆಸೆಯನ್ನು ಉಳಿಸಿಕೊಂಡ. ತುಳಸಿ ಒಂದು ಸಂಜೆ ಗಂಡನನ್ನು ಸಂಧಿಸಿ ತಾನು ತನ್ನ ಮಗು ಮನೆಗೆ ಬರಬಹುದೇ ಎಂದು ಕೇಳಿದಳು. ಚಂದ್ರ ತಂದೆಯನ್ನು ಕೇಳಿ ನಾಳೆ ತಿಳಿಸುವುದಾಗಿ ಹೇಳಿ ತಂದೆಗೆ ಪತ್ರದ ಮೂಲಕ ತುಳಸಿಯ ವಿಚಾರ ತಿಳಿಸುತ್ತಾನೆ. ಶ್ರೀನಿವಾಸರಾಯರು ತುಳಸಿ ಹಾಗೂ ತುಳಸಿಯ ಮಗುವನ್ನು ಮನೆಗೆ ಕರೆದುಕೊಂಡು ಹೋಗುತ್ತಾರೆ. ಕತೆಯಲ್ಲಿ ತುಳಸಿ ಅನ್ಯರ ಆಕ್ರಮಣಕ್ಕೆ ಒಳಗಾಗಿ ಮಗವನ್ನು ಪಡೆದಿದ್ದರು ಸಹಾ ಗಾಂಧೀಜಿಯ ಚಿಂತನೆಯ ಪ್ರಭಾವದಿಂದ ತುಳಸಿಯ ಕುಟುಂಬ ತುಳಸಿಯನ್ನು ತನ್ನವಳಾಗಿ ಸೇರಿಸಿಕೊಳ್ಳುತ್ತದೆ. ಈ ರೀತಿಯ ಬೆಸೆಯುವ ಅಭಿವ್ಯಕ್ತಿಯ ಕ್ರಮವನ್ನು ಸ್ಥಳೀಯತೆ ಎಂದು ಕರೆಯಬಹುದು.

ಎಚ್.ವಿ. ಸಾವಿತ್ರಮ್ಮ ಅವರ ಕತೆಗಳು ವಸಾಹತುಶಾಹಿ ಧೋರಣೆಯನ್ನು ನಮ್ಮ ಭಾರತೀಯ ಪರಂಪರೆಯೊಂದಿಗೆ ಮುಖಾಮುಖಿಯಾಗಿಸುವ ಜೊತೆಗೆ ಸ್ತ್ರೀ ಸಂವೇದನೆಯ ನೆಲೆಯಿಂದ ನಮ್ಮ ತನವನ್ನು ಅಭಿವ್ಯಕ್ತಿಸುವ ಗುಣವನ್ನು ಹೊಂದಿವೆ. ಇದನ್ನೆ ಸ್ಥಳೀಯತೆ ಎಂದು ಕರೆಯಬಹುದು.

**ಜಯಲಕ್ಷ್ಮಿ ಆರ್. ಶ್ರೀನಿವಾಸನ್**

ಭಾರತೀಯ ಜೀವನ ಮೌಲ್ಯವನ್ನು ಕಾಪಿಟ್ಟು ಕೊಂಡು ಬರುವ ಜೊತೆಗೆ ಪರಂಪರೆಯನ್ನು ತನ್ನ ಕತೆಗಳ ಸತ್ವವಾಗಿ ರೂಪಿಸಿದ ಕತೆಗಾರ್ತಿ ಜಯಲಕ್ಷ್ಮೀ ಆರ್. ಶ್ರೀನಿವಾಸನ್, ವಸಾಹತುಶಾಹಿಯ ರೂಪಿಸಿದ ಕತೆಗಾರ್ತಿಯಾಗಿ, ವಸಾಹತುಶಾಹಿಯು ರೂಪಿಸದ ಧೋರಣೆಯ ನಿಲುವನ್ನು ಭಾರತೀಯ ಪರಂಪರೆಯ ಚಿಂತನೆಯ ಮೂಲಕ ದಾಟುವ ಅಭಿವ್ಯಕ್ತಿಯನ್ನು ಇವರ ಕತೆಗಳಲ್ಲಿ ಗುರುತಿಸಬಹುದು. ಸ್ಥಳೀಯತೆಯ ಪ್ರಜ್ಞೆಯು ವಸಾಹತುಶಾಹಿಯ ಪ್ರತಿಯಾಗಿ ಇವರ ಕತೆಯಲ್ಲಿ ನಿರೂಪಿತಗೊಳ್ಳುವುದನ್ನು ಕಾಣಬಹುದು.

'ಹಸಿರು ಲಂಗ' ಕತೆಯು ದಾನ ಧರ್ಮದಂತಹ ಹಿನ್ನೆಲೆಯನ್ನು ಹೊಂದಿದೆ ಅಲ್ಲದೆ 'ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ' ಎಂಬ ಸ್ಥಳೀಯತೆಯ ನಿಲುವನ್ನು ಕತೆಗಾರ್ತಿ ಕತೆಯಲ್ಲಿ ಮಂಡಿಸುತ್ತಾರೆ. ಕತೆಯಲ್ಲಿ ಪದ್ಮ ತನ್ನ ಮನೆಗೆಲಸದ ಕೆಂಪಿಗೆ

ಸಾಲ ನೀಡಿದ್ದಳು, ಸಾಲ ತೀರಿಸಲು ಬಂದ ಕೆಂಪಿ, ನನ್ನ ಮಗಳಾದ ಬಸವಿಗೆ ನಿಮ್ಮ ಮಗಳು ಧರಿಸುವ ಹಸಿರು ಲಂಗದಾಗಿನ ಒಂದು ಲಂಗ ಕೊಡಿಸಿ, ಮಗಳು ಆಸೆ ಪಟ್ಟಿದ್ದಾಳೆ. ಲಂಗದ ಹಣವನ್ನು ಮುಂದಿನ ತಿಂಗಳು ನೀಡುತ್ತೇನೆ ಎಂದು ಪದ್ಮಳನ್ನು ಬೇಡುತ್ತಾಳೆ. ಕೆಂಪಿಯ ಮಾತನ್ನು ಒಪ್ಪಿಕೊಳ್ಳದೆ, ಕೆಂಪಿ ಕೊಡಬೇಕಿದ್ದ ಸಾಲದ ಹಣವನ್ನು ಪಡೆದ ಪದ್ಮ, ಕೆಂಪಿಯನ್ನು ಕಳಿಸುತ್ತಾಳೆ. ನಂತರ ಪದ್ಮ ಪತ್ರಿಕೆ ಓದುವಾಗ ಅವಳ ಕಣ್ಣಿಗೆ ಒಂದು ಸಣ್ಣ ಕತೆ ಕಾಣಿಸುತ್ತದೆ. "ಶ್ರೀಮಂತನೊಬ್ಬ ಭಿಕ್ಷುಕಿ ಹುಡುಗಿಗೆ ತುದಿಗಾಲಿನಲ್ಲಿ ಒದ್ದು ಬೀಳಿಸುತ್ತಾನೆ. ಆ ನಂತರ ಆ ಹುಡುಗಿ ಮರಣ ಹೊಂದುತ್ತಾಳೆ. ಈ ಘಟನೆಯಾದ ಕೆಲವು ದಿನಗಳಲ್ಲಿ ಶ್ರೀಮಂತನ ಮಗಳ ಹೊಟ್ಟೆಯಲ್ಲಿ ಹುಣ್ಣಾಗಿ ಮರಣ ಹೊಂದುತ್ತಾಳೆ".

ಈ ಕತೆಯು ಪದ್ಮಳ ಮನಸ್ಸು ಮುಟ್ಟಿತು. ಪದ್ಮಳಿಗೆ ಕೆಂಪಿಯನ್ನು ಬೈದು ಕಳುಹಿಸಿದ್ದು, ಕೆಂಪಿಯು ಹಸಿರು ಲಂಗವನ್ನು ಬೇಡಿದ್ದು ಎಲ್ಲಾ ನೆನಪಾಯಿತು ಹಾಗೂ ಹಸಿರು ಲಂಗವನ್ನು ತೊಡುವ ತನ್ನ ಮಗಳು ಮರಣ ಹೊಂದುವ ವಿಷಯವನ್ನು ಕಲ್ಪಿಸಿಕೊಂಡು ಮಗಳನ್ನು ಕೂಗುತ್ತ ಅಂಗಳಕ್ಕೆ ಬರುವಾಗ, ಬಸವಿಗೆ ಲಂಗಕೊಟ್ಟು ಬಂದ ವಿಷಯವನ್ನು ಮಗಳು ಪದ್ಮಳಿಗೆ ತಿಳಿಸುತ್ತಾಳೆ, ಮಗಳ ಮುಗ್ಧ ಮನಸನ್ನು, ಸಹಾಯದ ಗುಣಗಳನ್ನು ಅರಿತ ಪದ್ಮ ಮಗಳನ್ನು ಮುದ್ದಿಸಿ, ಕೆಂಪಿಯನ್ನು ಕರೆಸಿ ಹಸಿರು ಲಂಗವನ್ನೂ ಐದು ರೂಪಾಯಿಯನ್ನು ನೀಡಿ ಬಸವಿ ಈ ಲಂಗ ತೊಟ್ಟು ಕೊಳ್ಳಲಿ ಎನ್ನುತ್ತಾಳೆ. ಕತೆಗಾರ್ತಿಯು ಭಾರತೀಯ ಜೀವನ ಮೌಲ್ಯವನ್ನು ರೂಪಿಸುವ ನೆಲೆಯಲ್ಲಿ ಪದ್ಮಳ ಮನಸನ್ನು ಬದಲಾಯಿಸಲು ಒಂದು ಕತೆಯನ್ನು ರೂಪಿಸುವುದು, ಆ ಕತೆಯಲ್ಲಿ ಅಭಿವ್ಯಕ್ತವಾದ ಪಾಪ–ಪುಣ್ಯಗಳಂತಹ ವಿಚಾರವು ಪದ್ಮಳ ಮೇಲೆ ಪ್ರಭಾವ ಬೀರುವ ಮೂಲಕ ಕೆಂಪಿಗೆ ಲಂಗವನ್ನು, ಹಣವನ್ನು ದಾನವಾಗಿ ನೀಡುವ ಬಗೆಯನ್ನು ಸ್ಥಳೀಯತೆ ಎಂದು ಕರೆಯಬಹುದು.

ವೈಚಾರಿಕತೆಯ ನಿಲುವಿನಲ್ಲಿ ಸಮಾಜದ ವಾಸ್ತವ ಸ್ಥಿತಿಯನ್ನು ಕಾಪಿಟ್ಟುಕೊಳ್ಳುವ 'ಮಗುವಿನ ಸಮಸ್ಯೆ' ಕತೆಯು ಸಂಪ್ರದಾಯದ ಭೂಮಿಕೆಯಲ್ಲಿ ಕೆಲವು ವೈಚಾರಿಕ ಪ್ರಧಾನವಾದ ನಿಲುವುಗಳನ್ನು ಮಂಡಿಸುತ್ತದೆ. ದೇವರಾಯ ತನ್ನ ಹೆಂಡತಿಯನ್ನು ಮತ್ತು ಮಗಳ ಗಂಡನನ್ನು ಕಳೆದುಕೊಂಡ ಮೇಲೆ ವಿಧವೆ ಮಗಳನ್ನು ಹಾಗೂ ಚಿಕ್ಕ ಮಗ ಪ್ರಕಾಶನನ್ನು ಪ್ರೀತಿಯಿಂದ ಕಾಣುವುದನ್ನು ಬಿಟ್ಟು, ಅತ್ಯಂತ ಕ್ರೂರವಾಗಿ ನೋಡಿಕೊಳ್ಳಲಾರಂಭಿಸುತ್ತಾನೆ. ಪ್ರಕಾಶ ತನ್ನ ವಿಧವೆ ಭಾರ್ಗವಿ ಅಕ್ಕನೊಂದಿಗೆ ಅಳುತ್ತಾ, ನೋವಿನಿಂದ ಕಾಲಕಳೆಯುತ್ತಾನೆ. ಅದೇ ಸಂದರ್ಭದಲ್ಲಿ ದೀಪಾವಳಿ ಹಬ್ಬವು

ಎದುರುಗೊಳ್ಳುತ್ತದೆ. ಪ್ರಕಾಶ ತನ್ನ ಗೆಳೆಯರ ಮನೆಯಲ್ಲಿನ ಹಬ್ಬದ ಉತ್ಸಾಹ, ತಿಂಡಿ, ಬಟ್ಟೆಗಳನ್ನು ಕಂಡು ತನಗೂ ಹೋಳಿಗೆ, ಚಿರೋಟಿ, ಹಪ್ಪಳ, ಲಡ್ಡು, ಪಟಾಕಿ ಬೇಕೆಂದು ಭಾರ್ಗವಿಯಲ್ಲಿ ಹಠ ಹಿಡಿಯುತ್ತಾನೆ. ಭಾರ್ಗವಿ ಪ್ರಕಾಶನನ್ನು ಸಮಾಧಾನಿಸಿ 'ಈ ವರ್ಷ ಅಮ್ಮ ದೇವರಲ್ಲಿಗೆ ಹೋಗಿದ್ದರಿಂದ ಹಬ್ಬ ಪಟಾಕಿಗಳಿಲ್ಲ, ಮುಂದಿನ ವರ್ಷ ಎಲ್ಲವನ್ನು ಕೊಡಿಸುತ್ತೆಂದು' ರಮಿಸಿ, ಹೋಳಿಗೆ ಮಾಡಿಕೊಡುವುದಾಗಿ ಅಳುತ್ತಿದ್ದ ಪ್ರಕಾಶನನ್ನು ಸಮಾಧಾನಿಸಿ ಅಡುಗೆ ಮನೆಗೆ ಕರೆದುಕೊಂಡು ಹೋಗುತ್ತಾಳೆ. ಅದೇ ಸಂರ್ಭಕ್ಕೆ ಮನೆಗೆ ಬಂದ ದೇವರಾಯ ಮಕ್ಕಳು ಮಾಡಿದ ಹೋಳಿಗೆ ಅಡುಗೆಯನ್ನು ಕೆಲಸದವರ ಕೈಯಿಂದ ಕಸದ ಬುಟ್ಟಿಗೆ ಎಸೆಯಲು ಹೇಳಿ ಮಕ್ಕಳಿಗೆ ಬೈಯುತ್ತಾನೆ. ಈ ರೀತಿ ದೇವರಾಯ ವರ್ತಿಸಲು ಕಾರಣ ತನ್ನಹೆಂಡತಿ ಸತ್ತು ವರ್ಷವಾಗಿಲ್ಲವೆಂದು. ಕೆಲವು ತಿಂಗಳಿನಲ್ಲಿ ದೇವರಾಯನ ಮನೆಯಲ್ಲಿ ಹಬ್ಬದ ಸಂಭ್ರಮ ರೂಪುಗೊಳ್ಳುತ್ತದೆ. ಪ್ರಕಾಶ ಈ ಸನ್ನಿವೇಶವನ್ನು ಗಮನಿಸಿ 'ಏನು ನಮ್ಮ ಅಕ್ಕನಿಗೆ ಮದುವೆಯೇ' ಎಂದು ಚಿಕ್ಕಮ್ಮನಲ್ಲಿ ಕೇಳುತ್ತಾನೆ. "ನಿಮ್ಮ ಅಕ್ಕನಿಗೆಲ್ಲಿಯ ಮದುವೆ ಅವಳ ಗಂಡ ದೇವರಲ್ಲಿಗೆ ಹೋಗಿದ್ದಾನಲ್ಲ, ನಿಮ್ಮಪ್ಪನಿಗೆ ಮದುವೆ" ಎನ್ನುತ್ತಾಳೆ. ತಕ್ಷಣ ಪ್ರಕಾಶ 'ಅಮ್ಮ ದೇವರಲ್ಲಿಗೆ ಹೋಗಿದ್ದಳಲ್ಲ ಮತ್ತೆ ಅಪ್ಪನಿಗೆ ಹೇಗೆ ಮದುವೆ' ಎಂದು ಪ್ರಶ್ನಿಸುತ್ತಾನೆ.

ಕತೆಗಾರ್ತಿಯು ಸಂಪ್ರದಾಯ ಬದ್ಧವಾದ ಸಾಮಾಜಿಕ ವ್ಯವಸ್ಥೆಯಲ್ಲಿ ವೈಚಾರಿಕ ನಿಲುವುಗಳನ್ನು ಅಭಿವ್ಯಕ್ತಿಸುತ್ತಾರೆ. ಭಾರತೀಯ ಪರಂಪರೆಯ ನೆಲೆಯಲ್ಲಿ ಮನೆಯಲ್ಲಿ ಸಾವು ಸಂಭವಿಸಿದರೆ ವರ್ಷದ ವರೆಗೆ ಹಬ್ಬ ಹರಿದಿನದಂತಹ ವಿಶೇಷ ಕಾರ್ಯವನ್ನು ಮಾಡಬಾರದೆಂಬ ಆಚಾರ, ವೈದಿಕ ಸಮಾಜದಲ್ಲಿನ ವಿಧವೆ ಹೆಣ್ಣು ಇನ್ನೊಂದು ವಿವಾಹವಾಗಬಾರದೆಂಬ ನಿಯಮ, ಆದರೆ ಪುರುಷನಿಗೆ ಮರುಮದುವೆಯಾಗಲು ಒಪ್ಪುವ ಸಮಾಜದ ಸಂಪ್ರದಾಯವನ್ನು ಕತೆಯು ಭಾರ್ಗವಿ ಹಾಗೂ ದೇವರಾಯನ ಮೂಲಕ ನಿರೂಪಿಸುತ್ತದೆ. ಈ ಸಂಪ್ರದಾಯದ ಅಭಿವ್ಯಕ್ತಿಯ ನೆಲೆಗಳು ಸ್ಥಳೀಯತೆ ಎಂದು ಕರೆಯಬಹುದು. ವಸಾಹತುಶಾಹಿ ಧೋರಣೆಯ ವೈಚಾರಿಕ ಚಿಂತನೆಯ ಪ್ರಭಾವದಿಂದ ಕತೆಗಾರ್ತಿಯು ಹೆಣ್ಣಿನ ಸಂವೇದನೆಯ ಪ್ರತಿರೋಧವಾಗಿರುವ ಸಂಪ್ರದಾಯಗಳನ್ನು ಪ್ರಶ್ನಿಸುವ ಮನೋಭಾವನ್ನು ಕತೆಯಲ್ಲಿ ಗುರುತಿಸಬಹುದು.

**ನವರತ್ನ ರಾಮರಾವ್**

ಮೊದಲ ತಲೆಮಾರಿನ ಕಥನ ಪರಂಪರೆಯಲ್ಲಿ ಚರಿತ್ರೆಯ ಘಟನೆಗಳನ್ನು

ಜೀವನಾನುಭವದ ನೆಲೆಯಿಂದ ಕತೆಯ ರೂಪವನ್ನು ನೀಡಿದ ಕತೆಗಾರ ನವರತ್ನ ರಾಮರಾವ್. ಇವರ ಬಹುತೇಕ ಕತೆಗಳು ವಸಾಹತುಶಾಹಿ ನಿಲುವುಗಳನ್ನು ಪ್ರಧಾನವೆಂದು ಗುರುತಿಸುವುದನ್ನು ಕಾಣಬಹುದು. ಭಾರತೀಯರು ವಸಾಹತುಶಾಹಿ ಜನರಿಂದ ತಿಳುವಳಿಕೆಯನ್ನು, ಹುದ್ದೆಯನ್ನು, ಬುದ್ಧಿ ಬಲ, ಅಧಿಕಾರಗಳನ್ನು ಪಡೆದರು ಎಂಬ ತಾತ್ವಿಕತೆಯನ್ನು ಇವರ ಕತೆಗಳು ಹೊಂದಿವೆ. ಸ್ಥಳೀಯ ಪ್ರಜ್ಞೆಯು ವಸಾಹತುಶಾಹಿ ಪ್ರಭಾವದಲ್ಲಿ ಜೀವ ಪಡೆಯುವುದನ್ನು ಗುರುತಿಸಬಹುದು.

'ಲಕ್ಷ್ಮಣ ರಾಯನ ಭಾಗ್ಯ' ಎಂಬ ಕತೆಯು ವಸಾಹತುಶಾಹಿ ಪ್ರಜ್ಞೆಯನ್ನು ಉನ್ನತವೆಂದು ಹೇಳುವ ನೆಲೆಯಲ್ಲಿ ಸ್ಥಳೀಯ ಬದುಕಿನ ಮೀಮಾಂಸೆಯನ್ನು ನಿರೂಪಿಸುತ್ತದೆ. ಲಕ್ಷ್ಮಣ ರಾಯನು ಬಲಿಷ್ಠವಾದ ದೇಹವನ್ನು ಹೊಂದಿದ್ದ ಹಾಗೂ ತಿಳಿಬುದ್ಧಿಯ ವ್ಯಕ್ತಿ. ಬಡತನದಲ್ಲಿ ದುಡಿದು ಬದುಕು ಕಾಣುತ್ತಿದ್ದ, ಒಮ್ಮೆ ನರಬಲಿ ನೀಡಲು ತಯಾರಿ ನಡೆಸಿದ ಒಂದು ಸಮುದಾಯವು ಲಕ್ಷ್ಮಣರಾಯನನ್ನು ಪೂಜೆಗೆಂದು ಆಹ್ವಾನಿಸಿ ಕಣ್ಣಿಗೆ ಬಟ್ಟೆ ಕಟ್ಟಿ ಪೂಜೆ ಸ್ಥಳಕ್ಕೆ ಕರೆದುಕೊಂಡು ಹೋಗಿ ಮಧ್ಯರಾತ್ರಿ ಪೂಜೆ ಮಾಡಬೇಕೆಂದು ಕೇಳಿತು. ಅದಕ್ಕೆ ಒಪ್ಪಿಕೊಂಡ ಲಕ್ಷ್ಮಣರಾಯನಿಗೆ ಆ ಪರಿಸರವನ್ನು ನೋಡಿ 'ನರಬಲಿಯ' ಪೂಜೆ ಎಂದು ಅರ್ಥವಾಯಿತು. ನಂತರ ಪಕ್ಕದಲ್ಲಿ ಅಸ್ವಸ್ಥಗೊಂಡು ಬಿದ್ದಿದ್ದ ಹುಡುಗನನ್ನು ನೋಡಿದ ಮೇಲೆ ಲಕ್ಷ್ಮಣರಾಯ ಆ ಸ್ಥಳದಿಂದ ಹುಡುಗನನ್ನು ಹೆಗಲಿಗೆ ಹಾಕಿಕೊಂಡು ಅಲ್ಲಿಂದ ತಪ್ಪಿಸಿಕೊಂಡು ಬಂದು ರಾತ್ರಿ ಪಾಳುಕೆರೆಗೆ ಬೀಳುತ್ತಾನೆ. ಮುಂಜಾನೆ ಆಂಗ್ಲ ಪೋಲಿಸರಿಗೆ ಎಲ್ಲಾ ವಿಷಯವನ್ನು ತಿಳಿಸುತ್ತಾನೆ. ಆಂಗ್ಲ ಪೋಲಿಸರು ಲಕ್ಷ್ಮಣರಾಯನನ್ನು ತನ್ನ ಉನ್ನತ ಅಧಿಕಾರಿಯಲ್ಲಿ ಕರೆದುಕೊಂಡು ಹೋಗಿ ವಿಚಾರಣೆ ಒಳಪಡಿಸುತ್ತಾರೆ. 'ಮಂಗಮೋರೆ ಸಾಹೇಬ ಲಕ್ಷ್ಮಣರಾಯನನ್ನು ಗಮನಿಸಿ ಅವನಿಗೆ ಉದ್ಯೋಗವನ್ನು ನೀಡಿ ತನ್ನಲ್ಲಿಯೇ ಇಟ್ಟುಕೊಂಡು ಆಚಾರ ವಿಚಾರವನ್ನು ಕಲಿಸಿ ಬುದ್ಧಿವಂತನಾದ ಮೇಲೆ 'ಕಳ್ಳನ ಕಣಿವೆ' ಸ್ಟೇಷನಿಗೆ ಇನಸ್ಪೆಕ್ಟರ್ ಆಗಿ ನೇಮಕವಾಗಿ ಇಂಗ್ಲಿಷ್ ಬಲ್ಲ ಉನ್ನತ ಅಧಿಕಾರಿಯಾದನು.

ಕತೆಯು ಲಕ್ಷ್ಮಣರಾಯ ನಮ್ಮ ಪರಂಪರೆಯಲ್ಲಿ ಇದ್ದಾಗ ಬಡವನಾಗಿ, ದಡ್ಡನಾಗಿ, ಉದ್ಯೋಗವಿಲ್ಲದವನಾಗಿ ಇದ್ದವನು ವಸಾಹತುಶಾಹಿಯ ಪರಿಸರಕ್ಕೆ ಒಳಗಾದ ಮೇಲೆ ಇಂಗ್ಲಿಷ್ ಕಲಿತು, ಬುದ್ಧಿವಂತನಾಗಿ, ಹುದ್ದೆಯನ್ನು ಪಡೆದ ಎನ್ನುವ ವಸಾಹತು ಗುಣಾತ್ಮಕ ನಿಲುವುಗಳನ್ನು ಕತೆಗಾರರು ಮಂಡಿಸುತ್ತಾರೆ. ಈ ರೀತಿಯ ಅಭಿವ್ಯಕ್ತಿಯನ್ನು ಹೊಂದಿರುವ ಇನ್ನೊಂದು ಕತೆ 'ತಕ್ಸಿರು'. ಈ ಕತೆಯಲ್ಲಿ ಪಂಜುಗಳ್ಳರು ಸಮಾಜದ ಆರೋಗ್ಯ ಹಾಳು

ಮಾಡುತ್ತಿದ್ದರು, ಭಾರತೀಯ ಆಡಳಿತ ವ್ಯವಸ್ಥೆಯು ಪಂಜುಗಳ್ಳರ ಹಾವಳಿಯನ್ನು ನಿಯಂತ್ರಣ ಮಾಡಲು ವಿಫಲವಾಗಿತ್ತು. ಪಂಜುಗಳ್ಳರು ಕೊಲೆ, ಸುಲಿಗೆ, ಅತ್ಯಾಚಾರ, ಕಳ್ಳತನದ ಮೂಲಕ ಊರಿಗೆ ಬೆಂಕಿ ಹಚ್ಚಿ ನಾಶ ಮಾಡುತ್ತಿದ್ದರು. ವಸಾಹತುಶಾಹಿ ಆಡಳಿತ ವ್ಯವಸ್ಥೆ ಪೋಲಿಸರು ಹಾಗೂ ಊರಿನ ಗೌಡರು ಪಂಜುಗಳ್ಳರನ್ನು ಹಿಡಿದು ಒಬ್ಬನನ್ನು ಗಲ್ಲಿಗೇರಿಸಿ ಆಂಗ್ಲ ಸರ್ಕಾರಕ್ಕೆ ವರದಿ ಮಾಡಿದರು. ತಕ್ಷಣ ವಿಷಯ ತಿಳಿದ ಮಂಗಮೋರೆ ಸಾಹೇಬರು ಈ ಊರಿಗೆ ಆಗಮಿಸಿ ಗಲ್ಲುಶಿಕ್ಷೆ ವಿಧಿಸುವ ಹಕ್ಕು ಊರಗೌಡನಿಗೆ ಇಲ್ಲ. ನ್ಯಾಯದ ಅಧಿಕಾರ ಇರುವುದು ಆಂಗ್ಲ ಕೋರ್ಟಿಗೆ. ಸಾಕ್ಷಿ ಪುರಾವೆಗಳನ್ನು ನೋಡಿ ವಿಚಾರಣೆ ಮಾಡಿ ಗಲ್ಲುಶಿಕ್ಷೆ ವಿಧಿಸಬೇಕೆಂದು ನ್ಯಾಯಿಕ ವ್ಯವಸ್ಥೆಯ ಬಗ್ಗೆ ಗೌಡರಿಗೆ ತಿಳುವಳಿಗೆ ನೀಡಿದ ಮಂಗಮೋರೆ ಸಾಹೇಬ ನಗರಕ್ಕೆ ತೆರಳುತ್ತಾನೆ. ಈ ಕತೆಯಲ್ಲಿ ಕತೆಗಾರರು ಭಾರತೀಯ ಪರಂಪರಾಗತವಾದ ನ್ಯಾಯಿಕ ವ್ಯವಸ್ಥೆಯು ವಸಾಹತುಶಾಹಿ ಪ್ರವೇಶದಿಂದ ಹೇಗೆ ಬದಲಾಯಿತು ಮತ್ತು 'ಕೋರ್ಟು' ಎಂಬ ನ್ಯಾಯಿಕ ವ್ಯವಸ್ಥೆಯು ಹೇಗೆ ಅಸ್ತಿತ್ವವನ್ನು ಪಡೆಯಿತು ಎಂಬ ತಾತ್ವಿಕ ನಿಲುವನ್ನು ಮಂಡಿಸುತ್ತಾರೆ. ಇವರ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯು ವಸಾಹತುಶಾಹಿಯ ಬಾಹುಬಂಧನದಲ್ಲಿ ತನ್ನ ಅಸ್ಮಿತೆಯನ್ನು ಕಳೆದುಕೊಳ್ಳುವ ನೆಲೆಯನ್ನು ಕಾಣಬಹುದು.

**ಸರಸ್ವತಿ ಬಾಯಿ ರಾಜವಾಡೆ**

ಮೊದಲ ತಲೆಮಾರಿನ ಕತೆಗಳಿಗೆ ವೈಶಿಷ್ಟ್ಯತೆಯನ್ನು ಒದಗಿಸಿದ ಕತೆಗಾರ್ತಿಯರಲ್ಲಿ ಸರಸ್ವತಿ ಬಾಯಿ ರಾಜವಾಡೆ ಒಬ್ಬರು. ಮಹಿಳೆಯ ಆ ಕಾಲಮಾನದ ಸಮಸ್ಯೆಗಳನ್ನು ಭಾರತೀಯ ಪರಂಪರೆಯೊಂದಿಗೆ ಪರಿಚಯಿಸುವ ಕಾರ್ಯವನ್ನು ಕತೆಗಳು ಕಾಪಿಟ್ಟು ಕೊಂಡಿರುವುದನ್ನು ಗುರುತಿಸಬಹುದು.'ನನ್ನ ಅಜ್ಞಾನ' ಎಂಬ ಕತೆಯು ವೈದಿಕ ಕುಟುಂಬವೊಂದರ ಸಾಮಾಜೀಕರಣದ ನೆಲೆಯನ್ನು ಚರ್ಚಿಸುತ್ತದೆ. ಗೋಪಾಲ ಸತ್ವಯುತವಾದ ಹಾಗೂ ಗೌರವ ಸಂಬಂಧವಾದ ಬದುಕನ್ನು ಕಟ್ಟಿಕೊಳ್ಳಬೇಕು. ಎಂಬ ಉದ್ದೇಶದಿಂದ ಅವನ ತಂದೆ ಶಿಸ್ತುಬದ್ಧವಾಗಿ ಬೆಳೆಸಲು ಆರಂಭಿಸುತ್ತಾರೆ. ಚಿಕ್ಕ ತಪ್ಪಿಗೂ ದೀರ್ಘವಾದ ದಂಡನೆಗೆ ಗುರಿಯಾಗುತ್ತಿದ್ದ ಕಾರಣ ಗೋಪಾಲನಿಗೆ ತನ್ನ ತಂದೆ ಬಗ್ಗೆ ಬೇಸರ ಹುಟ್ಟುತ್ತದೆ. ನಾನು ಎಲ್ಲರಿಗಿಂತ ಬುದ್ಧಿವಂತನಿದ್ದೇನೆ, ಕಾಲವನ್ನು ಹಾಳು ಮಾಡುವುದಿಲ್ಲ. ಆದರೂ ಸಣ್ಣ ಪುಟ್ಟ ತಪ್ಪಿಗೂ ತಂದೆಯ ಶಿಕ್ಷೆ ಹಾಗೂ ವರ್ತನೆಯನ್ನು ಕಂಡು ಮನೆಬಿಟ್ಟು ಹೋಗಲು ನಿರ್ಧರಿಸುತ್ತಾನೆ ಮತ್ತು ತಾನು ಮನೆ ಬಿಡುವುದಾಗಿಯೂ,

ತಂದೆಯು ನೀಡುವ ಶಿಕ್ಷೆಯ ಬಗ್ಗೆಯೂ ಪತ್ರದಲ್ಲಿ ಬರೆದು ತಾಯಿಗೆ ನೀಡಿ ರಾತ್ರಿ ಹೊರಡಲು ಸಿದ್ಧನಾಗುತ್ತಾನೆ. ಈ ಸಮಯದಲ್ಲಿ ಗೋಪಾಲನು ಬರೆದ ಪತ್ರವನ್ನು ಓದಿದ ಅವನ ತಂದೆ "ಗೋಪಾಲ ನನ್ನನ್ನು ತಪ್ಪಾಗಿ ಅರ್ಥ ಮಾಡಿಕೊಂಡನಲ್ಲ ನಾನು ಅವನನ್ನು ಶಿಕ್ಷಿಸುತ್ತಿದ್ದದ್ದು ಅವನಲ್ಲಿನ ಅಹಂಕಾರ ನಾಶವಾಗಿ ಸದ್ಗುಣಗಳು ಬರಲಿ, ಉತ್ತಮ ಪ್ರಜೆಯಾಗಲೆಂದು ಆಶಿಸಿ, ಕುಸಿದು ಬಿದ್ದ ತಂದೆಯನ್ನು ನೋಡಿ ಗೋಪಾಲ ತನ್ನ ತಪ್ಪಿನ ಅರಿವಾಗಿ ತಂದೆಯನ್ನು ತಬ್ಬಿಕೊಳ್ಳುತ್ತಾನೆ. ಕತೆಯು ಮಗುವನ್ನು ಸಾಮಾಜೀಕರಣಗೊಳಿಸುವ ನೆಲೆಯಲ್ಲಿ ನಮ್ಮ ನೆಲದ ಸತ್ವವನ್ನು, ಸಂಸ್ಕಾರವನ್ನು ಗೋಪಾಲನಿಗೆ ಕಲಿಸುವ ತಂದೆಯ ಜೀವನ ವಿನ್ಯಾಸವು ಸ್ಥಳೀಯತೆಯ ಅಭಿವ್ಯಕ್ತಿಯಾಗಿದೆ.

ವಸಾಹತುಶಾಹಿಯ ಧೋರಣೆಯು ಮಹಿಳಾ ಬದುಕಿನ ವಿನ್ಯಾಸಕ್ಕೆ ಹೊಸದಾರಿಯನ್ನು ಒದಗಿಸಿತು. ಶಿಕ್ಷಣ, ಪಾಶ್ಚಾತ್ಯ ಸಾಹಿತ್ಯ ಹಾಗೂ ಭಾರತೀಯ ಸುಧಾರಣ ಚಳುವಳಿಗಳು ಭಾರತೀಯ ಮಹಿಳೆಯಲ್ಲಿ ಸ್ವಚಿಂತನೆಯನ್ನು ಹುಟ್ಟು ಹಾಕಿತು. ಸ್ತ್ರೀ ಸಂವೇದನೆಯ ಅಭಿವ್ಯಕ್ತಿಯ ನೆಲೆಯನ್ನು ಕತೆಗಾರ್ತಿಯು 'ಚಾವಡಿ ಕೂಟ' ಎಂಬ ಕತೆಯಲ್ಲಿ ನಿರೂಪಿಸುತ್ತಾರೆ, ಈ ಕತೆಯಲ್ಲಿ ಆಧುನಿಕ ಪ್ರಜ್ಞೆ ಮತ್ತು ಪರಂಪರೆಯ ಪ್ರಜ್ಞೆಯೊಂದಿಗಿನ ಸಂಘರ್ಷವನ್ನು ಗಂಗಜ್ಜಿ ಹಾಗೂ ಸುಶೀಲಮ್ಮಳ ಮೂಲಕ ಕತೆಗಾರ್ತಿ ಅನುಸಂಧಾನ ಮಾಡುತ್ತಾರೆ. ಗಂಗಜ್ಜಿ ಪರಂಪರೆಯನ್ನು ತನ್ನ ಬದುಕಿನಲ್ಲಿ ಕಾಪಿಟ್ಟುಕೊಂಡು ಬಂದಿರುವುದಲ್ಲದೆ ತನ್ನ ಮುಂದಿನ ಪೀಳಿಗೆ ಸ್ತ್ರೀಯರು ಅದನ್ನು ಅನುಸರಿಸಬೇಕೆಂಬ ನಿಲುವಿಗೆ ಬದ್ಧಳಾಗಿದ್ದಾಳೆ, ಅಂದರೆ ವೈದಿಕ ಪರಂಪರೆಯಂತೆ ಹೆಣ್ಣುಮಕ್ಕಳು ಬಟ್ಟೆ ತೊಡಬೇಕು, ಮಡಿ ಮೈಲಿಗೆ ಅಂತಹ ಆಚರಣೆಯನ್ನು ಅನುಸರಿಸಬೇಕು. ದಿನಕ್ಕೊಂದು ಅಡುಗೆ ಮಾಡಿ ದೇವರಿಗೆ ಅರ್ಪಿಸಿ ಹಿರಿಯರ ಸೇವೆ ಮಾಡಿಕೊಂಡು ಧರ್ಮಕ್ಕೆ ಅನುಗುಣವಾಗಿ ಜೀವಿಸಬೇಕು. ಆದರೆ ಗಂಗಜ್ಜಿಯ ಸೊಸೆ ಸುಶೀಲಮ್ಮ ಆಧುನಿಕ ಪ್ರಜ್ಞೆಯನ್ನು ಹೊಂದಿದವಳು ಸ್ತ್ರೀಯರಿಗೂ ತನ್ನ ಆಸೆ ಆಕಾಂಕ್ಷೆಗಳಿವೆ, ತನಗೆ ಬೇಕಾದ ಬಟ್ಟೆ ತೊಡಬೇಕು ತನ್ನ ಗೆಳತಿಯರೊಂದಿಗೆ ಸೇರಿ ಭಾವನೆಗಳನ್ನು ಹಂಚಿಕೊಳ್ಳಬೇಕು ಹೆಣ್ಣು ಎಂದರೇ ಕೇವಲ ದುಡಿಯುವ ಯಂತ್ರವಲ್ಲ ಎಂಬ ನಿಲುವಿನಿಂದ ಗಂಗಜ್ಜಿಯ ಎಲ್ಲಾ ಸಂಪ್ರದಾಯಿಕ ಮಾತು ಹಾಗೂ ಆಚಾರವನ್ನು ದಾಟುವ ಮೂಲಕ ತನ್ನ ಅಸ್ಮಿತೆಯನ್ನು ಕಟ್ಟಿಕೊಳ್ಳುತ್ತಾಳೆ.

ಕತೆಗಾರ್ತಿಯು ಕತೆಯಲ್ಲಿ ಪುರುಷ ಕೇಂದ್ರಿತ ಲೋಕ ದೃಷ್ಟಿಯಿಂದ ಬಿಡಿಸಿಕೊಂಡು ತನ್ನ ಅಸ್ಮಿತೆಯನ್ನು ಕಟ್ಟುವ ಮೀಮಾಂಸೆಯನ್ನು ಸುಶೀಲಮ್ಮಳ ಮೂಲಕ ಅಭಿವ್ಯಕ್ತಿಸುತ್ತಾಳೆ.

ಈ ಅಭಿವ್ಯಕ್ತಿಯೇ ಸ್ಥಳೀಯತೆಯ ರೂಪವಾಗಿದೆ. ಈ ಕತೆಯ ನಿಲುವನ್ನು ಮುಂದುವರಿಸಿಕೊಂಡಂತೆ ಕಾಣುವ ಇನ್ನೊಂದು ಕತೆ 'ಅವಳ ಉದ್ಧಾರ'. ಬಾಲ ವಿಧವೆಯರು ಮರು ವಿವಾಹವಾಗುವುದನ್ನು ನಿಷೇಧಿಸಿರುವ ಬ್ರಾಹ್ಮಣ ಸಮುದಾಯವು ಬಾಲವಿಧವೆಯನ್ನು ಗ್ರಹಿಸುವ ಲೋಕ ದೃಷ್ಟಿಯನ್ನು ಈ ಕತೆಯು ಅನುಸಂಧಾನ ಮಾಡುತ್ತದೆ. ಗೋಪಿ ಎಂಬ ಬಾಲ ವಿಧವೆಯು ಪರಪುರುಷನ ಆಕ್ರಮಣಕ್ಕೆ ಒಳಗಾಗಿ ಮಗುವನ್ನು ಪಡೆದ ಮೇಲೆ ಸಮಾಜದಿಂದ ಹೊರಬಿದ್ದ ನಂತರ ವಿಧವಾ ಆಶ್ರಮವು ಅವಳಿಗೆ ಆಶ್ರಯವನ್ನು ನೀಡಿ ಬದುಕನ್ನು ಕಲ್ಪಿಸುತ್ತದೆ. ಆದರೆ ವಿಧವಾ ಆಶ್ರಮವು ೫೦೦೦/– ರೂ.ಗೆ ಗೋಪಿಯನ್ನು ಒಬ್ಬ ಮುದುಕ ಶ್ರೀಮಂತನಿಗೆ ಲಗ್ನವೆಂಬ ನೆಲೆಯಲ್ಲಿ ಮಾರಾಟ ಮಾಡುತ್ತದೆ. ಶ್ರೀಮಂತ ಮುದುಕ ಒಂದು ವರ್ಷಗಳ ಕಾಲ ಗೋಪಿಯನ್ನು ಬಳಸಿಕೊಂಡು ಮಕ್ಕಳಾಗಲಿಲ್ಲ ಗೊಡ್ಡು ಎಂದು ಹಿಂಸಿಸುತ್ತಾನೆ, ಗೋಪಿ ತಾನು ಬಂಜೆಯಲ್ಲ ತನಗೊಂದು ಮಗುವಿದೆ ಎಂದು ಮುದಿ ಶ್ರೀಮಂತನಿಗೆ ಪ್ರತಿಕ್ರಿಯಿಸುತ್ತಾಳೆ. ಮುದಿ ಶ್ರೀಮಂತ ಕೋಪಗೊಂಡು ಸೂಳೆಯೆಂದು ನಿಂದಿಸಿ ಮನೆಯಿಂದ ಹೊರ ಹಾಕುತ್ತಾನೆ. ಗೋಪಿ ಅನಾಥಳಾಗಿ ಬೀದಿಗೆ ಬೀಳುತ್ತಾಳೆ. ಈ ಕತೆಯು ಬಾಲವಿಧವೆಯ ಬದುಕನ್ನು ವಿಮರ್ಶಿಸುವ ಜೊತೆಗೆ ಅವರ ಬದುಕಿನ ಸ್ವರೂಪವನ್ನು ಸಮಾಜದ ಮುಂದಿಡುವ ಕಾರ್ಯವನ್ನು ರಾಜವಾಡೆ ತನ್ನ ಕತೆಗಳಲ್ಲಿ ಮಾಡುತ್ತಾರೆ. ರಾಜವಾಡೆಯವರ ಕತೆಗಳಲ್ಲಿ ಸ್ತ್ರೀ ಸಂವೇದನೆ ನೆಲೆಗಳು ಪ್ರಧಾನವಾಗಿ ಗೋಚರವಾಗುತ್ತದೆ. ಪುರುಷ ಪ್ರಧಾನದ ಲೋಹಗ್ರಹಿಕೆಯ ಪ್ರತಿಯಾಗಿ ಸ್ತ್ರೀ ಒಬ್ಬಳ ಬದುಕಿನ ವಿನ್ಯಾಸವನ್ನು ನಿರೂಪಿಸುವ ತಾತ್ವಿಕ ನೆಲೆಯನ್ನು ಸ್ಥಳೀಯತೆ ಎಂದು ಕರೆಯಬಹುದು.

**ಗೊರೂರು ರಾಮಸ್ವಾಮಿ ಅಯ್ಯಂಗಾರ್**

ವಸಾತುಶಾಹಿಯ ಪ್ರಭಾವದಿಂದ ಭಾರತದ ಸಮಾಜದಲ್ಲಿ ಅನೇಕ ಪಲ್ಲಟಗಳು ನಡೆದವು. ಪತ್ರಿಕೆ, ಶಿಕ್ಷಣ, ಕೈಗಾರಿಕೆ, ಅಂಗಡಿ, ಹೊಟೇಲ್ ಎಂಬ ಇತ್ಯಾದಿ ಸಾಮಾಜಿಕ ಸಂಸ್ಥೆಗಳು ಪುರುಷರ ದುಡಿಮೆ ಕೇಂದ್ರವಾದವು. ಈ ಸಂದರ್ಭದಲ್ಲಿ ರೂಪುಗೊಂಡ ಸಣ್ಣ ಕುಟುಂಬಗಳ ಸತ್ವವನ್ನು ಕಳೆದುಕೊಂಡಿದ್ದಲ್ಲದೆ ಗಂಡು ಹೆಣ್ಣುಗಳ ಸಂಬಂಧ, ಗಂಡ ಹೆಂಡತಿಯ ಸಂಘರ್ಷ ಅನಾಥ ಭಾವ, ಅನುಮಾನದಂತಹ ಸಮಸ್ಯೆಗಳು ಕುಟುಂಬವನ್ನು ಪ್ರವೇಶ ಪಡೆದವು. ಈ ಪ್ರವೇಶವನ್ನು ಸೂಕ್ಷ್ಮವಾಗಿ ಗ್ರಹಿಸಿದ ಗೊರೂರು ರಾಮಸ್ವಾಮಿ ಐಯ್ಯಂಗಾರ್ ತಮ್ಮ ಕತೆಗಳಲ್ಲಿ ಕುಟುಂಬವನ್ನು ಭಾರತೀಯ ಪರಂಪರೆಯ

ನೆಲೆಯಲ್ಲಿ ಮರುಕಟ್ಟುವಂತಹ ಆಶಯವನ್ನು ನಿರೂಪಿಸುತ್ತಾರೆ. ಇವರ ಕತೆಗಳು ಸ್ಥಳೀಯತೆಯನ್ನು ತನ್ನ ಒಳಸತ್ವವಾಗಿ ಹೊಂದಿವೆ. ಅಲ್ಲದೆ ಕೌಟುಂಬಿಕ ವ್ಯವಸ್ಥೆ ಸ್ಥಳೀಯತೆಯ ಮೂಲಕ ಚಿಕಿತ್ಸೆ ಕೊಡುವ ತಾತ್ವಿಕತೆಯನ್ನು ಕತೆಗಳು ಹೊಂದಿವೆ.

'ಇಬ್ಬರು ಹೆಂಡಿರು' ಎಂಬ ಕತೆಯು ಗಂಡಸಿನ ಆಸೆ-ಆಕಾಂಕ್ಷೆಯನ್ನು ಹಾಗೂ ದುರ್ಬಲತೆಯನ್ನು ಗುರುತಿಸುವ ಜೊತೆಗೆ ಒಬ್ಬ ಪುರುಷ ಒಂದು ಹೆಣ್ಣಿನೊಂದಿಗೆ ಕಷ್ಟ ಸುಖವನ್ನು ಹಂಚಿಕೊಂಡು ಬದುಕಿದರೆ ಮಾತ್ರ ನೆಮ್ಮದಿಯನ್ನು, ಸುಖಮಯವಾದ ಬದುಕನ್ನು ಕಾಣಲು ಸಾಧ್ಯವೆಂಬ ಸ್ಥಳೀಯತೆ ನಿಲುವನ್ನು ಅಭಿವ್ಯಕ್ತಿಸುತ್ತದೆ. ಪಿಲ್ಲಯ್ಯ ತನ್ನ ಹೆಂಡತಿ ಭಾಗ್ಯಮ್ಮನೊಂದಿಗೆ ಅಲ್ಪ ಭೂಮಿಯಲ್ಲಿ ದುಡಿದುಕೊಂಡು ಸುಂದರವಾದ ಬದುಕನ್ನು ತನ್ನದಾಗಿಸಿಕೊಂಡ. ಕಾಲ ಸರಿದಂತೆ ಪಿಲ್ಲಯ್ಯ ಭೂಮಿ, ಹಣಗಳು ಹೆಚ್ಚಾಗಿ ತನ್ನ ಆಸೆ-ಆಕಾಂಕ್ಷೆಗಳು ಹೆಚ್ಚಾದವು. ತನಗೆ ಹದಿನೈದು ವರ್ಷದ ದಾಂಪತ್ಯದಲ್ಲಿ ಮಕ್ಕಳಾಗದಿರುವುದು ಚಿಂತೆಯನ್ನು ಹುಟ್ಟು ಹಾಕಿತು, ಭಾಗ್ಯಮ್ಮ ಪಿಲ್ಲಯ್ಯನಿಗೆ ದತ್ತು ಮಗುವನ್ನು ಪಡೆದುಕೊಳ್ಳುವ ಎಂದು ಕೇಳಿಕೊಂಡಳು. ಪಿಲ್ಲಯ್ಯ ದತ್ತು ಮಗುವಿನ ನಿರ್ಧಾರವನ್ನು ತಳ್ಳಿ ಹಾಕಿ, ತನ್ನದೇ ಮಗು ಬೇಕು ತಾನು ಮತ್ತೊಂದು ಲಗ್ನವಾಗುವುದಾಗಿ ನಿರ್ಧರಿಸಿ, ಕನ್ಯೆ ನೋಡಲು ಪರೂರಿಗೆ ಹೋಗಿ ಸುಬ್ಬಿ ಎಂಬ ಕನ್ಯೆಯನ್ನು ಲಗ್ನವಾಗಿಕೊಂಡು ಬಂದನು. ಪಿಲ್ಲಯ್ಯ ಇಬ್ಬರು ಹೆಂಡತಿಯರ ಗಂಡನಾಗಿ ಬದುಕಲು ಆರಂಭಿಸಿದನು. ಆದರೆ ಆ ಬದುಕು ಅತ್ಯಂತ ನೋವಿನಿಂದ ಕೂಡಿದ ಬದುಕಾಯಿತು, ಭಾಗ್ಯಮ್ಮ ಮತ್ತು ಸುಬ್ಬಿಯ ನಡುವೆ ಜಗಳ ದಿನದ ಮಾತಾಯಿತು. ಇಬ್ಬರು ಜಗಳ ಹೊಡೆದಾಟದಲ್ಲಿಯೇ ಆಸಕ್ತಿ ವಹಿಸಿದರು. ಆದರೆ ಇಬ್ಬರಿಗೂ ಪಿಲ್ಲಯ್ಯ ಗೌಣವಾಗಿ ಹೋದ, ನೆಮ್ಮದಿಯಿಲ್ಲದೆ ಸರಿಯಾದ ಆಹಾರ, ನಿದ್ದೆಯಿಲ್ಲದೆ ಬದುಕುವ ಸ್ಥಿತಿ ಪಿಲ್ಲಯ್ಯನದ್ದಾಯಿತು. ಕತೆಗಾರರು ಕುಟುಂಬ ಒಂದು ಸಮಸ್ಯೆಯನ್ನು ಹೇಳುವ ಜೊತೆಯಲ್ಲಿಯೇ ಜೀವನ ಮೌಲ್ಯವನ್ನು ತಾತ್ವಿಕರಿಸುತ್ತಾರೆ.

'ಸಹಧರ್ಮಿಣಿ' ಎನ್ನುವ ಕತೆಯು ಗಂಡ ಹೆಂಡತಿಯು ಅರ್ಥ ಮಾಡಿಕೊಂಡು ಬದುಕುವ ನಮ್ಮ ನೆಲದ ಸತ್ವವನ್ನು ಧೋರಣೆಯಾಗಿಸಿಕೊಂಡಿದೆ. ತವರು ಮನೆಯಿಂದ ಬಸ್ಸಿನಲ್ಲಿ ಬಂದು ಇಳಿದು ಹೆಂಡತಿಯನ್ನು ಕರೆದುಕೊಂಡು ಹೋಗಲು ಬಂದ ಪತಿ, ಅವಳನ್ನು ಸಾರ್ವಜನಿಕವಾಗಿ ನಿಂದಿಸುವ, ಬೈಯುವ ಹಾಗೂ ಪೆಟ್ಟಿಗೆಯನ್ನು ಹೊರಿಸುವ ಕಾರ್ಯವನ್ನು ಮಾಡಿಸುತ್ತಾನೆ. ಈ ರೀತಿಯ ಗಂಡಿನ ವರ್ತನೆಯನ್ನು ತಪ್ಪೆಂದು ಕತೆಗಾರರು ಮೌಲೀಕರಿಸುತ್ತಾರೆ.

'ಹೆಂಡತಿ ಎಂಬುದನ್ನು ಮರೆತರೆ' ಎಂಬ ಕತೆಯು ಗಂಡ ಹೆಂಡಿಯನ್ನು ತಮ್ಮ ಕರ್ತವ್ಯ ಹಾಗೂ ಪ್ರೀತಿಯ ನೆಲೆಯಲ್ಲಿ ಒಟ್ಟಿಗೆ ಬೆಸೆಯುವ ಆಶಯವನ್ನು ಹೊಂದಿದೆ, ಶಂಕರನ ನಡವಳಿಕೆಯನ್ನು ಅನುಮಾನದಿಂದ ಕಾಣುವ ಸಾವಿತ್ರಿ ಪ್ರತಿ ವಿಚಾರದಲ್ಲೂ ತಪ್ಪನ್ನು ಹುಡುಕಿ ಶಂಕರನ ಮೇಲೆ ಆರೋಪ ಹೊರಿಸಿ ಜಗಳ ಮಾಡುತ್ತಾಳೆ. ಒಮ್ಮೆ ಈ ಜಗಳ ಶಂಕರನ ಗೆಳೆಯ ರಾಮು ಹಾಗೂ ಅವನ ಹೆಂಡತಿ ಪದ್ಮಳ ಆಗಮನದಿಂದ ಬಹು ಕಠಿಣ ಸ್ಥಿತಿಯನ್ನು ತಲುಪಿ ಸಾವಿತ್ರಿ ಗಂಡನನ್ನು ಅನುಮಾನದಿಂದ ಹಾಗೂ ಪದ್ಮಳೊಂದಿಗೆ ನೀವು ಸಿನಿಮಾಕ್ಕೆ ಹೋದಿರಿ ಇತ್ಯಾದಿಯ ನೆಲೆಯಲ್ಲಿ ಜಗಳವಾಡಿ ಮಾತು ಬಿಡುತ್ತಾಳೆ. ಶಂಕರನು ಪದ್ಮಳ ಮುಖವನ್ನು ನೋಡದೆ ಕೆಲಸಕ್ಕೆ ಹೋಗುತ್ತಾನೆ. ಗಂಡ ಹೆಂಡತಿ ಇಬ್ಬರು ತಮ್ಮ ತಮ್ಮ ತಪ್ಪುಗಳನ್ನು ವಿಮರ್ಶೆ ಮಾಡಿಕೊಂಡು ತಾವು ಜಗಳ ಮಾಡುವುದು ತಪ್ಪೆಂದು ಅರಿತುಕೊಂಡು ಶಂಕರ ಮತ್ತು ಸಾವಿತ್ರಿ ಒಂದಾಗುತ್ತಾರೆ.

ಕತೆಗಾರರು ಅಭಿವ್ಯಕ್ತಿಸುವ ಶಂಕರ ಮತ್ತು ಸಾವಿತ್ರಿಯು ಜಗಳಕ್ಕೆ ಕಾರಣವಾದ ವಿಚಾರವನ್ನು ತಮ್ಮಲ್ಲೆ ವಿಮರ್ಶೆ ಮಾಡಿಕೊಂಡು, ಗಂಡನು ಹೆಂಡತಿಯ ತ್ಯಾಗ, ಪ್ರೀತಿ, ದುಡಿಮೆಯನ್ನು ನೆನಪು ಮಾಡಿಕೊಂಡು ಹೆಂಡತಿಯೊಂದಿಗೆ ಸೇರಿಕೊಳ್ಳುವುದು. ಹೆಂಡತಿಯೂ ಅನುಮಾನಿಸುವ ಗುಣ ಹಾಗೂ ಗಂಡನ ನಡತೆಯಲ್ಲಿ ತಪ್ಪನ್ನು ಹುಡುಕುವ ತನ್ನ ತನವನ್ನು ತಪ್ಪೆಂದು ಹಾಗೂ ಗಂಡನು ತನಗಾಗಿ ದುಡಿಯುವ ನೋವು, ಒತ್ತಡಗಳನ್ನು ನುಂಗಿಕೊಳ್ಳುವ ನಡೆಯನ್ನು ಅರ್ಥ ಮಾಡಿಕೊಂಡು ಗಂಡನೊಂದಿಗೆ ಕೂಡಿಕೊಳ್ಳುವ ಸದ್ಭಾವ ಹೊಂದುವಳು. ಈ ಬಗೆಯ ನಮ್ಮ ನೆಲದ ಕೌಟುಂಬಕ ಸತ್ವವನ್ನು ಸ್ಥಳೀಯತೆ ಎಂದು ಕರೆಯಬಹುದು.

**ಸಿ.ಎನ್. ಜಯಲಕ್ಷ್ಮಿದೇವಿ**

ಭಾರತೀಯ ಜೀವನ ಮೌಲ್ಯ ಹಾಗೂ ಆದರ್ಶವನ್ನು ಕಾಪಿಟ್ಟುಕೊಂಡು ಕಥಾ ಪರಂಪರೆಯನ್ನು ಬೆಳೆಸಿದ ಮೊದಲ ತಲೆಮಾರಿನ ಕತೆಗಾರ್ತಿ ಸಿ.ಎನ್. ಜಯಲಕ್ಷ್ಮಿದೇವಿ ಸಾಮಾಜಿಕ ವ್ಯವಸ್ಥೆಯ ಸಮಸ್ಯೆಗಳಿಗೆ ಪರಂಪರೆಯ ಸತ್ವವನ್ನು ಚಿಕಿತ್ಸೆಯ ಅಭಿವ್ಯಕ್ತಿಯಾಗಿ ಕತೆಯಲ್ಲಿ ನಿರೂಪಿಸುತ್ತಾರೆ. ಇವರ ಕತೆಗಳಲ್ಲಿ ಸ್ಥಳೀಯತೆಯ ಸ್ವರೂಪವು ಕುಟುಂಬವನ್ನು ಬೆಸೆಯುವ ಚಿಂತನೆಯಲ್ಲಿ ನಿರೂಪಿತವಾಗುತ್ತದೆ. 'ದೇವಿಯ ಪ್ರಸಾದ' ಕತೆಯಲ್ಲಿ ಕೃಷ್ಣಪ್ಪ ಹಾಗೂ ಲಕ್ಷ್ಮಿದೇವಿಯಮ್ಮನ ಕುಟುಂಬವು ಅತ್ಯಂತ ಗೌರವ ಮನ್ನಣೆಯನ್ನು ಪಡೆದ ಕುಟುಂಬವಾಗಿತ್ತು. ಕೃಷ್ಣಪ್ಪನ ದಾನ ಧರ್ಮದ ಸ್ವಭಾವವು ಆಸ್ತಿ ಸಂಪತ್ತನ್ನು ಕಳೆದುಕೊಳ್ಳುವಂತೆ

ಮಾಡಿತು. ವೆಂಕಟಪ್ಪನಿಂದ ಸಾಲ ಪಡೆದ ಕೃಷ್ಣಪ್ಪ ತೀರಿಸದಿದ್ದಾಗ ಒತ್ತಾಯವಾಗಿ ವೆಂಕಟಪ್ಪನು ಕೃಷ್ಣಪ್ಪನ ಆಸ್ತಿಯನ್ನು ಬರೆಸಿಕೊಂಡನು. ಆದರೆ ಕೃಷ್ಣಪ್ಪ ಹಾಗೂ ಲಕ್ಷ್ಮಿದೇವಿ ಎಲ್ಲವನ್ನು ಕಳೆದುಕೊಂಡ ದುಃಖವಿದ್ದರೂ ಶ್ರದ್ಧೆಯಿಂದ ಲಕ್ಷ್ಮಿ ಪೂಜೆ ಮಾಡುತ್ತಾರೆ.ಈ ನಡುವೆ ಪೂಜೆಗೆ ಆಗಮಿಸಿದ ವೆಂಪಟಪ್ಪ ಕೃಷ್ಣಪ್ಪನವರ ಮನೆಯ ದಾನ ಪತ್ರವನ್ನು ಕಾಣಿಕೆ ರೂಪದಲ್ಲಿ ನೀಡಿ ಕೈಮುಗಿದ, ಕೃಷ್ಣಪ್ಪನವರು ವೆಂಕಪ್ಪನನ್ನು ಅಪ್ಪಿಕೊಂಡು ಅತ್ತರು. ಕತೆಯಲ್ಲಿ ವ್ಯಕ್ತವಾಗುವ ದಾನ ಧರ್ಮವನ್ನು ಮಾಡಿಕೊಂಡು ನಿಸ್ವಾರ್ಥದಿಂದ ಬದುಕುವ ಕೃಷ್ಣಪ್ಪನ ಕುಟುಂಬ, ಕೃಷ್ಣಪ್ಪ ಎಲ್ಲವನ್ನು ಕಳೆದುಕೊಂಡಿದ್ದರೂ. ವೆಂಕಟಪ್ಪ ಕೃಷ್ಣಪ್ಪ ಹಾಗೂ ಲಕ್ಷ್ಮಿದೇವಿಯ ಬಗೆಗಿನ ಗೌರವ ಸಾಲದ ನೆಲೆಯಲ್ಲಿ ಕೃಷ್ಣಪ್ಪ ನೀಡಿದ ಮನೆಯನ್ನು ಪುನಃ ವೆಂಪಟಪ್ಪ ಕೃಷ್ಣಪ್ಪನಿಗೆ ನೀಡಿ ಕೈಮುಗಿಯುವ ನಿರೂಪಣೆಯ ಕ್ರಮವು ನಮ್ಮ ನೆಲದ ಜೀವನ ಮೌಲ್ಯವನ್ನು ತಾತ್ವೀಕರಿಸುತ್ತದೆ.

'ನುಂಗಲಾರದ ತುತ್ತು' ಕತೆಯು ಆಶ್ರಯವನ್ನು ಬೇಡಿಕೊಂಡು ಬಂದ ಹೆಣ್ಣಿಗೆ ಹೆಣ್ಣೇ ಆಶ್ರಯವನ್ನು ಒದಗಿಸುವ ಭೂಮಿಕೆಯನ್ನು ಹೊಂದಿದೆ. ಕುಟುಂಬ ಒಂದರ ಮೀಮಾಂಸೆಯನ್ನು ನಿರೂಪಿಸುವ ಕತೆಯು ಬೆಸೆಯುವ ನಿಲುವನ್ನು ಕಾಪಾಡಿಕೊಳ್ಳುತ್ತದೆ, ಬಸಯ್ಯ ಹಾಗೂ ಪಟ್ಟರಿಸಿಯ ಸುಂದರ ಸಂಸಾರದಲ್ಲಿ ಬಹುಕಾಲ ಕಳೆದರೂ ಮಕ್ಕಳಾಗದ ಕಾರಣ ಪುಟ್ಟರಸಿಯೇ ಮುಂದೆ ನಿಂತು ಚೆನ್ನಿಯನ್ನು ಬಸಯ್ಯನೊಂದಿಗೆ ಲಗ್ನಮಾಡುತ್ತಾಳೆ. ಚೆನ್ನಿ ನಾಲ್ಕು ಮಕ್ಕಳನ್ನು ಪಡೆದಳು. ಆದರೆ ಚೆನ್ನಿ ತಾಯಿತನವನ್ನು ಮಕ್ಕಳಲ್ಲಿ, ಮಕ್ಕಳು ತಾಯಿಯಲ್ಲಿ ಕಾಣುವ ಅವಕಾಶ ಒದಗಲಿಲ್ಲ. ಪುಟ್ಟರಸಿಯೇ ಮಕ್ಕಳ ತಾಯಿಯಾಗಿ ಬೆಳೆಸುತ್ತಿದ್ದಳು. ದುಡಿಯುವುದು ಮಾತ್ರ ಚೆನ್ನಿಯ ಕಾರ್ಯವಾಗಿತ್ತು. ಮಕ್ಕಳು ದೊಡ್ಡವರಾದಂತೆ ಚೆನ್ನಿಯನ್ನು ಬೈಯಲು, ಹೊಡೆಯಲು ಆರಂಭಿಸಿದರೂ, ಪುಟ್ಟರಸಿ ಹಾಗೂ ಬಸಯ್ಯನು ಚೆನ್ನಿಯನ್ನು ಅವಮಾನಿಸಿ ಹಿಂಸಿಸಿದರೂ ಈ ಹಿಂಸೆಯನ್ನು ದೂರವಾಗಿಸುವ ಸಂಬಂಧ ಚೆನ್ನಿ ಮನೆಯನ್ನು ಬಿಟ್ಟು ಬೇರೆಯವರ ಮನೆಯಲ್ಲಿ ಆಶ್ರಯ ಪಡೆಯುತ್ತಾಳೆ. ಕತೆಗಾರ್ತಿಯು ಗ್ರಾಮೀಣ ಕುಟುಂಬ ವ್ಯವಸ್ಥೆಯನ್ನು ನಿರೂಪಿಸುವ ಜೊತೆಯಲ್ಲಿ ಹೆಣ್ಣಿಗೆ ಹೆಣ್ಣಿನ ಮೂಲಕವೇ ಆಶ್ರಯವನ್ನು ಒದಗಿಸುವ ಜೀವನಾದರ್ಶವನ್ನು ಗುರುತಿಸುತ್ತಾರೆ.

'ಅಂಧಶ್ರದ್ಧೆ' ಎನ್ನುವ ಕತೆಯು ಭಾರತೀಯ ಪರಂಪರೆಯ ಅಭಿವ್ಯಕ್ತಿಯನ್ನು ಗುಣಾತ್ಮಕವೆಂದು ನಿರೂಪಿಸುತ್ತದೆ. ವಸಾಹತುಶಾಹಿಯು ರೂಪಿಸಿದ ಶಿಕ್ಷಣ ಹಾಗೂ ವೈಚಾರಿಕ ಪ್ರಜ್ಞೆಯು ಭಾರತೀಯ ಧರ್ಮ, ಸಂಪ್ರದಾಯ, ನಂಬಿಕೆಗಳನ್ನು ಸತ್ವಹೀನವಾಗಿ

ಗುರುತಿಸುವ ಮೂಲಕ ವಿಜ್ಞಾನದ ನೆಲೆಯಲ್ಲಿ ಚರ್ಚಿಸುವ ಕಾರ್ಯವನ್ನು ಮಾಡಿತು. ಈ ಆಲೋಚನೆಯನ್ನು ಚರ್ಚಿಸುವ ಕತೆಯು ಭಾರತೀಯ ಪರಂಪರೆಯ ಸತ್ವವನ್ನು ಅರ್ಥ ಮಾಡಿಸುವ ಕಾರ್ಯವನ್ನು ಮಾಡುತ್ತದೆ. ಶಿವೂ ಮತ್ತು ಸೋಮು ಗೆಳೆಯರು. ಸೋಮು ಪಾಶ್ಚಾತ್ಯ ಚಿಂತನೆಯ ಪ್ರಭಾವಕ್ಕೆ ಒಳಗಾಗಿ ಭಾರತೀಯ ಧರ್ಮ ಹಾಗೂ ನಂಬಿಕೆಯನ್ನು ಪ್ರಶ್ನೆಯ ಮೂಲಕ ಅದರ ಒಳಸತ್ವವನ್ನು ಅರ್ಥ ಮಾಡಿಕೊಳ್ಳದೆ ಹೀಯಾಳಿಸುತ್ತಾನೆ. ಈ ನಡುವೆ ಶಿವೂ ಭಾರತೀಯ ನಂಬಿಕೆಯನ್ನು ಗೌರವದಿಂದ ಕಾಣುವವನಾಗಿದ್ದರಿಂದ ಸೋಮುನನ್ನು ತನ್ನ ಮಾವನಿಗೆ ಪರಿಚಯಿಸಿ ಸೋಮುವಿಗೆ ಭಾರತೀಯ ಧರ್ಮ, ನಂಬಿಕೆ, ಸಂಪ್ರದಾಯದ ಮೌಲ್ಯವನ್ನು ತಿಳಿಸುತ್ತಾನೆ.

ಈ ಕತೆಯಲ್ಲಿ ಕತೆಗಾರ್ತಿ ಸೋಮುವನ್ನು ವಸಾಹತುಶಾಹಿಯ ಪ್ರಜ್ಞೆಯ ಭಾಗವಾಗಿ ನಿರೂಪಿಸಿದರೆ, ಶಿವೂ ಹಾಗೂ ಶಿವೂವಿನ ಮಾವ ಭಾರತೀಯ ಪ್ರಜ್ಞೆಯ ಭಾಗವಾಗಿ ನಿಲ್ಲುತ್ತಾರೆ. ಶಿವೂವಿನ ಮಾವನು ತನ್ನ ಅನುಭವ ಲೋಕದ ಮೂಲಕ ಭಾರತೀಯ ನೆಲದ ಸತ್ವದ ಮೀಮಾಂಸೆಯನ್ನು ಸೋಮುವಿನ ಅನುಭವ ಹಾಗೂ ತಿಳುವಿನ ನೆಲೆ ತರುವ ಮೂಲಕ ಸೋಮು ಭಾರತೀಯ ನಂಬಿಕೆ, ಸಾಂಪ್ರದಾಯಿಕ ಪರಂಪರೆಯನ್ನು ಗುಣಾತ್ಮಕವೆಂದು ಒಪ್ಪಿಕೊಳ್ಳುವ ನೆಲೆಯನ್ನು ಸ್ಥಳೀಯತೆ ಎಂದು ಕರೆಯಬಹುದು. ಸಿ.ಎನ್. ಜಯಲಕ್ಷ್ಮಿದೇವಿಯವರು ತಮ್ಮ ಕತೆಗಳಲ್ಲಿ ಭಾರತೀಯ ಜೀವನ ಮೌಲ್ಯ, ಆದರ್ಶ, ಪರಂಪರೆಯನ್ನು ಕತೆಯಲ್ಲಿ ಮರುಕಟ್ಟುವ ಮೂಲಕ ಸ್ಥಳೀಯತೆಯನ್ನು ನಿರೂಪಿಸುವ ಕಾರ್ಯವನ್ನು ಮಾಡುತ್ತಾರೆ.

**ಎಸ್. ಗೋಪಿಚಂದ ರಾವ್**

ಕೃಷಿ ಬದುಕಿನ ಮೀಮಾಂಸೆಯನ್ನು ಜನ ಬದುಕಿನ ಭಾಗವಾಗಿ ಕತೆಯಲ್ಲಿ ನಿರೂಪಸಿದ ಕತೆಗಾರ ಗೋಪಿಚಂದ ರಾವ್. ವಸಾಹತುಶಾಹಿ ಸಂದರ್ಭದಲ್ಲಿ ಕೈಗಾರಿಕೆ ಹಾಗೂ ಅಭಿವೃದ್ಧಿ ಪರಿಕಲ್ಪನೆಗಳು ಭಾರತೀಯ ಕೃಷಿ ವ್ಯವಸ್ಥೆಯನ್ನು ಹಾಗೂ ದೇವರು ದೈವ ನಂಬಿಕೆಯ ನೆಲೆಯಲ್ಲಿ ಪಲ್ಲಟವನ್ನು ಉಂಟುಮಾಡುವ ಈ ಪಲ್ಲಟದ ಸ್ವರೂಪವನ್ನು ಭಾರತೀಯ ನೆಲದ ಸತ್ವದೊಂದಿಗೆ ಅನುಸಂಧಾನ ಮಾಡುವ ನೆಲೆಯಲ್ಲಿ ಕತೆಯ ಆಶಯವನ್ನು ನಿರೂಪಿಸುತ್ತಾರೆ.

'ಮುನಿಸು ಮುರಿದ ಮಾರಿ' ಕತೆಯು ಕೃಷಿ ಹಾಗೂ ಸಂಸಾರವನ್ನು ಕಟ್ಟುವ ಅಭಿವ್ಯಕ್ತಿಯನ್ನು ಕೇಂದ್ರೀಕರಿಸುತ್ತದೆ. ಮಂಗಳ ತನ್ನ ಗದ್ದೆಯನ್ನು ಅತ್ಯಂತ ಜಾಗರೂಕನಾಗಿ

ನೋಡಿಕೊಂಡರು. ಒಂದಲ್ಲ ಒಂದು ರೀತಿಯಲ್ಲಿ ಬೆಳೆಗಳು ನಾಶವಾಗುತ್ತಿತ್ತು. ಊರಿನ ಎಲ್ಲಾ ಸ್ಥಿತಿ ಹೀಗೆ ಆತಿತ್ತು. ಊರಿನ ಹಿರಿಯರು ಮಾರಿಗೆ ಪೂಜೆ ಮಾಡಬೇಕೆಂದು ನಿರ್ಧರಿಸಿ. ಬಲಿ, ಪೂಜೆಯಂತಹ ಸೇವೆಯ ದಿನವನ್ನು ಗೊತ್ತು ಮಾಡಿ ಮಾರಿಯ ಪೂಜೆ ಮಾಡುವುದು. ಮಂಗಳ ತನ್ನ ಹೆಂಡತಿಯನ್ನು ರಾತ್ರಿ ಒಂದು ಗಳಿಗೆ ಮಾರಿಪೂಜೆಗೆ ಹೋಗೆಂದು ಹೇಳಿ ಹೊಲ ಕಾಯಲು ಹೋಗುವುದು. ಮಾಲತಿ ತನ್ನ ಮಕ್ಕಳನ್ನು ಮಲಗಿಸಿ ಮಾರಿಯನ್ನು ನೆನೆದು ಪೂಜೆಗೆ ತೆರಳಬೇಕೆನ್ನುವಾಗ ಕಳ್ಳರು ಮನೆಯ ಗೋಡೆಯ ಮೂಲಕ ಖನ್ನ ಹಾಕುವುದನ್ನು ನೋಡಿದ ಮಾಲತಿ ಧೈರ್ಯದಿಂದ ಕಳ್ಳನ ಕಾಲಿಗೆ ದೊಣ್ಣೆಯಿಂದ ಹೊಡೆದು ಕಳ್ಳ ಕಳ್ಳ ಎಂದು ಕೂಗಿ ಜನರನ್ನು ಸೇರಿಸಿ ಕಳ್ಳನನ್ನು ಹಿಡಿಯುವುದು. ನಂತರ ಊರಿನಲ್ಲಿ ಯಾವುದೇ ಕಳ್ಳತನಗಳು ಆಗದೆ ಆರೋಗ್ಯ ಪೂರ್ಣ ಸಮಾಜವಾಗುವುದನ್ನು ಕತೆಗಾರರು ನಿರೂಪಿಸುತ್ತಾರೆ. ಕತೆಯು ಸ್ಥಳೀಯ ನಂಬಿಕೆಯನ್ನು ತಾಜವಾಗಿ ಉಳಿಸಿಕೊಂಡಿರುವುದನ್ನು ಗಮನಿಸಬಹುದು.

'ಚಂದ್ರನ ಚಾರು ಹಾಸ' ಕತೆಯು ವಸಾಹತುಶಾಹಿಯ ಅಭಿವೃದ್ಧಿ ಚಿಂತನೆಗಳು ಭಾರತೀಯ ಜೀವನ ವಿಧಾನವನ್ನು ದೇವರು, ನಂಬಿಕೆ ಹಾಗೂ ಕೃಷಿಭೂಮಿಯನ್ನು ನಾಶಮಾಡಿ ವ್ಯಕ್ತಿಯನ್ನು ಸತ್ವಹೀನವಾಗಿ ಮಾಡಿದ ಬಗೆಯನ್ನು ತಾತ್ವಿಕವಾಗಿ ಮಂಡಿಸುತ್ತಾರೆ. ಬೂದನು ನದಿಯ ನೆರೆಯ ಆಕ್ರಮಣಕ್ಕೆ ಒಳಗಾಗಿ ತನ್ನ ದನ ಕರು ಹಾಗೂ ಹೊಲದ ಬೆಳೆಯನ್ನು ಕಳೆದುಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ಸರ್ಕಾರ ನದಿಗೆ ಅಡ್ಡಲಾಗಿ ಅಣೆಕಟ್ಟು ಕಟ್ಟುವ ಕಾರ್ಯವನ್ನು ಆರಂಭಿಸುತ್ತದೆ, ಬೂದನು ಅಣೆಕಟ್ಟಿನ ಕೆಲಸದಲ್ಲಿ ಭಾಗಿಯಾಗಿ ಕೂಲಿ ಪಡೆಯುತ್ತಾನೆ. ಅಣೆಕಟ್ಟೆಯ ಕಾರ್ಯ ಪೂರ್ಣಗೊಂಡಂತೆ ಸರ್ಕಾರದ ಅಧಿಕಾರಿಗಳು ಬೂದನ ಭೂಮಿಯನ್ನು ಗುರುತು ಮಾಡುತ್ತಾರೆ. ಅಣೆಕಟ್ಟೆಯ ನೀರು ಇಲ್ಲಿವರೆಗೆ ಬರುತ್ತದೆ ಎಂದೂ ಈ ಭೂಮಿಗೆ ಪರಿಹಾರ ನೀಡುವ ಸರ್ಕಾರದ ನಿಯಮವನ್ನು ಹಾಗೂ ಅಣೆಕಟ್ಟಿನ ಉಪಯೋಗವನ್ನು ಸರ್ಕಾರಿ ಅಧಿಕಾರಿಗಳು ಬೂದನಿಗೆ ತಿಳುಸುತ್ತಾರೆ. ಪರಿಹಾರವು ಬೇಡ, ಅಣೆಕಟ್ಟಿನ ನೀರೂ ಬೇಡ ಎಂಬ ನಿಲುವಿಗೆ ಬಂದು ನಿಲ್ಲುತ್ತಾನೆ. ಸರ್ಕಾರ ಅಧಿಕಾರಿಗಳು ಶಿವದೇವಾಲಯವನ್ನು ಅಣೆಕಟ್ಟಿನ ಮೇಲ್ ಪ್ರದೇಶದಲ್ಲಿ ನಿರ್ಮಾಣ ಮಾಡಬೇಕೆಂದು ಆದೇಶ ಮಾಡುತ್ತಾರೆ. ಆದರೆ ಆ ದೇವಸ್ಥಾನದ ಪೂಜಾರಿ ಊರನ್ನು, ಗಡಿಯನ್ನು ಕಾಯುವ ಶಿವನನ್ನು ಬದಲಾಯಿಸುವುದು ಸರಿಯಲ್ಲ ಎಂದು ವಾದಿಸುತ್ತಾನೆ. ಆದರೂ ವಸಾಹತುಶಾಹಿಯು ಆಡಳಿತ ಧೋರಣೆಯಿಂದ ಶಿವನಗುಡಿಯು ಮೂಲಸ್ಥಾನದಿಂದ ಬೇರೆಕಡೆಗೆ ವರ್ಗಾವಣೆಯಾಗುತ್ತದೆ.

ಕತೆಯಲ್ಲಿ ಕತೆಗಾರರು ಪರಂಪರೆ ಹಾಗೂ ಆಧುನಿಕತೆಯನ್ನು ಮುಖಾಮುಖಿಯಾಗಿಸುತ್ತಾರೆ ಮತ್ತು ಸ್ಥಳೀಯ ಜನರ ಬದುಕಿನ ವಿನ್ಯಾಸವನ್ನು ಬೂದ ಹಾಗೂ ಪೂಜಾರಿಯ ಮೂಲಕ ಅಭಿವ್ಯಕ್ತಿಸುತ್ತಾರೆ. ವಸಾಹತುಶಾಹಿಯ ಅಭಿವೃದ್ಧಿ ಪರಿಕಲ್ಪನೆಯ ನೆಲೆಯಲ್ಲಿ ಹುಟ್ಟಿಕೊಂಡ 'ಅಣೆಕಟ್ಟು' ಸ್ಥಳೀಯತೆಯ ಸತ್ವವನ್ನು ನಾಶ ಮಾಡಿದ ಬಗೆಯನ್ನು ಕತೆ ಒಳಗೊಳ್ಳುತ್ತದೆ.

'ಒಡೆದು ಬೆಸೆ ಗಡಿಗೆ' ಕತೆಯು ಸಂಬಂಧವನ್ನು ಬೆಸೆಯುವ ಆಶಯವನ್ನು ಕೇಂದ್ರೀಕರಿಸುತ್ತದೆ. ಮಂಜು ಹಾಗೂ ರಾಜು ಒಂದೇ ಶಾಲೆಯ ವಿದ್ಯಾರ್ಥಿಗಳಾಗಿದ್ದು ಇಬ್ಬರೂ ಆಟದ ಕಾರಣದಿಂದ ಶತ್ರುಗಳಾಗಿ ಜಗಳ, ದ್ವೇಷದ ನೆಲೆಯಲ್ಲಿ ಇರುವುದನ್ನು ಗಮನಿಸಿದ ಗೋಪಾಲಯ್ಯ ಮೇಸ್ತ್ರು ಇಬ್ಬರನ್ನು ಮಿತ್ರರಾಗಿ ಬೆಸೆಯುವ ಕಾರ್ಯ ಮಾಡುತ್ತಾರೆ. ಕತೆಗಾರರು ನಿರೂಪಿಸುವ ಸಂಬಂಧವನ್ನು ಕೂಡಿಸುವಂತಹ ಸತ್ವವನ್ನು ಸ್ಥಳೀಯತೆ ಎಂದು ಕರೆಯಬಹುದು. ಗೋಪಿಚಂದರಾವ್ ಅವರ ಕತೆಗಳು ಕೃಷಿ ಮೀಮಾಂಸೆ ದುಡಿಮೆಯ ಬದುಕಿನ ವಿನ್ಯಾಸವನ್ನು ಪರಂಪರೆಯ ಗುಣಾತ್ಮಕ ನೆಲೆಯಿಂದ ನಿರೂಪಿಸುವ ಬಗೆಯೇ ಸ್ಥಳೀಯತೆಯಾಗಿದೆ.

**ಕೃಷ್ಣ ಕೊಲ್ಹಾರ ಕುಲಕರ್ಣಿ**

ಜನರ ಬದುಕನ್ನು ತನ್ನದೆ ಭಾಷಾ ಅಭಿವ್ಯಕ್ತಿಯ ಮೂಲಕ ಕತೆಯನ್ನು ರಚಿಸಿದವರು ಕೃಷ್ಣ ಕೋಲ್ಹಾರ ಕುಲಕರ್ಣಿ. ಇವರ ಕತೆಯ ಲೋಕ ಬಡತನ, ಹಸಿವು, ದುಡಿಮೆ, ಸಂಬಂಧ ಹಾಗೂ ಮಾನವೀಯ ಸತ್ವದ ಅಭಿವ್ಯಕ್ತಿಗಳು, ಇವರ ಕತೆಗಳಲ್ಲಿ ಸ್ಥಳೀಯತೆ ಎನ್ನುವುದು ಜೀವನ ಮೀಮಾಂಸೆಯ ಭಾಗವಾಗಿ ಅಭಿವ್ಯಕ್ತವಾಗಿದೆ. 'ಸೂತಕ' ಎಂಬ ಕತೆಯಲ್ಲಿ ಸಾವಿಗೆ ಕಾರಣವನ್ನು ಶೋಧಿಸುವ ಜೊತೆಗೆ ಗಂಡ ಹೆಂಡತಿ ದುಡಿಮೆಯ ಬದುಕಿನ ವಿನ್ಯಾಸವನ್ನು ಮಂಡಿಸುತ್ತದೆ. ಸೋನಿ ಹಾಗೂ ಅಣ್ಣಯ್ಯ ಮಗ ಬಂಡ್ಯಾನ ಸಾವು ತಂದೆ ತಾಯಿಗಳಿಗೆ ಆಗಾಧವಾದ ದುಃಖವನ್ನು ಹುಟ್ಟು ಹಾಕುತ್ತದೆ. ಹಾಗೂ ಬಂಡ್ಯಾನ ಸಾವಿನಿಂದ ನೊಂದು ಅರೆಜೀವವಾಗಿರುವ ಸೋನಿಯನ್ನು ಸಮಾಧಾನ ಪಡಿಸಲು ಬಂದ ನೆರೆಹೊರೆಯವರು ಒಂದೊಂದು ರೀತಿಯಲ್ಲಿ ಪ್ರಶ್ನಿಸಿ ದುಃಖವನ್ನು ದುಪ್ಪಟ್ಟು ಮಾಡುತ್ತಾರೆ. ಕತೆಯು ತಾಯಿಯ ನೋವಿನ ಸ್ಥಿತಿಯನ್ನು ಸೂಕ್ಷ್ಮವಾಗಿ ಗ್ರಹಿಸುವ ಜೊತೆ ಸೋನಿ-ಅಣ್ಣಯ್ಯನ ನೀರು ಹೊರುವ ಕಾಯಕವನ್ನು ಸಾಂದ್ರವಾಗಿ ಚಿತ್ರಿಸುತ್ತದೆ. ಕತೆಗಾರರು ಕತೆಯಲ್ಲಿ ಅಭಿವ್ಯಕ್ತಿಸುವ ಸೋನಿ ಹಾಗೂ ಅಣ್ಣಯ್ಯ ಬದುಕು,

ನೀರಿನ ಕಾಯಕದ ವಿನ್ಯಾಸ, ಬಂಡ್ಯಾನ ಸಾವನ್ನು ಸಮಾಜ ಗ್ರಹಿಸುವ ಬಗೆಗಳನ್ನು ಸ್ಥಳೀಯತೆಯ ರೂಪಗಳೆಂದು ಕರೆಯಬಹುದು.

'ಅಕಳಂಕಿನಿ' ಎಂಬ ಕತೆಯು ಪ್ರೀತಿಸಿದ ಗಂಡು ಹೆಣ್ಣುಗಳನ್ನು ಒಟ್ಟಿಗೆ ಬೆಸೆಯುವ ತಾತ್ವಿಕತೆಯನ್ನು ಮಂಡಿಸುತ್ತದೆ. ಶ್ಯಾಮ ಹಾಗೂ ವಿಜಯಳ ಪ್ರೀತಿ ವಿವಾಹದ ಗಡಿಗೆ ಬರುವಾಗ ವಿಜಯಳ ಬಗ್ಗೆ ಕೆಟ್ಟ ಅಭಿಪ್ರಾಯವು ಹುಟ್ಟಿಕೊಂಡು ಅವಳ ಬದುಕಿನ ನೆಮ್ಮದಿಯನ್ನು ಪಲ್ಲಟಿಸುತ್ತದೆ. ವಿಜಯಳ ಬಗೆಗಿನ ಕೆಟ್ಟ ಆರೋಪಗಳು ಶ್ಯಾಮನ ತಾಯಿಗೂ ಶ್ಯಾಮನಿಗೂ ತಿಳಿಯುತ್ತದೆ. ಶ್ಯಾಮ ವಿಜಯಳನ್ನು ತಪ್ಪಿತಸ್ಥೆ ಎಂಬ ಭಾವನೆಯಲ್ಲಿ ಗ್ರಹಿಸುವ ಜೊತೆಗೆ ವಿಜಯಳನ್ನು ಹೀಗೇಕೆ ಮಾಡಿದೆ ಎಂದೂ ಪ್ರಶ್ನಿಸುತ್ತಾನೆ. ವಿಜಯ ನಡೆದ ಘಟನೆಯನ್ನು ದಿಟ್ಟವಾಗಿ ಶ್ಯಾಮನ ಮುಂದಿರಿಸುತ್ತಾಳೆ. ಎಲ್ಲಾ ವಿಚಾರವನ್ನು ತಿಳಿದ ಶ್ಯಾಮ ವಿಜಯಳನ್ನು ಅಪ್ಪಿಕೊಳ್ಳುತ್ತಾನೆ.

ಕತೆಗಾರರು ವಿಜಯ ಹಾಗೂ ಶ್ಯಾಮನನ್ನು ಬೆಸೆಯುವ ನೆಲೆಯ ತಂತ್ರವನ್ನು ನಿರೂಪಿಸುತ್ತಾರೆ. ಕತೆಯಲ್ಲಿ ಕಾಣುವ ವಿಜಯ ಹಾಗೂ ಶ್ಯಾಮ ಪ್ರೀತಿ, ಹೆಣ್ಣೊಬ್ಬಳು ತನಗೆ ಬಂದಿರುವ ಅಪವಾದವನ್ನು ದಿಟ್ಟತನದಿಂದ ತನ್ನ ಪ್ರಿಯಕರನ ಮುಂದಿಡುವ ನೆಲೆಗಳನ್ನು ಸ್ಥಳೀಯತೆಯ ಅಭಿವ್ಯಕ್ತಿ ಎಂದು ಕರಯಬಹುದು. 'ಜೀವ ನಾಡಿಯ ಮಿಡಿತ' ಎನ್ನುವ ಕತೆಯು ಸಂಸಾರವೊಂದರ ಹೆಣ್ಣು ಗಂಡುಗಳನ್ನು ಬೆಸೆಯುವ ಭೂಮಿಕೆಯನ್ನು ಹೊಂದಿದೆ. ಗುರುವಣ್ಣ ತಂದೆ ತಾಯಿಯ ಒತ್ತಡಕ್ಕೆ ಮಣಿದು ಸೋನಾಳನ್ನು ವಿವಾಹವಾಗುತ್ತಾನೆ. ಸೋನ ಲಗ್ನವಾಗಿ ಆರೇ ತಿಂಗಳಿಗೆ ಒಂದು ಮಗುವನ್ನು ಹಡೆಯುತ್ತಾಳೆ. ಈ ನಡುವೆ ಸೋನಾಳ ಮೇಲೆ ವ್ಯಭಿಚಾರಿಣಿ ಎಂಬ ಅಪವಾದ ಬರುವ ಜೊತೆಗೆ ಗುರುವಣ್ಣನ ತಾಯಿ ರಮಾಬಾಯಿ ಸೋನಾಳನ್ನು ಮಾನಗೆಟ್ಟವಳೆಂದು, ಮನೆತನದ ಮಾನ ತೆಗೆದವಳೆಂದು ನಿರ್ಧರಿಸಿ ಗುರುವಣ್ಣನಲ್ಲಿ ತವರು ಮನೆಗೆ ಕಳಿಸಿ ಬರುವಂತೆ ಒತ್ತಾಯಿಸುತ್ತಾಳೆ. ಗುರುವಣ್ಣನ ಸೋನಾಳನ್ನು ತವರು ಮನೆಗೆ ಬಿಟ್ಟು ಇವಳ ಸಂಬಂಧ ಇಂದಿಗೆ ಕೊನೆ ಇನ್ನು ಮುಂದುವರಿಸುವುದು ಬೇಡವೆಂದು ಹೇಳಿ ಹಿಂತಿರುಗುತ್ತಾನೆ.

ರಮಾಬಾಯಿ ಗುರುವಣ್ಣನಿಗೆ ಲಗ್ನ ಮಾಡಲು ತಯಾರಿ ನಡೆಸಿದ್ದನ್ನು ಗುರುವ ದೂರೀಕರಿಸುತ್ತಾನೆ, ಹಾಗೂ ತನ್ನ ಹೆಂಡತಿಯ ತಪ್ಪು ಸರಿಗಳನ್ನು ವಿಮರ್ಶೆಗೆ ಒಳಪಡಿಸುತ್ತಾನೆ. ಪಕ್ವವಾದ ಉತ್ತರ ಸಿಗದೆ ತನ್ನ ಬದುಕಿನಲ್ಲಿ ಆಸಕ್ತಿ ಕಳೆದುಕೊಂಡು ದುಡಿಯಲು ಆರಂಭಿಸುತ್ತಾನೆ. ಗುರುವ ಗೆಳೆಯ ರಘು ಸೋನಾಳನ್ನು ಕರೆತಂದು ಸಂಸಾರ ಆರಂಭಿಸುವಂತೆ ಸಲಹೆ ನೀಡುತ್ತಾನೆ. "ನೀನು ಹೆಂಡತಿಯನ್ನು ಬಿಟ್ಟು ನಾಲ್ಕು

ವರ್ಷದಲ್ಲಿ, ಭಾರೀ ಸೂಳೆಯ ಮನೆಗೆ ಹೋಗಿದ್ದೀಯ, ಅಲ್ಲಿಯ ಬದುಕು ಸರಿ ಎನಿಸಿತೆ. ನಿನ್ನ ಹೆಂಡತಿ ಅಂತಹ ತಪ್ಪು ಮಾಡಿದ್ದಳೇ, ಎಲ್ಲೋ ಮನಸು ತಪ್ಪಿ ಜಾರಿದ್ದಾಳೆ. ಮನ್ನಿಸಿ ಬಿಡು. ಇನ್ನೊಮ್ಮೆ ನಿನ್ನಿಂದ ದೂರವಾಗುವಳು ಎನ್ನುತ್ತೀಯ" ಎಂದು ಪ್ರಶ್ನಿಸಿದ ರಘುವಿಗೆ ಮೌನವಾಗಿ ಉತ್ತರಿಸಿದ ಗುರುವಣ್ಣ ಸೋನಾಳನ್ನು ಕರೆತಂದು ಬದುಕಲಾರಂಭಿಸಿದ.

ಕತೆಗಾರರು ಗುರುವಣ್ಣ ಹಾಗೂ ಸೋನಾಳ ದೂರವಾದ ಬದುಕನ್ನು ಬೆಸೆಯುವ ಕಾರ್ಯವನ್ನು ಮಾಡುತ್ತಾರೆ. ಗುರುವಣ್ಣನಿಗೆ ರಘುವಿನ ಮೂಲಕ ಹೆಣ್ಣಿನ ತಪ್ಪನ್ನು ಗಂಡಿನ ತಪ್ಪುಗಳನ್ನು ಗುರುತಿಸಿ ಸೋನಾ ಹಾಗೂ ಗುರುವಣ್ಣನನ್ನು ಒಂದು ಸಂಸಾರದ ಒಳಗೆ ತರುತ್ತಾರೆ. ಈ ರೀತಿಯ ಸಂಬಂಧವನ್ನು ಬೆಸೆಯುವ ಕಥನ ಗುಣವು ನಮ್ಮ ನೆಲದ ಜೀವನ ಮೌಲ್ಯವಾಗಿದೆ. ಇದನ್ನೇ ಸ್ಥಳೀಯತೆ ಎಂದು ಕರೆಯಬಹುದು.

**ಮೇವುಂಡಿ ಮಲ್ಲಾರಿ**

ವಸಾಹತುಶಾಹಿಯ ಧೋರಣೆಗೆ ಭಾರತೀಯ ಸಮಾಜವು ವಿಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸಿತು, ಈ ಪ್ರತಿಕ್ರಿಯೆಯನ್ನು ಮೇವುಂಡಿ ಮಲ್ಲಾರಿಯವರು ಕತೆಗಳ ಮೂಲಕ ಹಿಡಿದಿಡುವ ಕಾರ್ಯವನ್ನು ಮಾಡುತ್ತಾರೆ. ಇವರ ಬಹುತೇಕ ಕತೆಗಳು ಸ್ಥಳೀಯ ಬದುಕಿನ ಸತ್ವವನ್ನು ಕಾಣಿಸುತ್ತವೆ, ಕತೆಗಾರರ ಕಾಲಘಟ್ಟದಲ್ಲಿ ಕಾಣಿಸಿಕೊಂಡ ನಗರೀಕರಣ, ಮತಾಂತರ, ಕೃಷಿಯ ವಾಣಿಜ್ಯೀಕರಣಗಳನ್ನು ಭಾರತೀಯ ಸಮಾಜ ಒಪ್ಪಿಕೊಂಡ ಹಾಗೂ ನಿರಾಕರಿಸಿದ ಬಗೆಯನ್ನು ಕತೆಗಳು ಮೂಲಕ ಅಭಿವ್ಯಕ್ತಿಸುತ್ತಾರೆ.

'ಬೆಳಕಿನ ಕತ್ತಲೆ' ಕತೆಯು ಸ್ಥಳೀಯ ವ್ಯವಹಾರಿಕ ವೃತ್ತಿಯ ಮೀಮಾಂಸೆಯನ್ನು ಆಶಯವಾಗಿ ಹೊಂದಿದೆ ಅಲ್ಲದೆ ಜನಪದ ಹಾಗೂ ಶಿಷ್ಟ ಬರಹದ ನಡುವಿನ ಮುಖಾಮುಖಿಯು ಸ್ಥಳೀಯ ಬದುಕಿನ ವಿನ್ಯಾಸದಲ್ಲಿ ಕಾಣಿಸಿಕೊಳ್ಳುತ್ತದೆ. ಮಲ್ಲಪ್ಪನ ಕುಟುಂಬವು ಅವಲಕ್ಕಿ ಮೆಟ್ಟಿ, ಊರೂರು ವ್ಯಾಪಾರ ಮಾಡಿಕೊಂಡು ಬದುಕಿನ ದಾರಿಯನ್ನು ಹಿಡಿದುಕೊಂಡಿದೆ. ಮಲ್ಲಪ್ಪನಿಗೆ ಊರಿನ ಎಲ್ಲಾ ಜನರ ಸ್ವಭಾವವು ಗೊತ್ತು. ಅವಲಕ್ಕಿ ನೀಡಿ ಕುತ್ತಿಗೆ ಹಿಡಿದು ಹಣಕೇಳುವ ವ್ಯಕ್ತಿ ಮಲ್ಲಪ್ಪನಾಗಿರಲಿಲ್ಲ. ೧ ರೂ.ಗೆ ೯ ಸೇರು ಅವಲಕ್ಕಿ ನೀಡುತ್ತಿದ್ದ. ಹಣವಿದ್ದರೆ ಅವಲಕ್ಕಿ ಪಡದ ಕೂಡಲೇ ನೀಡುತ್ತಿದ್ದರು. ಇಲ್ಲದಿದ್ದರೆ ಲೆಕ್ಕದ ಪುಸ್ತಕದಲ್ಲಿ ಬರೆದುಕೊಂಡು ಕೊನೆಗೆ ಲೆಕ್ಕ ಮಾಡಿ ಮಲ್ಲಪ್ಪನಿಗೆ ಹಣ ನೀಡುತ್ತಿದ್ದರು, ಮಲ್ಲಪ್ಪನ ವ್ಯವಹಾರದಲ್ಲಿ ಬರಹದಂತಹ ಯಾವ ತಂತ್ರವು ಇರಲಿಲ್ಲ, ತಾನು ಎಷ್ಟು

ಅವಲಕ್ಕಿ ಕೊಟ್ಟಿದ್ದೇನೆ. ಅವರು ಎಷ್ಟು ಹಣ ನೀಡಬೇಕು ಎಂಬುವುದನ್ನು ನೆನಪಿನಲ್ಲಿಯೇ ಲೆಕ್ಕ ಇಟ್ಟುಕೊಂಡು ಇಲ್ಲವೇ ಊರ ಮಂದಿ ಬರೆದಿಟ್ಟಿದ್ದನ್ನು ಲೆಕ್ಕ ಮಾಡಿಸಿಕೊಂಡು ಹಣವನ್ನು ಪಡೆಯುವ ಮಲ್ಲಪ್ಪನಿಗೆ ನಂಬಿಕೆಯೇ ಪ್ರಧಾನವಾಗಿತ್ತು. ಪುಸ್ತಕದಲ್ಲಿ ಬರೆದಿಟ್ಟ ಮಂದಿಯ ಲೆಕ್ಕ ಎಂದಿಗೂ ಸುಳ್ಳಾಗುವುದಿಲ್ಲ ಎಂದು ನಂಬಿ ಕೊಂಡಿದ್ದ ಕರಿಯಪ್ಪ ಗೌಡರು ಮಲ್ಲಪ್ಪನ ಹಣವನ್ನು ಲೆಕ್ಕ ಮಾಡಿ ೨ ರೂ ಕೊಡಬೇಕೆಂದು ೨ ರೂಪಾಯಿಯನ್ನು ಕೊಟ್ಟರು, ನಿಜವಾಗಿಯು ಅವರ ಲೆಕ್ಕದ ಪುಸ್ತಕದಲ್ಲಿ (೨+೧+೯) ಎಂದಿತ್ತು, ಮುಗ್ಧನಾದ ಮಲ್ಲಪ್ಪ ಬರಹದಲ್ಲಿ ಇದ್ದದ್ದನ್ನು ನೋಡಿ ಹೇಳಿದ ಲೆಕ್ಕವನ್ನು ಸರಿ ಎಂದು ಒಪ್ಪಿಕೊಳ್ಳುತ್ತಾನೆ, ಮಲ್ಲಪ್ಪನಿಗೆ ವ್ಯವಹಾರದ ತಳಕು ಬಳಕು ಕೌಶಲ್ಯವನ್ನು ಲೆಕ್ಕವನ್ನು ಬರೆದಿಡುವ ಕ್ರಮವನ್ನು ಕಲಿ ಎಂದು ಯಾರಾದರೂ ಹೇಳಿದರೆ 'ಕಲಿತರೇ ಬಂದಿತೆ? ಸತ್ಯಕ್ಕೆ ಸಾವಿಲ್ಲ ಎಂಬುವುದನ್ನು ನಂಬಿದ್ದೇನೆ' ಎನ್ನುವನು.

ಕತೆಗಾರರು ಮಲ್ಲಪ್ಪನ ಮೂಲಕ ಸ್ಥಳೀಯ ವ್ಯವಹಾರವನ್ನು ನಂಬಿಕೆ, ಸತ್ಯದ ನಡೆಯನ್ನು ತಾತ್ವೀಕರಿಸುತ್ತಾರೆ. ಮಲ್ಲಪ್ಪನ ವ್ಯಾಪಾರ, ಮುಗ್ಧತೆ ಹಾಗೂ ಅವಲಕ್ಕಿ ವ್ಯಾಪಾರವನ್ನು ಅವನ ಬದುಕನ್ನು ಮೊದಲಿನಿಂದಲೂ ಕಾಪಾಡಿಕೊಂಡು ಬಂದ ಬಗೆಯನ್ನು ಸ್ಥಳೀಯತೆ ಎಂದು ಕರೆಯಬಹುದು. 'ಮಾತನಾಡುವ ದೇವರು' ಕತೆಯು ಕೃಷಿ ಬದುಕಿನ ಮೀಮಾಂಸೆಯನ್ನು ಅನುಸಂಧಾನ ಮಾಡುತ್ತದೆ. ಕೃಷಿ ಜೊತೆಗೆ ಬದುಕು ಕಟ್ಟಿ ಕೊಂಡಿದ್ದ 'ಸಕ್ಕರಮ್ಮ' ತಾನು ಬೆಳೆದ ತರಕಾರಿ ಹಾಗೂ ಸೊಪ್ಪುಗಳನ್ನು ಹೇಗೆ ಕಾಪಾಡಿಕೊಳ್ಳುತ್ತಿದ್ದಳು ಎಂಬುವುದನ್ನು ಈ ಕತೆಯು ಅಭಿವ್ಯಕ್ತಿಸುತ್ತದೆ. ಸಕ್ಕರವ್ವ ತಾನು ಬೆಳೆದ ಸೌತೆ ಇತ್ಯಾದಿ ತರಕಾರಿಗಳನ್ನು ಊರ ಮಂದಿಯಿಂದ ರಕ್ಷಿಸಲು ದಿನವಿಡಿ ತೋಟದಲ್ಲಿ ಕಾಯುತ್ತಿದ್ದಳು ಹಾಗೂ ಯಾರಾದರೂ ತೋಟಕ್ಕೆ ಕಾಲಿಟ್ಟರೆ ಬೈಗುಳದಿಂದನೆ ಓಡಿಸುತ್ತಿದ್ದಳು. ತನ್ನ ತೋಟದ ಗಡಿಯ ಸುತ್ತಲು ಮುಳ್ಳುಗಳನ್ನು ಹಾಕಿ ಯಾರು ಹೆಜ್ಜೆ ಇಡದಂತ ವ್ಯವಸ್ಥೆಯನ್ನು ಮಾಡಿಕೊಂಡು ತನ್ನ ಬೆಳೆಯನ್ನು ಕಾಪಾಡಿಕೊಂಡು ಬದುಕುತ್ತಿದ್ದಳು. ಊರಗೌಡರನ್ನು ತನ್ನ ದೇವರೆಂದು ಕರೆಯುತ್ತಿದ್ದ ಸಕ್ಕರವ್ವ ಅವರ ಮನೆಗೆ ದಿನಕ್ಕೆ ಐದುಬಾರಿ ತಿರುಗಾಡಿದರೂ ಒಂದು ಸೌರೆಕಾಯಿಯು ತೆಗೆದುಕೊಂಡು ಹೋಗುತ್ತಿರಲಿಲ್ಲ. ಗೌಡರು ಕಂಡಾಗ ನನ್ನ ದೇವರು ತೋಟಕ್ಕೆ ಬಂದು. ಸೌತೆಕಾಯಿ ಕೊಂಡು ಹೋಗಬಾರದೆ ಎನ್ನುತ್ತಿದ್ದಳು. ಗೌಡರು ಅವಳ ತೋಟದ ಕಡೆ ಹೋದರೆ ಮರೆಯಲ್ಲಿ ಮರೆಯಾಗಿ ಸಕ್ಕರವ್ವ ಗೌಡರಿಗೆ ಕಾಣುತ್ತಿರಲಿಲ್ಲ.

ಕತೆಗಾರರು ಸ್ತ್ರೀಯೊಬ್ಬಳು ಬೆಳೆಯನ್ನು ಕಾಪಾಡಿಕೊಳ್ಳುವ ಹಾಗೂ ಅವಳ ಬದುಕನ್ನು

ಕಟ್ಟಿಕೊಳ್ಳಲು ಅವಳು ರೂಪಿಸಿದ ತಂತ್ರವನ್ನು ಸ್ಥಳೀಯತೆಯ ನೆಲೆಯಲ್ಲಿ ಅಭಿವ್ಯಕ್ತಿಸುತ್ತಾರೆ. ಮೇವುಂಡಿ ಮಲ್ಲಾರಿಯವರು ತಮ್ಮ ಕತೆಗಳಲ್ಲಿ ಜನ ಬದುಕಿನ ಸತ್ವವನ್ನು, ನಂಬಿಕೆ, ಸತ್ಯ, ಜೀವನ ಮೌಲ್ಯವನ್ನು ಗುಣಾತ್ಮಕವಾಗಿ ಅಭಿವ್ಯಕ್ತಿಸುತ್ತಾರೆ. ವಸಾಹತುಶಾಹಿಯು ಮತಾಂತರದ ಮೂಲಕ ಸಮಾನತೆ ಹಾಗೂ ಸುಖಮಯ ಜೀವನವನ್ನು ನೀಡುತ್ತದೆ. ಎಂಬ ಗ್ರಹಿಕೆಯನ್ನು 'ದೇವರ ಸನ್ನಿಧಾನಕ್ಕೆ' ಎಂಬ ಕತೆಯಲ್ಲಿ ನಿರಾಕರಿಸುವ ಮೂಲಕ ಭಾರತೀಯ ಪರಂಪರೆಯನ್ನು ಕತೆಯ ಕೇಂದ್ರ ಅಭಿವ್ಯಕ್ತಿಯಾಗಿ ನಿರೂಪಿಸಿದನ್ನು ಕಾಣಬಹುದು.

**ಶಾರದಾ ಜಡೆ**

ಸ್ತ್ರೀ ಸಂವೇದನೆಯ ಜೊತೆಗೆ ಹೆಣ್ಣು ಒಬ್ಬಳ ಬದುಕಿನ ವಿನ್ಯಾಸವನ್ನು ಕತೆಯ ಮೂಲಕ ಸಾಂದ್ರವಾಗಿ ಕಟ್ಟಿಕೊಟ್ಟ ಕತೆಗಾರ್ತಿ ಶಾರದಾ ಜಡೆ. ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣಿನ ಸ್ಥಾನವನ್ನು, ಜಾತಿ ವ್ಯವಸ್ಥೆಯ ಗ್ರಹಿಕೆಯನ್ನು ವಿಮರ್ಶೆಗೆ ಒಡ್ಡುವ ಕಾರ್ಯವನ್ನು ಕತೆಗಳು ಮೂಲಕ ಮಾಡುವ ಶಾರದಾ ಜಡೆಯವರು ಮುಖ್ಯವಾಗಿ ಹೆಣ್ಣಿನ ಅಸ್ಮಿತೆಯ ನೆಲೆಯಲ್ಲಿ ಸ್ಥಳೀಯತೆಯನ್ನು ಗುರುತಿಸುತ್ತಾರೆ.

'ನವರತ್ನದ ಕಡಗ' ಕತೆಯು ಎರಡು ಕುಟುಂಬವನ್ನು ಒಟ್ಟಿಗೆ ಬೆಸೆಯುವ ಭೂಮಿಕೆಯನ್ನು ಹೊಂದಿದೆ. ದುಡಿಮೆಯು ವಿನ್ಯಾಸವನ್ನು ಚರ್ಚೆ ಮಾಡುವ ಕತೆಯು ಸ್ಥಳೀಯತೆಯ ಸ್ವರೂಪವನ್ನು ನಿರೂಪಿಸುತ್ತದೆ. ರಾಮಣ್ಣ ತನ್ನ ಬಡತನದ ಜೀವನದಿಂದ ರಾಯರ ಮನೆಯಲ್ಲಿ ದುಡಿಮೆಯನ್ನು ಅತ್ಯಂತ ಪ್ರಾಮಾಣಿಕತೆ ಹಾಗೂ ನಂಬಿಕೆಯಿಂದ ನಿರ್ವಹಿಸುತ್ತಿರುತ್ತಾನೆ. ರಾಯರ ಹೆಂಡತಿಯ ನವರತ್ನದ ಕಡಗವನ್ನು ಕಳೆದುಕೊಂಡು 'ರಾಮಣ್ಣನೇ ಕಳ್ಳನೆಂದು' ಆರೋಪಿಸಿ, ಕೋರ್ಟು ಮೂಲಕ ಶಿಕ್ಷೆ ವಿಧಿಸಿದರು. ರಾಮಣ್ಣ ಕಳ್ಳನಾಗದಿದ್ದರೂ ಶಿಕ್ಷೆಯನ್ನು ಅನುಭವಿಸಿ ಕಡುಬಡತನಕ್ಕೆ ಒಳಗಾದನು. ರಾಯರು ರಾಮಣ್ಣನ ವಿಚಾರವನ್ನೇ ನೆನೆದು ಮಾನಸಿಕವಾಗಿ ಕೊರಗುತ್ತಾರೆ. ಕೊನೆಗೆ ನವರತ್ನದ ಕಡಗವು ರಾಯರ ಹೆಂಡತಿಗೆ ಸಿಕ್ಕಾಗ ಪಶ್ಚಾತ್ತಾಪಗೊಂಡು ರಾಮಣ್ಣನನ್ನು ತನ್ನ ಮಗನಾಗಿ ಮನೆಯೊಳಕ್ಕೆ ಕರೆದುಕೊಂಡು ಹೋಗುತ್ತಾರೆ.

ಕತೆಗಾರರು ಕತೆಯ ನೆಲೆಯಲ್ಲಿ ಅಭಿವ್ಯಕ್ತಿಸುವ ರಾಮನನ್ನು ಪ್ರಾಮಾಣಿಕ, ದುಡಿಮೆ, ಎಲ್ಲವನ್ನು ಸಹಿಸಿಕೊಳ್ಳುವ ಮನೋಧರ್ಮ ಹಾಗೂ ಎರಡು ಕುಟುಂಬಗಳನ್ನು ಬೆಸೆಯುವ ತಾತ್ವಿಕ ನೆಲೆಯು ಸ್ಥಳೀಯತೆಯನ್ನು ಕಟ್ಟಿಕೊಡುತ್ತದೆ. 'ಅವಳಿ ಮಕ್ಕಳು' ಕತೆಯಲ್ಲೂ

ಹಿಂದು ಮುಸ್ಲಿಂ ಕುಟುಂಬವನ್ನು ಬೆಸೆಯು ಆಶಯವನ್ನು ಹೊಂದಿದೆ. ಕತೆಯು ವಸಾಹತುಶಾಹಿಯ ಧೋರಣೆಯಿಂದ ಉಂಟಾದ ಸಾಮಾಜಿಕ ಪಲ್ಲಟವನ್ನು ಗುರುತಿಸುವುದಲ್ಲದೆ ಧಾರ್ಮಿಕ ಸಂಕರತೆಯ ತಾತ್ವಿಕತೆಯನ್ನು ರೂಪಿಸುತ್ತದೆ. ಕತೆಯಲ್ಲಿ ಜಾನಕಮ್ಮ ಸಂಪ್ರದಾಯ ಬದ್ಧತೆಯ ಪ್ರತಿನಿಧಿಯಾಗಿ ತನ್ನ ಧರ್ಮದ ತತ್ವ ಸಿದ್ಧಾಂತವನ್ನು ಕಾಪಿಟ್ಟುಕೊಳ್ಳುವ ಕಾರ್ಯವನ್ನು ಈ ನಿಲುವನ್ನೆ ಸ್ಥಳೀಯತೆ ಎಂದು ಗುರುತಿಸಬಹುದು.

'ಕನ್ಯಾರ್ಥಿ' ಎಂಬ ಕತೆಯು ವೈದಿಕ ಸಮುದಾಯದ ವಿವಾಹ ಕ್ರಮವನ್ನು ವಿಮರ್ಶೆಗೆ ಒಡ್ಡುವ ಕಾರ್ಯವನ್ನು ಮಾಡುತ್ತದೆ. ಮುಖ್ಯವಾಗಿ ವಿವಾಹವನ್ನು ಸೂಕ್ಷ್ಮವಾಗಿ ಮೀರುವ ಹಾಗೂ ಹೆಣ್ಣು ಗಂಡುಗಳನ್ನು ವಯಸ್ಸು ಹಾಗೂ ಆಸೆ ಆಕಾಂಕ್ಷೆಯ ನೆಲೆಯಿಂದ ಲಗ್ನವಾಗಿಸುವ ಭೂಮಿಕೆಯನ್ನು ಈ ಕತೆಯು ಕೇಂದ್ರವಾಗಿಸುತ್ತದೆ.

ಶಾರದೆಗೆ ಲಗ್ನವಾಗದೆ ವಯಸ್ಸು ಮೀರಿತೆಂದು ತಂದೆ ತಾಯಿ ವರನನ್ನು ಹುಡುಕಿ ನೊಂದಿರುವ ಸಮಯದಲ್ಲಿ ಕೇಶವರಾಯ ಹಾಗೂ ಅವನ ಪುತ್ರನು ಶಾರದೆಯನ್ನು ವಧು ಪರೀಕ್ಷೆಗಾಗಿ ಬಂದು ಶಾರದೆಯನ್ನು ಲಗ್ನವಾಗುವುದಾಗಿ ಒಪ್ಪಿಕೊಳ್ಳುತ್ತಾರೆ. ಶಾರದೆಯನ್ನು ಲಗ್ನವಾಗುತ್ತಿರುವುದು ಕೇಶವರಾಯಾಗಿದ್ದನ್ನು ತಿಳಿದು ವರ್ಷಗಳ ನಂತರ ಕೇಶವರಾಯನ ಮಗನೇ ಶಾರದೆಯನ್ನು ಲಗ್ನವಾಗುತ್ತಾನೆ. ಕೇಶವರಾಯ ಒಬ್ಬ ಹುಡುಗಿಯ ಬಾಳು ಹಾಳು ಮಾಡುತ್ತಿದ್ದೆ ಎಂದು ಪಶ್ಚಾತ್ತಾಪದಿಂದ ನೊಂದು ಮಗ, ಸೊಸೆಗೆ ಆಶೀರ್ವದಿಸುವನು. ಕತೆಯಲ್ಲಿ ಕತೆಗಾರ್ತಿಯು ಬಾಲ್ಯವಿವಾಹ ಕ್ರಮವನ್ನು ದಾಟುವ ನೆಲೆ, ಕೇಶವರಾಯ ತಾನು ತಪ್ಪು ಮಾಡುತ್ತಿದ್ದೆನಲ್ಲ ಎಂಬ ಪಶ್ಚಾತ್ತಾಪದ ಅಭಿವ್ಯಕ್ತಿಯ ಕ್ರಮಗಳು ಸಂಪ್ರದಾಯಿಕ ಸಮಾಜದ ನೆಲೆಗಳ ಪ್ರತಿಯಾಗಿ ರೂಪಿತವಾದ ಸ್ಥಳೀಯತೆಯ ಅಭಿವ್ಯಕ್ತಿಯಾಗಿದೆ.

**ಎಸ್.ಜಿ. ಶಾಸ್ತ್ರೀ**

ಮೊದಲ ತಲೆಮಾರಿನ ಕತೆಗಾರರಲ್ಲಿ ಗುರುತಿಸಬಹುದಾದ ಹೆಸರು ಎಸ್.ಜಿ. ಶಾಸ್ತ್ರೀಯವರದ್ದು. ವಸಾಹತುಶಾಹಿಯ ಧೋರಣೆಯಿಂದ ಹುಟ್ಟಿಕೊಂಡ ಕೈಗಾರಿಕೆ, ಮುದ್ರಣದಂತಹ ಸಂಸ್ಥೆಗಳಿಂದ ಸಾಮಾಜಿಕ ವ್ಯವಸ್ಥೆಯಲ್ಲಿ ಗಂಡು ಹೆಣ್ಣುಗಳ ಸಂಬಂಧದಲ್ಲಿ ಉಂಟಾದ ತಲ್ಲಣಗಳನ್ನು ಗುರುತಿಸುವ ನೆಲೆಯಲ್ಲಿ ಇವರ ಕತೆಗಳು ನಿರೂಪಿತಗೊಂಡರೂ ಸ್ಥಳೀಯತೆಯನ್ನು ಸಾಮಾಜಿಕ ಅಸ್ಥಿರತೆಯ ಸಂದರ್ಭದಲ್ಲಿ ಚಿಕಿತ್ಸೆಯ ಭಾಗವಾಗಿ ಬಳಸಿದ ಕತೆಗಾರರಲ್ಲಿ ಎಸ್.ಜಿ. ಶಾಸ್ತ್ರೀ ಒಬ್ಬರು.

'ಇದ್ದರೂ ಇರಬಹುದು' ಕತೆಯಲ್ಲಿ ಕುಟುಂಬದ ತಲ್ಲಣವನ್ನು ಹೇಳುವ ಜೊತೆಗೆ ಕುಟುಂಬವನ್ನು ಮರುಕಟ್ಟು ನೆಲೆಯಲ್ಲಿ ಸ್ಥಳೀಯತೆಯು ಪ್ರಧಾನ ಅಸ್ತ್ರವಾಗಿ ಬಳಕೆಯಾಗಿದ್ದನ್ನು ಗುರುತಿಸಬಹುದು. ವಸಾಹತುಶಾಹಿಯು ರೂಪಿಸಿದ ನಗರ ವ್ಯವಸ್ಥೆ ಹಾಗೂ ಯಂತ್ರ ನಾಗರೀಕತೆ ವ್ಯಕ್ತಿಯನ್ನು ಸತ್ವಹೀನವಾಗಿಸಿತು. ಗಂಡು ಹೆಂಡತಿಯ ಸಂಬಂಧದಲ್ಲಿ ಅನೇಕ ಬದಲಾವಣೆಯನ್ನು ಹುಟ್ಟು ಹಾಕಿತು. ಸುಬ್ಬರಾಯ ಸುಂದರಮ್ಮನನ್ನು ವಿವಾಹವಾಗಿ ಸಂಸಾರವನ್ನು ಆರಂಭಿಸಿದ ಮೇಲೆ ಪ್ರೀತಿ, ನಂಬಿಕೆ, ಸರಸಸಲ್ಲಾಪಗಳಿದ್ದಿತು. ಒಂದು ಗಂಡು ಮಗುವಾಗಿ ತೀರಿಕೊಂಡ ಮೇಲೆ ಸುಂದರಮ್ಮ ಸಂಸಾರದಲ್ಲಿ ಉಲ್ಲಾಸವನ್ನು ಕಳೆದುಕೊಂಡಳು. ಸುಬ್ಬರಾಯನು ಹೆಂಡತಿಯ ವಿಷಯಕ್ಕಿಂತ ಮುದ್ರಣದಂತಹ ಕೆಲಸಕ್ಕೆ ಹೆಚ್ಚಿನ ಸಮಯ ಹಾಗೂ ಆಸಕ್ತಿಯನ್ನು ನೀಡಿದ, ಸುಂದರಮ್ಮ ಗಂಡ ತನ್ನನ್ನು ದೂರ ಮಾಡುತ್ತಿದ್ದನೆಂದು ತಿಳಿದು ಮಾನಸಿಕವಾಗಿ ರೋಗಿಯಾಗಿ ಹಾಸಿಗೆ ಹಿಡಿಯುತ್ತಾಳೆ. ಎಷ್ಟೇ ವೈದ್ಯರ ಔಷಧಿ ಮಾತ್ರೆಯನ್ನು ನೀಡಿದರೂ ರೋಗ ಗುಣವಾಗುವುದಿಲ್ಲ. ವೈದ್ಯರಾದ ರಾಜಾರಾಮ ಸುಂದರಮ್ಮ ಮಾನಸಿಕ ರೋಗವನ್ನು ಗುರುತಿಸಿ, ಶಾಸ್ತ್ರಿ ಹಾಗೂ ಲಕ್ಷ್ಮಿದೇವಮ್ಮರ ಸಂಸಾರದಲ್ಲಿ ಸಲ್ಲಾಪ, ನೆಮ್ಮದಿ, ಪ್ರೀತಿ ತುಂಬಿದ ಬಾಳನ್ನು ಗಮನಿಸಿ ಸುಬ್ಬರಾಯನಿಗೆ ಶಾಸ್ತ್ರಿ ಹಾಗೂ ಲಕ್ಷ್ಮಿ ದೇವಮ್ಮ ಸಂಸಾರದ ವಿನ್ಯಾಸವನ್ನು ತೋರಿಸಿದ ರಾಜಾರಾಮರಾಯನು ಸುಂದರಮ್ಮ ರೋಗಕ್ಕೆ ಸುಬ್ಬರಾಯ ನಿರ್ಲಕ್ಷ್ಯವೇ ಕಾರಣವೆಂಬುದನ್ನು ತಿಳಿಸುತ್ತಾನೆ. ತಿಳುವಿನ ಹಾದಿಕಂಡ ಸುಬ್ಬರಾಯ ಹೆಂಡತಿಯ ಆರೈಕೆಗೆ ತಾನೇ ಕೂಡಿಕೊಂಡು ಸುಂದರಮ್ಮನ ರೋಗವನ್ನು ನಿವಾರಿಸಲು ಯಶಸ್ವಿಯಾದನು. ಕತೆಗಾರರು ಆಧುನಿಕ ಪ್ರಜೆಯಿಂದ ರೋಗಗ್ರಸ್ಥವಾದ ಕುಟುಂಬವನ್ನು ಭಾರತೀಯ ಕುಟುಂಬ ವ್ಯವಸ್ಥೆಯ ಸತ್ವವನ್ನು ಶಾಸ್ತ್ರೀ ಹಾಗೂ ಲಕ್ಷ್ಮಿದೇವಮ್ಮ ಮೂಲಕ ಸುಬ್ಬರಾಯನಿಗೆ ತಿಳಿಸುವ ಕಾರ್ಯವನ್ನು ಮಾಡುತ್ತಾರೆ. ಕತೆಯು ಪರಂಪರೆಯ ಜೀವನ ವಿನ್ಯಾಸವನ್ನು ಕಾಪಿಟ್ಟುಕೊಂಡು ಸ್ಥಳೀಯತೆಯನ್ನು ಉಳಿಸಿಕೊಳ್ಳುವುದನ್ನು ಕಾಣಬಹುದು.

'ಕಿಟ್ಟು ಹಾಗೂ ಲೀಲಾ' ಎಂಬ ಕತೆಯು ನಾಗರಿಕ ಪ್ರಜ್ಞೆಯನ್ನು ಮೈಗೂಡಿಸಿಕೊಂಡ ಕುಟುಂಬ ಮಕ್ಕಳ ಸಾಮಾಜೀಕರಣವನ್ನು ಎದುರುಗೊಳ್ಳುವ ಬಗೆಯನ್ನು ಅನುಸಂಧಾನಕ್ಕೆ ಒಳಗು ಮಾಡುತ್ತದೆ. ಆನಂದವಲ್ಲಿ ಆಧುನಿಕ ಪ್ರಜ್ಞೆಯನ್ನು ಮೈಗೂಡಿಸಿಕೊಂಡು ಬದುಕುವ ನೆಲೆಯಲ್ಲಿ ತನ್ನ ಮಕ್ಕಳಾದ ಕಿಟ್ಟು ಹಾಗೂ ಲೀಲಾರನ್ನು ಕಡೆಗಣಿಸುತ್ತಾಳೆ. ಕ್ಲಬ್ಬು, ಉಪನ್ಯಾಸ, ಪಾರ್ಟಿ, ಹೀಗೆ ಒಂದಲ್ಲ ಒಂದು ರೀತಿಯ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡು ದಿನ ಕಳೆಯುತ್ತಾಳೆ. ಕಿಟ್ಟು ಮತ್ತು ಲೀಲಾ ತಾಯಿಯ ಪ್ರೀತಿ,

ಮಮತೆ, ಸ್ಪರ್ಶವಿಲ್ಲದೆ ಬೆಳೆಯುತ್ತಾರೆ. ಕಿಟ್ಟು ಹಾಗೂ ಲೀಲಾ ಸತ್ಯಮೂರ್ತಿಯ ಮನೆಗೆ ಆಟವಾಡಲು ಹೋದಾಗ ಸತ್ಯಮೂರ್ತಿಯನ್ನು ಅವನ ತಾಯಿ ಕಮಲಮ್ಮ ನೋಡಿಕೊಳ್ಳುತ್ತಿದ್ದ ಬಗೆಯನ್ನು ಕಂಡು ಕಿಟ್ಟು, ಲೀಲಾ ತನಗೂ ಕಮಲಮ್ಮನಂತಹ ತಾಯಿಬೇಕು ಎಂದು ಆಸೆಪಟ್ಟು ಅದನ್ನು ಪಡೆಯಲು ರಾತ್ರಿ ಮನೆಗೆಲಸದವರ ಕಣ್ಣು ತಪ್ಪಿಸಿ ಶ್ರೀಕೃಷ್ಣನ ದೇವಾಲಯಕ್ಕೆ ಹೋಗಿ ಕೈಮುಗಿದು ಬರುವಾಗ ದೇವಾಲಯದ ಬಾಗಿಲು ಹಾಕಿದ್ದರಿಂದ ಗರ್ಭಗುಡಿಯಲ್ಲೇ ನಿದ್ದೆಗೆ ಹೋಗುತ್ತಾರೆ. ಮಕ್ಕಳು ಇಲ್ಲದನ್ನು ಕಂಡ ರಾಯರು ಹಾಗೂ ಆನಂದವಲ್ಲಿ ರಾತ್ರಿಯೆಲ್ಲ ಹುಡುಕಿ ಮುಂಜಾನೆ ಶ್ರೀಕೃಷ್ಣನಲ್ಲಿ ಬೇಡಿಕೊಳ್ಳಲು ಬರುತ್ತಾರೆ. ಗರ್ಭಗುಡಿಯಲ್ಲಿ ಸಿಕ್ಕ ಮಕ್ಕಳು ತಂದೆ ತಾಯಿಯರನ್ನು ಅಪ್ಪಿಕೊಳ್ಳುತ್ತವೆ. ರಾಯರು ಯಾಕೆ ರಾತ್ರಿ ದೇವಸ್ಥಾನಕ್ಕೆ ಬಂದಿರಿ? ಎಂದು ಕೇಳಿದಾಗ 'ಮಕ್ಕಳು ಕಮಲಮ್ಮನಂತಹ ಒಳ್ಳೆಯ ಅಮ್ಮನನ್ನು ಬೇಡಲು ಎನ್ನುತ್ತಾರೆ' ತಪ್ಪಿನ ಅರಿವಾದ ಆನಂದವಲ್ಲಿ ತಾಯಿಯ ಪ್ರೀತಿ ನೀಡುವುದಾಗಿ ದೇವರ ಮುಂದೆ ಆಣೆ ಮಾಡುತ್ತಾಳೆ.

ಕತೆಗಾರರು ಕತೆಯೊಳಗೆ ಮಂಡಿಸುವ ಪರಂಪರೆಯ ಸತ್ವವು ಕುಟುಂಬವನ್ನು ಬೆಸೆಯುವ, ಮಕ್ಕಳನ್ನು ಬೆಳೆಸುವ, ಗಂಡ ಹೆಂಡತಿಯನ್ನು ಒಟ್ಟಿಗೆ ತರುವ ನೆಲೆಯನ್ನೆ ಹೊಂದಿದೆ. ಈ ರೀತಿಯ ಕತೆಗಾರರ ನಮ್ಮ ನೆಲದ ಮೀಮಾಂಸೆಯ ಅಭಿವ್ಯಕ್ತಿಯೇ ಸ್ಥಳೀಯತೆಯಾಗಿದೆ.

ಮೊದಲ ತಲೆಮಾರಿನ ಕತೆಗಾರರು ಕನ್ನಡದ ಕಥಾ ಪರಂಪರೆಯನ್ನು ಹುಟ್ಟುಹಾಕಿದರು. ವಸಾಹತುಶಾಹಿಯ ಧೋರಣೆಯ ಪ್ರಭಾವ ಹಾಗೂ ಕನ್ನಡದ ಪ್ರಾಚೀನ ಸಾಹಿತ್ಯದ ಪ್ರೇರಣೆಯನ್ನು ಮನಸಿನಲ್ಲಿ ಇಟ್ಟುಕೊಂಡು ಬರೆದ ಕತೆಗಳು ಸ್ಥಳೀಯತೆಯನ್ನು ಕೇಂದ್ರವಾಗಿಸಿದೆ. ಮುಖ್ಯವಾಗಿ ಕತೆಗಾರರ ಪರಿಸರ, ಅವರಿಗಾದ ಪ್ರಭಾವ ಮತ್ತು ಆ ಕಾಲಘಟ್ಟದ ಸಾಂಸ್ಕೃತಿಕ ಸಂದರ್ಭಗಳು ನಮ್ಮ ನೆಲದ ಆಚಾರ, ನಂಬಿಕೆ, ಭಾಷೆ, ಸಂಪ್ರದಾಯ, ಧರ್ಮ, ನೆಲ, ಜಲ, ಮಾನವ ಜೀವನ ವಿನ್ಯಾಸವು ಗುಣಾತ್ಮಕವಾಗಿ ಮಂಡಿತವಾಗಿದೆ.

ಕತೆಗಾರರು ಸ್ಥಳೀಯತೆಯನ್ನು ಕತೆಯಲ್ಲಿ ಹೆಣೆಯುವಾಗ ಆ ಸಂದರ್ಭದ ರಾಜಕೀಯ ಹಾಗೂ ಸಾಂಸ್ಕೃತಿಕ ಘಟನೆಗಳು ಪ್ರಧಾನವಾಗಿ ಕಾಣಿಸಿಕೊಳ್ಳುತ್ತದೆ. ಸ್ಥಳೀಯತೆ ಎನ್ನುವದು ಏಕರೂಪದ ಅಭಿವ್ಯಕ್ತಿಯ ಮಾದರಿಯಾಗಿ ಕತೆಗಳಲ್ಲಿ ನಿರೂಪಿತಗೊಳ್ಳದೆ ಬಹುರೂಪಿಯ ಮಾದರಿಯಾಗಿ ಅನುಸಂಧಾನವಾಗಿದೆ. ಭಾರತೀಯ ಕುಟುಂಬದ ರಚನೆಯ ಭಾಗವಾಗಿ, ನಮ್ಮ ನೆಲದ ಆಚಾರ, ನಂಬಿಕೆಯ ಭಾಗವಾಗಿ, ವಸಾಹತುಶಾಹಿಯ

ಧೋರಣೆಗೆ ಪ್ರತಿಯಾದ ಭಾರತೀಯ ಸತ್ವದ ಭಾಗವಾಗಿ, ಜೀವನ ಮೀಮಾಂಸೆಯ ಭಾಗವಾಗಿ, ಸಂಪ್ರದಾಯದ ಭಾಗವಾಗಿ, ಹಾಗೂ ವೃತ್ತಿ, ಶ್ರಮ, ಪ್ರಭುತ್ವದ ನಿರೂಪಣೆಯಾಗುವ ಕತೆಗಳು ಭಾರತೀಯ ನೆಲದ ಸತ್ವದ ಜೀವಾಳವಾಗಿ ಹೊಂದಿವೆ.

ವಸಾಹತುಶಾಹಿಯ ಧೋರಣೆಯ ಪ್ರಭಾವವೇ ಮೊದಲ ತಲೆಮಾರಿನ ಕತೆಗೆ ದಿಕ್ಕು ದೆಸೆಯನ್ನು ನೀಡಿದರೂ ಕತೆಗಾರರು ಬಹುಸೂಕ್ಷ್ಮವಾಗಿ ಸ್ಥಳೀಯ ಬದುಕಿಗೆ ಮಾರಕವಾಗಬಹುದಾದ ಪಾಶ್ಚಾತ್ಯ ಚಿಂತನೆಯನ್ನು ವಿರೋಧಿಸುವ ಹಾಗೂ ಪಾಶ್ಚಾತ್ಯರ ವೈಚಾರಿಕ ಮನೋಧರ್ಮ, ವಿಜ್ಞಾನ, ಸಾಹಿತ್ಯ ಮಾದರಿಗಳನ್ನು ನಮ್ಮ ಪರಂಪರೆಯೊಳಗೆ ಸಂಕರವಾಗಿಸಿ, ಸ್ಥಳೀಯತೆಯನ್ನು ಮರುನಿರೂಪಣೆ ಮಾಡುತ್ತಾರೆ.ನಮ್ಮ ನೆಲದ ಸತ್ವವೇ ಕತೆಯ ಆಶಯವಾಗಿ ವಸ್ತುವಾಗಿ ಮಾದರಿಯಾಗಿ ನಿರೂಪಣೆಗೊಳ್ಳುವುದರ ಜೊತೆಗೆ ಜೀವನ ಮೌಲ್ಯಗಳು ಬಹುತ್ವದ ನೆಲೆಯಲ್ಲಿ ಅನುಸಂಧಾನವಾಗುತ್ತದೆ.

ವಸಾಹತುಶಾಹಿಯು ರೂಪಿಸಿದ ಆಡಳಿತ, ಕಾನೂನು, ಶಿಕ್ಷಣ ಹಾಗೂ ಅಭಿವೃದ್ಧಿ ಯಂತಹ ಧೋರಣೆಗಳಿಗೆ ನಮ್ಮ ಪರಂಪರೆಯ ಮೂಸೆಯೊಳಗಿನಿಂದ ಪ್ರತಿಕ್ರಿಯಿಸುವ ಮಾದರಿಯನ್ನು ಮೊದಲ ತಲೆಮಾರಿನ ಕತೆಗಳು ಹೊಂದುವ ಮೂಲಕ ಸ್ಥಳೀಯತೆಯನ್ನು ನಿರೂಪಿಸಿದವು. ಕತೆಗಾರ್ತಿಯರು ತಮ್ಮ ಕತೆಯಲ್ಲಿ ಸ್ಥಳೀಯತೆಯನ್ನು ಹೆಣ್ಣಿನ ಅಸ್ತಿತ್ವವನ್ನು ನಿರೂಪಿಸಲು ಬಳಸಿಕೊಳ್ಳುತ್ತಾರೆ. ಆ ಕಾಲಘಟ್ಟದಲ್ಲಿ ಮಹಿಳೆಯರ ಮೇಲೆ ಹೇರಲಾಗಿದ್ದ ಅನೇಕ ಕಟ್ಟುಪಾಡುಗಳನ್ನು ಸೂಕ್ಷ್ಮವಾಗಿ ಪರಿಚಯಿಸುವ ತಾತ್ವಿಕತೆಯನ್ನು ಮಂಡಿಸುತ್ತಾರೆ. ಕತೆಗಾರ್ತಿಯರು ಸ್ತ್ರೀ ಹಾಗೂ ಪುರುಷರು ಸಮಾನರು, ಇಬ್ಬರೂ ಒಟ್ಟು ಗೂಡಿದರೆ ಮಾತ್ರ ಯಶಸ್ಸು ಎಂದು ಸ್ಥಳೀಯತನವನ್ನು ಕತೆಯಲ್ಲಿ ಉಳಿಸಿಕೊಂಡಿದ್ದಾರೆ. ಮೊದಲ ತಲೆಮಾರಿನ ಕತೆಗಳೆಲ್ಲವು ಸ್ಥಳೀಯತೆಯನ್ನು ಜೀವಂತವಾಗಿ ಉಳಿಸಿಕೊಂಡದ್ದಲ್ಲದೆ ಅದಕ್ಕೊಂದು ಅಸ್ತಿತ್ವದ ಮೀಮಾಂಸೆಯನ್ನು ರೂಪಿಸಿದವು.

ಅಧ್ಯಾಯ - ೫

# ಪ್ರಾತಿನಿಧಿಕ ಮೊದಲ ತಲೆಮಾರಿನ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ

ಮೊದಲ ತಲೆಮಾರಿನ ಎಲ್ಲಾ ಕತೆಗಳನ್ನು ಸ್ಥಳೀಯತೆಯ ಲೋಕ ಗ್ರಹಿಕೆಯಲ್ಲಿ ಅಧ್ಯಯನ ಮಾಡುವಾಗ ಕತೆಗಳ ತಾತ್ವಿಕ ನಿಲುವುಗಳಿಗೆ ಅಡಿಪಾಯವಾಗಿರುವ ಪ್ರಾದೇಶಿಕವಾದ ಭಾಷೆ, ನಂಬಿಕೆ, ಜನಜೀವನ, ಪ್ರಭುತ್ವ ವ್ಯವಸ್ಥೆ, ನೀತಿ ನಿಯಮಗಳು, ಕತೆಗಾರರ ಪರಿಸರವನ್ನು ಅವಲಂಬಿತವಾಗಿರುವುದು ಸಹಜವೇ ಆಗಿದೆ. ಸ್ಥಳೀಯತೆ ಎನ್ನುವ ಪರಿಕಲ್ಪನೆಯನ್ನು ಮೊದಲ ತಲೆಮಾರಿನ ಕತೆಗಳಲ್ಲಿ ಭಿನ್ನ ಭಿನ್ನವಾಗಿ ಗ್ರಹಿಸುವ ನೆಲೆಯಿಂದ ಕತೆಗಾರರನ್ನು ಪ್ರಾದೇಶಿಕತೆಯ ಅಡಿಯಲ್ಲಿ ದಕ್ಷಿಣ ಕನ್ನಡದ ಕತೆಗಾರರ ಕತೆಗಳು, ಮೈಸೂರು ಭಾಗದ ಕತೆಗಾರರ ಕತೆಗಳು ಹಾಗೂ ಕಲ್ಯಾಣ ಕರ್ನಾಟಕ ಭಾಗದ ಕತೆಗಾರರ ಕತೆಗಳೆಂದು ನಾಲ್ಕು ವಿಭಾಗದ ಮೂಲಕ ಕತೆಗಳಲ್ಲಿ ಅಭಿವ್ಯಕ್ತಗೊಂಡ ಸ್ಥಳೀಯತೆಯ ಸ್ವರೂಪವನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

### ೫.೧ ದಕ್ಷಿಣ ಕನ್ನಡ ಭಾಗದ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ

ಜೈನ ಅರಸು ಮನೆತನಗಳಿಂದ ಬಹುಕಾಲ ಆಳ್ವಿಕೆಗೆ ಒಳಪಟ್ಟ ದಕ್ಷಿಣ ಕರಾವಳಿಯ ಭಾಗವು ವಿಶಿಷ್ಟವಾದ ಪ್ರಾದೇಶಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಸತ್ವವಾಗಿ ಯಕ್ಷಗಾನ, ತುಳು ಪಾಡ್ದನ, ತುಳು ಜಾನಪದ, ಸಾಂಗತ್ಯ, ನಾಗ, ಭೂತಗಳ ನಂಬಿಕೆಯನ್ನು ಒಳಗೊಂಡ ದಕ್ಷಿಣ ಕನ್ನಡ ಪ್ರದೇಶವು ವಿಶಾಲವಾದ ಕಡಲನ್ನು ಹೊಂದಿರುವ ಕಾರಣದಿಂದ ವ್ಯಾಪಾರ, ಉದ್ಯಮ ಹಾಗೂ ನಗರಗಳ ಬೆಳವಣಿಗೆಗೆ ಕೇಂದ್ರವಾಯಿತು. ತುಳು, ಕೊಂಕಣಿ ಭಾಷೆಗಳು ಇಲ್ಲಿನ ಮಾತೃಭಾಷೆಯ ನೆಲೆಯಲ್ಲಿದ್ದರೆ ಕನ್ನಡವು ವ್ಯಾವಹಾರಿಕ ಹಾಗೂ ಸಾಹಿತ್ಯದ

ಭಾಷೆಯಾಗಿ ತನ್ನ ಅಸ್ಮಿತೆಯನ್ನು ಉಳಿಸಿಕೊಂಡಿದೆ.

ಕನ್ನಡದಲ್ಲಿ ವಿಫುಲವಾದ ಚಂಪು ಕೃತಿಗಳು ರಚನೆಗೊಳ್ಳುತ್ತಿರುವ ಸಂದರ್ಭದಲ್ಲಿ ದಕ್ಷಿಣ ಕನ್ನಡದ ಭಾಗದಲ್ಲಿ ಕಡಿಮೆ ಪ್ರಮಾಣದಲ್ಲಿ ಚಂಪೂ ಕಾವ್ಯ ರಚನೆಗೊಂಡಿದೆ. ೧೨೨೨ರಲ್ಲಿ ಸೋಮರಾಜನ 'ಉದ್ದಟ' ಕಾವ್ಯವು ಪ್ರಮುಖವಾದ ರಚನೆಯಾಗಿದೆ. ಆನಂತರದ ಸಾಂಗತ್ಯ ಸಾಹಿತ್ಯ ಪ್ರಕಾರವು ದಟ್ಟವಾಗಿ ಹಬ್ಬಿತು. ಕಾಮನ ಕತೆ, ಶಿಶುಮಾಯಣನೆಂಬ ಕವಿಯ 'ಅಂಜನಾ ಚರಿತ್ರೆ' ಹಾಗೂ ಸೊಬಗಿನ ಸೋನೆಯು ೧೪೧೦ರಲ್ಲಿ ರಚನೆಯಾದ ದೇಪರಾಜನ ಕಾವ್ಯ. ಜೈನಧರ್ಮದ ಸಿದ್ಧಾಂತದೊಂದಿಗೆ ತುಳು ಸತ್ವವನ್ನು ಇಟ್ಟುಕೊಂಡು ರಚನೆಯಾದ ರತ್ನಾಕರವರ್ಣಿಯ ಭರತೇಶ ವೈಭವ, ರತ್ನಾಕರ ಶತಕ, ತ್ರಿಲೋಕ ಶತಕಗಳು ೧೬ನೇ ಶತಮಾನದಲ್ಲಿ ರಚನೆಯಾದ ಪ್ರಮುಖ ದೇಶಿ ಕಾವ್ಯ.

೧೮ನೇ ಶತಮಾನದ ಆರಂಭದಲ್ಲಿ ವಸಾಹತುಶಾಹಿಯ ಆಗಮನವು ದಕ್ಷಿಣ ಕನ್ನಡ ಭಾಗದಲ್ಲಿ ಅನೇಕ ಪಲ್ಲಟವನ್ನು ಹುಟ್ಟು ಹಾಕಿತು. ವಸಾಹತುಶಾಹಿಯೆ ವಸಾಹತುವೊಂದಿಗಿನ ವ್ಯಾಪಾರ, ಶಿಕ್ಷಣ, ಮತ ಪ್ರಚಾರ ಹಾಗೂ ಸಂಶೋಧನಾ ಕೆಲಸಗಳು ಈ ಭಾಗದ ಬೌದ್ಧಿಕ ಚಿಂತನೆಗೆ ಚಾಲನೆಯನ್ನು ನೀಡಿತು. ಪ್ರಮುಖವಾಗಿ ಆಧುನಿಕ ಶಿಕ್ಷಣದ ಪ್ರಭಾವ ಮತ್ತು ಮಿಷನರಿಗಳ ಕಾರ್ಯವು ಈ ಭಾಗದ ಜನರಲ್ಲಿ ಸಾಹಿತ್ಯದ ಆಸಕ್ತಿಯನ್ನು ಹೊಸ ಸಾಹಿತ್ಯ ಮಾದರಿಗಳ ಪ್ರಜ್ಞೆ ಹುಟ್ಟು ಹಾಕಿತು. ಕತೆ, ಕಾವ್ಯ, ಕಾದಂಬರಿಯಂತಹ ಸಾಹಿತ್ಯ ಪ್ರಕಾರಗಳು ಕನ್ನಡದಲ್ಲಿ ರಚನೆಯಾದವಲ್ಲದೆ ಆ ಕಾಲಘಟ್ಟದ ಸಾಂಸ್ಕೃತಿಕ ನೆಲಗಳನ್ನು ಅಭಿವ್ಯಕ್ತಿಸುವ ಕಾರ್ಯವನ್ನು ಮಾಡಿತು.

ಪಂಜೆ, ಗೋವಿಂದ ಪೈ, ಸೇಡಿಯಾಪು ಕೃಷ್ಣಭಟ್ಟ, ಕಡೆಂಗೋಡ್ಲು ಶಂಕರಭಟ್ಟ, ಎಂ.ಎನ್. ಕಾಮತ್, ಕೊರಡ್ಕಲ್ ಶ್ರೀನಿವಾಸರಾಯ, ಮಟ್ಪಾರು ವಿಠಲ ಹೆಗ್ಡೆ, ಬಾಗಲೋಡಿ ದೇವರಾಯ, ಪೇಜಾವರ ಸದಾಶಿವರಾವ್, ಸರಸ್ವತಿ ರಾಜೇವಾಡೆ, ಇಂದಿರಾಬಾಯಿ ಉಡುಪಿ ಇತ್ಯಾದಿ ಕತೆಗಾರರು ತಮ್ಮ ಕತೆಗಳ ಮೂಲಕ ವಸಾಹತುಶಾಹಿಯು ರೂಪಿಸಿದ ಸಮಸ್ಯೆಗಳಿಗೆ ಹೊಸದಾದ ಸ್ಥಳೀಯ ಸಿದ್ಧಾಂತದೊಂದಿಗೆ ಅನುಸಂಧಾನ ಮಾಡುವುದರ ಮೂಲಕ ಕನ್ನಡ ಸಾಹಿತ್ಯ ಪರಂಪರೆಯನ್ನು ನಡೆಸಿಕೊಂಡು ಬಂದಿದ್ದಾರೆ. ಈ ಎಲ್ಲಾ ಕತೆಗಾರರ ಸಾಂಸ್ಕೃತಿಕ ಭೂಮಿಕೆ ಸ್ಥಳೀಯತೆಯೇ ಆಗಿದೆ. ವಸಾಹತುಶಾಹಿಯ ಪ್ರಭಾವ, ಧೋರಣೆ ನೆಲೆಯಲ್ಲಿ ರೂಪುಗೊಂಡ ದೇಶೀಯವಲ್ಲದ ನಿಲುವುಗಳಿಗೆ ಕತೆಗಾರರು ನಮ್ಮ ನೆಲದ ಪರಂಪರೆಯನ್ನು ಸಾಂಸ್ಕೃತಿಕ ಸಂಘರ್ಷದ ಭೂಮಿಕೆಯಲ್ಲಿ ಸ್ಥಳೀಯತೆಯನ್ನು

ಕಟ್ಟುವ ಕಾರ್ಯವನ್ನು ಮಾಡುತ್ತಾರೆ.

ಈ ಅಧ್ಯಾಯದಲ್ಲಿ ಚರ್ಚಿಸಿರುವ ಕತೆಗಳು ಸ್ವಾತಂತ್ರ್ಯಪೂರ್ವ ಕಾಲಘಟ್ಟ ಸಾಂಸ್ಕೃತಿಕ ಸಂಘರ್ಷವನ್ನು ವಸಾಹತುಶಾಹಿಯ ತೀವ್ರವಾದ ಸೈದ್ಧಾಂತಿಕ ಹೋರಾಟವನ್ನು ಉಳಿಗಮಾನ್ಯ ಪದ್ಧತಿಯ ಸ್ವರೂಪವನ್ನು ವೈದಿಕ ಸಮುದಾಯದ ಬಾಲ್ಯ ವಿವಾಹ, ವಿಧವಾ ಸಮಸ್ಯೆಗಳನ್ನು ಒಳಗೊಂಡಂತೆ ಧಾರ್ಮಿಕ ಸುಧಾರಣೆ ಮತ್ತು ವೈಚಾರಿಕ ಚೌಕಟ್ಟಿನಲ್ಲಿ ಕತೆಗಳು ಜೀವ ಪಡೆದಿವೆ. ಆದರೆ ಕತೆಗಳ ಒಟ್ಟು ತಾತ್ವಿಕತೆ ಸ್ಥಳೀಯತೆಯೇ ಆಗಿದೆ. ಮೊದಲ ತಲೆಮಾರಿನ ಕತೆಗಳಲ್ಲಿ ನಿರೂಪಿತಗೊಂಡಿರುವ ಸ್ಥಳೀಯತೆಯನ್ನು ಭಿನ್ನ ಭಿನ್ನ ಮಾದರಿಗಳಲ್ಲಿ ಚರ್ಚೆಗೆ ಒಳಪಡಿಸಬಹುದು ಅವುಗಳೆಂದರೆ

### ೩.೧.೧ ಪರಂಪರೆಯ ಸ್ಥಳೀಯತೆ

ಪರಂಪರೆಯನ್ನು ಭೂಮಿಕೆಯಾಗಿಸಿಕೊಂಡು ರಚನೆಯಾದ ಕತೆಗಳು ದಕ್ಷಿಣ ಕನ್ನಡ ಭಾಗದ ಸಾಂಸ್ಕೃತಿಕ ಜೀವನ ಮೀಮಾಂಸೆಯನ್ನು ಒಳಗೊಳ್ಳುತ್ತದೆ. ಪರಂಪರೆಯನ್ನು ಸ್ಥಳೀಯತೆಯ ಅಭಿವ್ಯಕ್ತಿಯಾಗಿ ಕತೆಗಳು ಅನುಸಂಧಾನ ಮಾಡುವುದರ ಹಿಂದೆ ವಸಾಹತುಶಾಹಿಯ ಧೋರಣೆಯ ದಟ್ಟವಾದ ಪ್ರಭಾವವಿದೆ. ವಸಾಹತುಶಾಹಿಯು ಪಶ್ಚಿಮದ ಜ್ಞಾನವನ್ನು ಸಂಸ್ಕೃತಿಯನ್ನು, ಭಾಷೆಯನ್ನು ಪ್ರಧಾನವಾಗಿಸಿತಲ್ಲದೆ ಆ ಜ್ಞಾನ ಪರಂಪರೆಯ ಮೂಲಕ ಭಾರತೀಯ ಪರಿಸರವನ್ನು ಗ್ರಹಿಸಿತು. ಈ ರೀತಿಯ ಪ್ರಭುತ್ವದ ಧೋರಣೆಯು ಸ್ಥಳೀಯ ನೆಲದ ಪರಂಪರೆಯನ್ನು ಭಾಷೆಯನ್ನು ತನ್ನ ಅಧೀನವಾಗಿಸಿ ಉಚ್ಚ-ನೀಚವೆಂಬ ಪ್ರಜ್ಞೆಯನ್ನು ಬೆಳೆಸಿತು. ಈ ಪ್ರಜ್ಞೆಯು ವಸಾಹತುಶಾಹಿ ಪ್ರಭುತ್ವದ ಸಂಸ್ಕೃತಿಯನ್ನು ಶ್ರೇಷ್ಠವೆಂದು ಭಾರತೀಯ ಪರಂಪರೆಯನ್ನು ಕನಿಷ್ಠವೆಂದು ಗುರುತಿಸಿ, ತನ್ನ ಜ್ಞಾನದ ನೆಲೆಯಲ್ಲಿ ಪ್ರಚಾರ ಮಾಡಿತು, ಹಾಗೂ ಸ್ಥಳೀಯ ಪರಂಪರೆಯೊಂದಿಗಿನ ಗುಣಾತ್ಮಕವಾದ ಸಂಪರ್ಕವನ್ನು ಕಡಿತಗೊಳಿಸಿ, ತನ್ನ ಅಧೀನವಾಗಿಸಿ ಕೊಂಡಿತು. ಸ್ಥಳೀಯ ನೆಲದ ಪರಂಪರೆಯೊಂದಿಗಿನ ನಂಬಿಕೆ, ಆಚಾರ ಭಾಷೆಯ ಸ್ಥಾನದಲ್ಲಿ ವಸಾಹತುಶಾಹಿಯು ತನ್ನ ಪಾಶ್ಚಾತ್ಯ ಸಾಂಸ್ಕೃತಿಕ ಪರಂಪರೆಯನ್ನು ಮಂಡಿಸುವ ಮೂಲಕ ಸ್ಥಳೀಯತೆಯ ಅಸ್ಮಿತೆಯನ್ನು ಅಸ್ಥಿರಗೊಳಿಸಿ ಈ ರೀತಿಯ ಪ್ರಭುತ್ವದ ಧೋರಣೆಯು ಸಾಮಾಜಿಕ ವಿನ್ಯಾಸದ ಮೇಲೆ ತೀವ್ರವಾದ ಪರಿಣಾಮವನ್ನು ಉಂಟುಮಾಡಿತು. ಅದರಲ್ಲೂ ವೈದಿಕ ಸಮಾಜವು ಬಹುಪಾಲು ಗಾಯಗೊಂಡಿತಲ್ಲದೆ, ವಸಾಹತುಶಾಹಿಯ ಧೋರಣೆಗಳನ್ನು ಒಪ್ಪಿಕೊಳ್ಳುವುದೇ ಅಥವಾ ಸ್ಥಳೀಯ ಪರಂಪರೆಯನ್ನು ಉಳಿಸಿಕೊಳ್ಳುವುದೆ ಎಂಬ

ಜಿಜ್ಞಾಸೆ ಹುಟ್ಟಿಕೊಂಡಿತು ಮತ್ತು ಸ್ಥಳೀಯ ಪರಂಪರೆಯನ್ನು ವಸಾಹತುಶಾಹಿ ಪ್ರಭುತ್ವದ ನೆಲೆಯನ್ನು ದಾಟಿ ಅಭಿವ್ಯಕ್ತಿಸುವ ಅಗತ್ಯತೆ ನಿರ್ಮಾಣವಾಯಿತು. ಈ ರೀತಿಯ ಪರಿಸರವನ್ನು ಮೊದಲ ತಲೆಮಾರಿನ ಕತೆಗಾರರು ಗ್ರಹಿಸಿದರಲ್ಲದೆ ಸ್ಥಳೀಯ ಪರಂಪರೆಯನ್ನು ಪ್ರಧಾನವಾದ ಧಾರೆಯಲ್ಲಿ ಕತೆಗಳ ಮೂಲಕ ಮಂಡಿಸಿದರು.

ಸೇಡಿಯಾಪು ಕೃಷ್ಣಭಟ್ಟರ 'ನಾಗರಬೆತ್ತ' ಕತೆಯು ನಂಬಿಕೆಯ ಗೆಲುವನ್ನು ಪ್ರಧಾನವಾಗಿ ಚರ್ಚೆ ಮಾಡುತ್ತದೆ. ನಾಗರಬೆತ್ತ ದಕ್ಷಿಣ ಕನ್ನಡದ ಭಾಗದಲ್ಲಿ ತನ್ನದೇ ಆದ ನಂಬಿಕೆಯನ್ನು ಹಾಗೂ ಧಾರ್ಮಿಕ ಪರಂಪರೆಯನ್ನು ಪಡೆದುಕೊಂಡು ಬಂದಿದ್ದರಿಂದ ನಾಗರಬೆತ್ತಕ್ಕೆ ತನ್ನದೇ ಆದ ಸಾಂಸ್ಕೃತಿಕ ಪರಂಪರೆವಿದೆ. ಆದರೆ ವಸಾಹತುಶಾಹಿ ಸಂದರ್ಭದಲ್ಲಿ ಹುಟ್ಟಿಕೊಂಡ ಅಬಿವೃದ್ಧಿ ಪರಿಕಲ್ಪನೆ ಹಾಗೂ ವೈಚಾರಿಕ ಪ್ರಜ್ಞೆಯು ಭಾರತೀಯ ನಂಬಿಕೆಯನ್ನು ಮೂಢನಂಬಿಕೆ ಎಂದು ಗ್ರಹಿಸಿತು. ಹಾಗೂ ಭಾರತೀಯ ನಂಬಿಕೆಯನ್ನು ಆರೋಪಿಸಿಕೊಂಡು ಅಸ್ಮಿತೆಯನ್ನು ಪಡೆದುಕೊಂಡಿದ್ದ ಮರ, ಮೂರ್ತಿ ಇತ್ಯಾದಿಗಳನ್ನು ಅಭಿವೃದ್ಧಿ ಎಂಬ ಹೆಸರಿನಲ್ಲಿ ನಾಶಗೊಳಿಸಿತು. ಹಾಗೂ ತನ್ನ ದೇಶಕ್ಕೆ ತೆಗೆದುಕೊಂಡು ಹೋಗುತ್ತಿದ್ದ ಕಾಲದಲ್ಲಿ ಕತೆಗಾರರು ಈ ಭಾಗದ ಸಂಪತ್ತನ್ನು ಹಾಗೂ ನಂಬಿಕೆಯನ್ನು ಗುಣಾತ್ಮಕವೆಂದು ಕತೆಯ ಮೂಲಕ ನಿರೂಪಿಸುತ್ತಾರೆ. ನಾಗರಬೆತ್ತವನ್ನು ಅದಕ್ಕಿದ್ದ ಕಾರ್ಣಿಕವನ್ನು ದಾಟಿ ಸೌಂದರ್ಯದ ಭಾಗವಾಗಿ ಗ್ರಹಿಸಿ ನಾಗರಬೆತ್ತವನ್ನು ತನ್ನದಾಗಿಸಿಕೊಂಡ ದೇವಜ್ಜಿಯ ಗಂಡ ಬ್ರಿಟಿಷ್ ಸೈನಿಕರ ಮೂಲಕ ಸಾವಿಗೆ ಗುರಿಯಾಗುತ್ತಾನೆ. ಕತೆಯಲ್ಲಿ ನಾಗರಬೆತ್ತವು ಭಾರತೀಯ ಭಾಗಕ್ಕೆ ನಂಬಿಕೆಯ ನೆಲೆಯಿಂದ ಪ್ರಧಾನವಾಗಿ ಉಳಿಯುವ ತಾತ್ವಿಕತೆಯನ್ನು ಹೊಂದಿದೆ.

ಕುವೆಂಪು ಅವರ 'ಧನ್ವಂತರಿಯ ಚಿಕಿತ್ಸೆ' ಕತೆಯು ಕೃಷಿ ಪರಂಪರೆಯ ನಿಲುವುಗಳನ್ನು ಗುಣಾತ್ಮಕವಾಗಿ ಮಂಡಿಸುತ್ತದೆ. ಆಧುನಿಕತೆಯ ರೂಪುರೇಷೆಗಳನ್ನು ವಿಮರ್ಶೆಗೆ ಒಳಗು ಮಾಡುವುದರ ಮೂಲಕ ಸ್ಥಳೀಯತೆಯನ್ನು ರೈತನ ಬದುಕಿನ ಮೂಲಕ ನಿರೂಪಣೆ ಮಾಡುತ್ತದೆ. ಕತೆಗಾರರು ಆಧುನಿಕವಾದ ಅಭಿವೃದ್ಧಿ ಪರಿಕಲ್ಪನೆಗಳು ನಗರಗಳನ್ನು ಹಾಗೂ ಸುಖಭೋಗಗಳನ್ನು ಸೃಷ್ಟಿ ಮಾಡುವ ಮೂಲಕ ಮಾನವ ಬದುಕಿನ ಜೊತೆಯಲ್ಲಿ ಜೀವ ಪಡೆದ ಕೃಷಿ ಹಾಗೂ ಅದರ ಪರಂಪರೆಯು ಅಳಿವಿನ ಅಂಚಿಗೆ ಸೇರುತ್ತಿದೆ ಎಂಬ ತಾತ್ವಿಕತೆಯನ್ನು ರೈತನ ನೋವು, ಸಂಕಟ ಮತ್ತು ಗೋಳಾಟದ ನೆಲೆಯಿಂದ ಅಭಿವ್ಯಕ್ತಿಸುತ್ತದೆ.

ರೈತನ ಸಂಕಟದ ಗೋಳಾಟವನ್ನು ಗ್ರಹಿಸಿದ ವಿಶ್ವಾಮಿತ್ರ ಹಾಗೂ ಪರಶುರಾಮರು ಭೂಲೋಕಕ್ಕೆ ಆಗಮಿಸಿ ರೈತನ ಗುಡಿಸಲಿಗೆ ಹೋಗಿ ರೈತನೊಬ್ಬನ ನರಳಾಟವನ್ನು

ಗಮನಿಸಿ ರೈತನ ರೋಗಕ್ಕೆ ಕಾರಣವನ್ನು ಹುಡುಕುವ ಪ್ರಯತ್ನವನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಋಷಿಗಳಲಿಬ್ಬರು ರೈತನ ರೋಗಕ್ಕೆ ಮದ್ದು ನೀಡುವ ಉದ್ದೇಶದಿಂದ ಒಬ್ಬ ವೈದ್ಯ ಹಾಗೂ ಮಂತ್ರವಾದಿಯನ್ನು ಕರೆಸುತ್ತಾರೆ. ಇವರಿಬ್ಬರು ವಿಫಲರಾದಾಗ ಋಷಿಗಳು ದೇವ ವೈದ್ಯನಾದ ಧನ್ವಂತರಿಯನ್ನು ಕರೆಸುತ್ತಾರೆ. ಧನ್ವಂತರಿಯು ರೈತನನ್ನು ಪರೀಕ್ಷಿಸಿ ರೈತನ ಗೋಳಾಟಕ್ಕೆ ಆಧುನೀಕರಣದಿಂದ ರೂಪುಗೊಂಡ ನಗರ ಹಾಗೂ ಅಭಿವೃದ್ಧಿವೆಂಬ ಪರಿಕಲ್ಪನೆಗಳು ರೈತನ ಎದೆಯ ಮೇಲೆ ನಿಂತಿವೆ ಎಂಬುವುದನ್ನು ಗುರುತಿಸುತ್ತಾನೆ. ವಿಶ್ವಾಮಿತ್ರನು ಕೋಪಗೊಂಡು ರೈತರ ಎದೆಯ ಮೇಲೆ ನಿಂತಿದ್ದ ಎಲ್ಲಾ ಗೋಪುರಗಳನ್ನು ಕೆಳಕ್ಕೆ ಉರುಳಿಸುತ್ತಾನೆ. ಅಸಮಾನವಾಗಿ ಬಿದ್ದಿರುವ ನಾಗರಿಕ ವ್ಯವಸ್ಥೆಯನ್ನು ರೈತನು ಬಲಗೊಂಡ ಮೇಲೆ ಹೆಗಲಮೇಲೆ ಹೊತ್ತು ಕೊಳ್ಳುತ್ತಾನೆ ಎಂಬ ನಿಲುವುಗಳನ್ನು ಕತೆಗಾರರು ಅಭಿವ್ಯಕ್ತಿಸುತ್ತಾರೆ. ಕತೆಯಲ್ಲಿ ಸ್ಥಳೀಯತೆಯ ರೂಪು ರೈತ ಹಾಗೂ ಕೃಷಿ ಪರಂಪರೆಯ ಅನುಸಂಧಾನದಲ್ಲಿ ನಿರೂಪಿತವಾಗಿದೆ.

'ಅಮಟೆಕಾಯಿ ಗೊರಟು' ಎಂಬ ಕೊರಡ್ಕಲ್ ಶ್ರೀನಿವಾಸರಾಯರ ಕತೆಯು ಸ್ತ್ರೀಯೊಬ್ಬಳ ಬದುಕಿನ ವಿನ್ಯಾಸವನ್ನು ಹೇಳುವ ಜೊತೆಗೆ ಅವಳ ದಾನ, ಧರ್ಮದ ನೆಲೆ ಹಾಗೂ ಹೆಣ್ಣು ಹೆಣ್ಣನ್ನು ಅರ್ಥ ಮಾಡಿಕೊಳ್ಳದೆ ನಿಲುವುಗಳನ್ನು ಧಾರ್ಮಿಕ ಪರಂಪರೆಯೊಳಗೆ ಚರ್ಚೆಗೆ ಒಳಪಡಿಸುತ್ತದೆ. ಲಕ್ಷ್ಮಮ್ಮ ತನ್ನ ಬದುಕಿನಲ್ಲಿ ಯಾರೇ ಹಸಿವಿನಿಂದ ಅನ್ನವನ್ನು ಅರಸಿಕೊಂಡು ಬಂದರು ಅವರಿಗೆ ಅನ್ನವನ್ನು ನೀಡುವ ಕ್ರಮವನ್ನು ಹೊಂದಿರುತ್ತಾರೆ. ತನ್ನ ಮನೆಯಲ್ಲಿ ಮನೋಮಿಯ ಪೂಜೆಯ ದಿನದ ಮಧ್ಯಾಹ್ನ ಅನ್ನಬೇಡಿಕೊಂಡು ಬಂದ ಭಿಕ್ಷುಕಿಗೆ ಅನ್ನವನ್ನು ನೀಡದೆ ಬಡಿಗೆ ಹಿಡದು ಓಡಿಸುತ್ತಾರೆ ಲಕ್ಷ್ಮಮ್ಮನ ಗಂಡ. ಆದರೆ ಲಕ್ಷ್ಮಮ್ಮ ಹಸಿದು ಬಂದಿದ್ದ ಭಿಕ್ಷುಕಿಯನ್ನು ಗಮನಿಸಿ ಅವಳಿಗಾಗಿ ಅಡುಗೆ ಮನೆಯಲ್ಲಿ ಅನ್ನ ಸಾರು ಹುಡುಕಿ ಇದನ್ನು ನೀಡುತ್ತಾಗೆ. ಭಿಕ್ಷುಕಿ ಮಾವಿನ ಗೊರಟನ್ನು ಅನ್ನವನ್ನು ಸೇವಿಸುವುದನ್ನು ನೋಡಿ ಸಂತಸಗೊಂಡ ಲಕ್ಷ್ಮಮ್ಮ ಹೆಣ್ಣಿಗೆ ಮಾನವೇ ಮುಖ್ಯ ಎಂದು ತಾನು ಮಡಿಯಲ್ಲಿ ತೊಟ್ಟುಕೊಳ್ಳಲು ಇಟ್ಟಿದ್ದ ಸೀರೆಯನ್ನು ಭಿಕ್ಷುಕಿಗೆ ನೀಡುತ್ತಾರೆ.ಈ ನಡುವೆ ಭಿಕ್ಷುಕಿಯ ಬಾಡಿದ ಮುಖವು ಅರಳಿಕೊಳ್ಳುತ್ತದೆ. ಹಾಗೆಯೇ ಭಿಕ್ಷುಕಿಯ ಆನಂದ ಭಾವವನ್ನು ಕಂಡ ಲಕ್ಷ್ಮಮ್ಮಳು ಸಂತೃಪ್ತರಾಗುತ್ತಾರೆ. ಕತೆಯು ಲಕ್ಷ್ಮಮ್ಮನ ನೆಲೆಯಿಂದ ನಮ್ಮ ಪರಂಪರೆಯ ಭಾಗವಾಗಿರುವ ಅನ್ನದಾನದಂತಹ ಜೀವನ ಮೀಮಾಂಸೆಯನ್ನು ಸ್ಥಳೀಯತೆಯ ಭಾಗವಾಗಿ ಚರ್ಚಿಸುತ್ತದೆ.

ಸೇಡಿಯಾಪು ಕೃಷ್ಣಭಟ್ಟ, ಎಂ ಎನ್ ಕಾಮತ್, ಬಾಗಲೋಡಿ ದೇವರಾಯ,

ಕುವೆಂಪು, ಕೊರಡ್ಕಲ್ ಶ್ರೀನಿವಾಸರಾಯ ವಸಾಹತುಶಾಹಿಯ ಧೋರಣೆಗೆ ಪ್ರತಿಯಾಗಿ ಸ್ಥಳೀಯ ಪರಂಪರೆಯನ್ನು ಕತೆಯಲ್ಲಿ ನಿರೂಪಿಸುವ ಮೂಲಕ ಸ್ಥಳೀಯ ರೂಪುರೇಷೆಯನ್ನು ಕಟ್ಟುತ್ತಾರೆ. ಈ ಕತೆಯಲ್ಲಿ ಅಭಿವ್ಯಕ್ತವಾದ ನಮ್ಮ ನೆಲದ ನಂಬಿಕೆ, ಪರಂಪರೆಯನ್ನು ಸ್ಥಳೀಯತೆ ಎಂದು ಗುರುತಿಸುವ ಜೊತೆಗೆ ಈ ಸ್ಥಳೀಯತೆಯನ್ನು ಪರಂಪರೆಯ ಸ್ಥಳೀಯತೆ ಎಂದು ಕರೆಯಬಹುದು.

### ೩.೧.೨ ಆಡಳಿತಾತ್ಮಕ ಸ್ಥಳೀಯತೆ

ದಕ್ಷಿಣ ಕನ್ನಡ ಭಾಗವು ಪ್ರಾದೇಶಿಕ ಭಿನ್ನತೆಯ ಜೊತೆಗೆ ತನ್ನದೇ ಆದ ಆಡಳಿತಾತ್ಮಕ ವ್ಯವಸ್ಥೆಯನ್ನು ಹೊಂದಿತ್ತು. ತುಳುನಾಡು ಎಂಬ ನೆಲೆಯಿಂದ ಆಳ್ವಿಕೆ ಮಾಡಿದ ಅಲೂಪರು, ಸೂರಾಲಿನ ತೊಳಾಹರು, ಗೇರುಸೊಪ್ಪೆಯ ಸಾಳುವರು, ಕಾರ್ಕಳದ ಭೈರರಸ ಒಡೆಯರು, ಬಂಗಾಡಿಯ ಬಂಗರು, ಕುಂಬಳೆ ಬಲ್ಲಾಳ ಅರಸರು, ಹೊಸಂಗಡಿಯ ಹೊನ್ನೆಯ ಕಂಬಳಿಯರಸರು, ಮೂಡಬಿದರೆಯ ಚೌಟರು, ವಿಟ್ಲದ ಡೊಂಬ ಹೆಗ್ಗಡೆ, ವೇಣೂರಿನ ಅಜಿಲರು ಈ ಎಲ್ಲಾ ರಾಜಮನೆತನಗಳು ಸಂಪ್ರದಾಯ ಬದ್ಧವಾದ ಆಡಳಿತ ವ್ಯವಸ್ಥೆಯನ್ನು ರೂಪಿಸಿದ್ದರೂ ಈ ರಾಜಕೀಯ ವ್ಯವಸ್ಥೆಯು ಭಾರತೀಯ ಶ್ರೇಣಿಕೃತ ಸಾಮುದಾಯಿಕ ವ್ಯವಸ್ಥೆಯನ್ನು ಉಳಿಸಿಕೊಂಡು, ನ್ಯಾಯಿಕ, ಆರ್ಥಿಕ, ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಹಾಗೂ ಅಭಿವೃದ್ಧಿಗಳೆಂಬ ಸಂಸ್ಥೆಗಳು ಕಾರ್ಯ ನಿರ್ವಹಿಸಿಕೊಂಡು ಬಂದವಲ್ಲದೆ ಜನರ ಬದುಕಿನ ಭಾಗವಾಗಿದ್ದವು. ೧೭೯೯ರ ಬಳಿಕ ಟಿಪ್ಪುವಿನ ಸೋಲಿನ ನಂತರವಲ್ಲಿ ವಸಾಹತುಶಾಹಿಯ ಕರಾವಳಿ ಪ್ರದೇಶವನ್ನು ತನ್ನ ಆಡಳಿತದ ಕೇಂದ್ರವನ್ನಾಗಿಸಿಕೊಂಡಿತಲ್ಲದೆ, ಸ್ಥಳೀಯ ರಾಜರಿಂಗ ಅಧಿಕಾರವನ್ನು ತನ್ನಲ್ಲಿ ಕೇಂದ್ರೀಕರಿಸಿ ಕೊಂಡು, ವಸಾಹತುಶಾಹಿ ಕೇಂದ್ರಿತ ಧೋರಣೆಯನ್ನು ಶಿಕ್ಷಣ, ಧರ್ಮ, ಆಡಳಿತ ಕಾನೂನುಗಳ ಮೂಲಕ ಪ್ರಸಾರ ಮಾಡಿದರು. ಈ ರೀತಿಯ ವಸಾಹತುಶಾಹಿಯ ಧೋರಣೆಯು ಈ ಭಾಗದಲ್ಲಿ ಹೊಸ ವ್ಯವಸ್ಥೆಯನ್ನು ಹಾಗೂ ಸಾಮಾಜಿಕ, ಆರ್ಥಿಕ ಪಲ್ಲಟವನ್ನು ಉಂಟು ಮಾಡಿತು. ವಸಾಹತುಶಾಹಿಯ ಪ್ರಭಾವ ಮತ್ತು ಪ್ರೇರಣೆಯಿಂದ ನಮ್ಮ ಸ್ಥಳೀಯ ಆಡಳಿತ ವ್ಯವಸ್ಥೆ ನ್ಯಾಯಿಕ ಪದ್ಧತಿ ಧಾರ್ಮಿಕ ನೆಲೆ ಉತ್ಪನ್ನಗಳು ತನ್ನ ಅಸ್ತಿತ್ವವನ್ನು ಕಳೆದುಕೊಂಡವಲ್ಲದೆ ಅದರ ಜೊತೆಗಿನ ಜ್ಞಾನಪರಂಪರೆಯು ಮರೆಯಾಗುವಂತಾಯಿತು. ಇಂತಹ ಸಂದರ್ಭ ಈ ಭಾಗದ ಕತೆಗಾರರು ತಮ್ಮ ಸ್ಥಳೀಯ ಜ್ಞಾನವನ್ನು ಪ್ರಭುತ್ವಕ್ಕೆ ಮುಖಾಮುಖಿ ಯಾಗಿಸುವುದರ ಜೊತೆಗೆ ಗುಣಾತ್ಮಕ ನೆಲೆಯಲ್ಲಿ ಮಂಡಿಸಲು ಆರಂಭಿಸಿದರು.

ಬಾಗಲೋಡಿ ದೇವರಾಯ ಅವರ 'ಮಗ್ಗದ ಸಾಹೇಬ' ಎಂಬ ಕತೆಯು ವಸಾಹತುಶಾಹಿಯು ರೂಪಿಸಿದ ಆರ್ಥಿಕ ಹಾಗೂ ಕಾನೂನಾತ್ಮಕ ಧೋರಣೆಗಳಿಗೆ ದೇಶೀಯ ಕೈಗಾರಿಕೆಗಳನ್ನು ಮುಖಾಮುಖಿಯಾಗಿಸುವ ಜೊತೆಗೆ ಸ್ಥಳೀಯ ಮೀಮಾಂಸೆಯನ್ನು ನಿರೂಪಿಸಲು ಮುಂದಾಗುತ್ತದೆ. ವಸಾಹತುಶಾಹಿಯು ತನ್ನ ಕೈಗಾರಿಕೆಯ ಮೂಲಕ ಉತ್ಪಾದಿಸಿದ ವಸ್ತ್ರಗಳನ್ನು ಈ ಭಾಗದಲ್ಲಿ ಮಾರಾಟ ಮಾಡುವ ಕಾರ್ಯವನ್ನು ಮಾಡಿತು. ಹಾಗೂ ಈ ವಸ್ತ್ರಗಳನ್ನು ಸ್ಥಳಿಯರು ತಮ್ಮದಾಗಿ ಸ್ವೀಕರಿಸಿದಾಗ ದೇಶೀಯವಾಗಿ ಉತ್ಪಾದನೆಯಾಗುತ್ತಿದ್ದ ಮಗ್ಗದ ಕೈಗಾರಿಕೆ ಹಾಗೂ ಅದರ ಉತ್ಪನ್ನವು ತನ್ನ ಅಸ್ತಿತ್ವವನ್ನು ಕಳೆದುಕೊಂಡವು. ಇದೇ ಸಂದರ್ಭದಲ್ಲಿ ವಸಾಹತುಶಾಹಿಯ ವಿರುದ್ಧವಾದ ರಾಷ್ಟ್ರೀಯ ಹೋರಾಟವು ಮಗ್ಗ ಹಾಗೂ ಸ್ಥಳೀಯ ಕೈಗಾರಿಕೆಯನ್ನು ಉಳಿಸುವ ಧೋರಣೆಯನ್ನು ಕತೆಯು ನಿರೂಪಿಸುತ್ತದೆ.

ವಸಾಹತು ಪೂರ್ವದಲ್ಲಿ ಬುಡನ್ ಸಾಹೇಬ ಮಗ್ಗದ ಬಟ್ಟೆಗಳನ್ನು ಉತ್ಪಾದಿಸುವ ಹಾಗೂ ಮಾರಾಟ ಮಾಡುವ ವ್ಯವಸ್ಥೆಯನ್ನು ಹೊಂದಿದ್ದನು. ಬುಡನ್ ಸಾಹೇಬನ ಬಟ್ಟೆಯು ಜನಮುಖಿಯಾಗಿತ್ತಲ್ಲದೆ ಹೆಸರನ್ನು ಪಡೆದಿತ್ತು. ಆದರೆ ವಸಾಹತುಶಾಹಿಯ ಸಂದರ್ಭದಲ್ಲಿ ಪರಕೀಯ ಬಟ್ಟೆ ಹಾಗೂ ಆಧುನಿಕ ಕೈಗಾರಿಕೆಗಳ ಬೆಳವಣಿಗೆಯಿಂದ ಅಬ್ದುಲ್ ಕರೀಂನ ಕಾಲಕ್ಕೆ ಮಗ್ಗದ ಉತ್ಪಾದನೆ ತನ್ನ ನೆಲೆಯನ್ನು ಕಳೆದುಕೊಂಡಿತು. ಅಬ್ದುಲ್ ಕರೀಂ ವ್ಯಾಪಾರದಲ್ಲಿ ನಷ್ಟವನ್ನು ಅನುಭವಿಸಿದನಲ್ಲದೆ ಮಗ್ಗದ ಬಟ್ಟೆಯ ಬಗ್ಗೆ ತಿರಸ್ಕಾರದ ಭಾವನೆಯನ್ನು ಹೊಂದಿದನು. ಪಾಶ್ಚಾತ್ಯ ವಿಚಾರದಿಂದ ಪ್ರಭಾವಿತನಾದ ಕರೀಮನು ತನ್ನ ಮಕ್ಕಳಿಗೆ ಇಂಗ್ಲಿಷ್ ಶಿಕ್ಷಣವನ್ನು ಕೊಡಿಸುವ ಮೂಲಕ ಬ್ರಿಟಿಷ್ ವ್ಯವಸ್ಥೆಯಲ್ಲಿ ಅಧಿಕಾರಿಯಾಗಿಸುವ ಆಸೆಯಿಂದ ಹಲವು ಪ್ರಯತ್ನವನ್ನು ಮಾಡಲು ಆರಂಭಿಸಿದನು. ಆದರೆ ಅಬ್ದುಲ್ ಕರೀಮನ ಒಬ್ಬ ಮಗ ಕರೀಂ ಸಾಹೇಬ ಮಗ್ಗದ ಬಟ್ಟೆಯ ತಯಾರಿಕೆಯ ಬಗ್ಗೆ ಆಸಕ್ತಿಯನ್ನು ಹೊಂದಿ, ತಂದೆಯ ಪ್ರತಿರೋಧದ ನಡುವೆ ಖಾದಿ ಉತ್ಪಾದನೆಯ ತರಬೇತಿಯನ್ನು ಪಡೆದುಕೊಂಡು ಖಾದಿ ವಸ್ತ್ರವನ್ನು ಉತ್ಪಾದಿಸುವ ಆಲೋಚನೆಯನ್ನು ಮಾಡಿದ. ಕರೀಂ ಸಾಹೇಬನ ಈ ವಿಚಾರವನ್ನು ತಿಳಿದುಕೊಂಡ ಅವನ ತಂದೆ ಮನೆಯಿಂದ ಹೊರ ಹಾಕಿದರು. ಮನೆಯಿಂದ ಹೊರಬಂದ ಕರೀಮ ಸಾಹೇಬ ಮಗ್ಗದ ಬಟ್ಟೆಯ ಉತ್ಪಾದನೆಯಲ್ಲಿ ಆಸಕ್ತಿ ವಹಿಸಿದ ಹಾಗೂ ವಿಭಿನ್ನ ಮಾದರಿಗಳನ್ನು ಕಲಿತುಕೊಂಡು ಯಶಸ್ವಿಯನ್ನು ಪಡೆದುಕೊಂಡನು. ಇವನ ಈ ರೀತಿಯ ಸಾಧನೆಗೆ ಭಾರತ ಸರ್ಕಾರವು ಪದ್ಮಭೂಷಣ ಪ್ರಶಸ್ತಿ ನೀಡಿತು.

ಕತೆಗಾರರು ಕತೆಯಲ್ಲಿ ಸ್ಥಳೀಯ ಸಂಪನ್ಮೂಲಗಳನ್ನು ಬಲಗೊಳಿಸುವ ಮೂಲಕ ವಸಾಹತುಶಾಹಿಯನ್ನು ಮಣಿಸಬಹುದೆಂಬುವುದನ್ನು ಗುರುತಿಸುತ್ತಾರೆ. ಕರೀಮನ ಮೂಲಕ ಕತೆಗಾರರು ಹೇಳುವ ಮಗ್ಗ ಬೆಳವಣಿಗೆ ಹಾಗೂ ಸ್ಥಳೀಯ ಆರ್ಥಿಕತೆಯ ಕ್ರೋಢೀಕರಣವನ್ನು ವಸಾಹತುಶಾಹಿ ಪ್ರಭುತ್ವದ ಪ್ರತಿಯಾಗಿ ಮಂಡಿಸುತ್ತಾರೆ. ಈ ತಾತ್ವಿಕತೆಯನ್ನು ಸ್ಥಳೀಯತೆ ಎಂದು ಗುರುತಿಸಬಹುದು.

ಎಂ.ಎನ್. ಕಾಮತರ 'ಕದ್ದವರು ಯಾರು' ಎಂಬ ಕತೆಯು ವಸಾಹತುಶಾಹಿಯ ನ್ಯಾಯಿಕ ಅಭಿವ್ಯಕ್ತಿಯ ಕ್ರಮವನ್ನು ಹಾಗೂ ವೈಚಾರಿಕ ಬದುಕಿನ ಆಲೋಚನೆಯನ್ನು ಪ್ರಧಾನವಾಗಿ ಕೇಂದ್ರೀಕರಿಸುತ್ತದೆ ಹಾಗೂ ಪಟೇಲರ ಸಂಬಂಧವನ್ನು ಗ್ರಹಿಸುವ ಕತೆಯು ಗಂಡಿನ ಅಧಿಕಾರ ಹಾಗೂ ಸ್ಥಾನ-ಮಾನವನ್ನು ಉಳಿಸಿಕೊಳ್ಳುವುದರ ನೆಲೆಯಲ್ಲಿ ಹೆಣ್ಣನ್ನು ಕಳ್ಳಿಯೆಂದು ಅವಮಾನಿಸಿ ಹಿಂಸಿಸುವ ಲೋಕ ಗ್ರಹಿಕೆಯು ಗೆಜ್ಜೆ ಟೀಕುವಿನ ಮೂಲಕ ಕತೆಯಲ್ಲಿ ಅಭಿವ್ಯಕ್ತವಾಗುತ್ತದೆ.

ಪಟೇಲನ ಹೆಂಡತಿಯ ಗೆಜ್ಜೆ ಟೀಕು ಸ್ನಾನ ಮಾಡುವ ಸಂದರ್ಭದಲ್ಲಿ ಕಾಣದಿದ್ದಾಗ ಕಳ್ಳತನವಾಗಿದೆ ಎಂದೂ ಭಾವಿಸಿ ತನ್ನ ಜೊತೆಯಲ್ಲಿದ್ದ ಶಾನುಭೋಗನ ಹೆಂಡತಿ ನಾಗಮ್ಮ ಕದ್ದಿದ್ದಳೆಂದು ನಿರ್ಧರಿಸಿ, ಶಾನುಭೋಗರಿಗೆ ವಿಷಯ ತಿಳಿಸಿದಾಗ ಶಾನುಭೋಗರು ತನ್ನ ಹೆಂಡತಿಗೆ ಬೈದು, ಅವಮಾನಿಸಿ ಗೆಜ್ಜೆ ಟೀಕು ಕದ್ದದು ಕೊಡು ಎಲ್ಲಿಟ್ಟಿದ್ದೀಯ ಎಂದು ಗದರಿಸುತ್ತಾನೆ. ನಾಗಮ್ಮ ತಾನು ಕದ್ದಿಲ್ಲವೆಂದು ಎಷ್ಟು ಹೇಳಿದರೂ ನಂಬದ ಶಾನುಭೋಗ ತಾನು ಬದುಕುತ್ತಿರುವುದು ಅಧಿಕಾರವಿರುವುದು, ಪಟೇಲನ ಮೂಲಕವೆಂದು ಮಂತ್ರವಾದಿಯನ್ನು ಕರೆಸಿ ನಾಗಮ್ಮನ ಬಾಯಿಬಿಡಿಸುವ ಪ್ರಯತ್ನ ಮಾಡುತ್ತಿರುವ ಸಂದರ್ಭದಲ್ಲಿ ವಸಾಹತುಶಾಹಿಯ ಅಧಿಕಾರದಲ್ಲಿ ಇರುವ ಕಲೆಕ್ಟರನು ಅಲ್ಲಿಗೆ ಧಾವಿಸಿ, ನಾಗಮ್ಮನನ್ನು ಹಿಂಸಿಸುವುದನ್ನು ಕಂಡು ಅಲ್ಲಿಯ ವಿಚಾರ ತಿಳಿದ ಕಲೆಕ್ಟರನು ಮಂತ್ರವಾದಿಯನ್ನು ಕರೆದು ತನ್ನ ಪೋಲಿಸರಿಗೆ ವಹಿಸಿ 'ಗೆಜ್ಜೆ ಟೀಕು' ಪಟೇಲರಿಗೆ ನೀಡಿ ನ್ಯಾಯ ನಿರ್ಣಹಿಸಿದರು. ಕತೆಯು ವೈಚಾರಿಕ ಪ್ರಜ್ಞೆಯ ಜೊತೆಗೆ ವಸಾಹತುಶಾಹಿ ನ್ಯಾಯಿಕ ಧೋರಣೆಯ ಗುಣಾತ್ಮಕವಾದದ್ದೆಂಬ ನಿಲುವನ್ನು ಮಂಡಿಸುತ್ತದೆ.

ವಸಾಹತುಶಾಹಿಯ ನ್ಯಾಯಿಕ ವ್ಯವಸ್ಥೆಯನ್ನು ವಿಮರ್ಶೆಗೆ ಒಳಪಡಿಸುವ ಬಾಗಲೋಡಿ ದೇವರಾಯರ 'ಹುಚ್ಚು ಮುನಸೀಫ' ಕತೆಯು ಸ್ಥಳೀಯ ನ್ಯಾಯಿಕ ಮೀಮಾಂಸೆಯನ್ನು ಪ್ರಧಾನವೆಂದು ಚರ್ಚಿಸುತ್ತದೆ. ಸುಂದರಪ್ಪನು ನ್ಯಾಯಾಧೀಶನಾಗಿದ್ದ ಸಂದರ್ಭದಲ್ಲಿ ಕೊಲೆಗೆ ಸಂಬಂಧಿಸಿದ ವಿಚಾರಣೆಯನ್ನು ಮಾಡುವಾಗ ಸಾಕ್ಷಿಯ ರೂಪವಾಗಿ ದನಗಳನ್ನು ಕೋರ್ಟಿಗೆ

ಕರೆಸಿ ಅವುಗಳೊಂದಿಗೆ ಸಂಭಾಷಿಸಿದ ಸುಂದರಪ್ಪ ಕೊಲೆ ಮಾಡಿದ ಆರೋಪಿಗಳಿಗೆ ಶಿಕ್ಷೆಯನ್ನು ವಿಧಿಸುತ್ತಾರೆ. ಆದರೆ ಆರೋಪಿಗಳು ಸುಂದರಪ್ಪ ನೀಡಿದ ತೀರ್ಪನ್ನು ಪ್ರಶ್ನಿಸಿ ವಸಾಹತುವಿನ ಜಿಲ್ಲಾ ಕೋರ್ಟಿನಲ್ಲಿ ಸುಂದರಪ್ಪನು ವಸಾಹತುಶಾಹಿಯ ಕಾನೂನುಗಳನ್ನು ಪರಿಗಣಿಸಿಲ್ಲ. ಸಾಕ್ಷಿಯ ಸಂದರ್ಭದಲ್ಲಿ ಹಸುಗಳನ್ನು ಕರೆಯಲಾಗಿದೆ. ಹಾಗಾಗಿ ಸುಂದರಪ್ಪನು ನೀಡಿದ ನ್ಯಾಯ ಸತ್ಯವಾಗಿದ್ದಲ್ಲವೆಂದು ಮನವಿ ಸಲ್ಲಿಸಿದರು. ವಸಾಹತುಶಾಹಿ ನ್ಯಾಯ ವ್ಯವಸ್ಥೆಯು ಈ ಆರೋಪಿಗಳ ದೂರನ್ನು ವಿಚಾರಿಸಿ ನಿಜವಾದ ಕೊಲೆಗಾರರನ್ನು ನಿರಪರಾಧಿ ಎಂದು ಗುರುತಿಸಿತ್ತು ಹಾಗೂ ಸುಂದರಪ್ಪನನ್ನು ನ್ಯಾಯಾಧೀಶನ ಹುದ್ದೆಯಿಂದ ವಜಾ ಮಾಡಿತು.

ಕತೆಗಾರರು ಸುಂದರಪ್ಪನ ಮೂಲಕ ಸ್ಥಳೀಯ ನ್ಯಾಯಿಕ ವ್ಯವಸ್ಥೆಯನ್ನು ಮಂಡಿಸುತ್ತಾರೆ. ವಸಾಹತುಶಾಹಿಯ ಕಾನೂನು ಕೋರ್ಟು ಹಾಗೂ ನ್ಯಾಯಿಕ ವ್ಯವಸ್ಥೆಯು ಭ್ರಷ್ಟವಾಗಿದೆ ಎಂದು ಗುರುತಿಸುವ ತಾತ್ವಿಕತೆಯನ್ನು ಕತೆಯು ಸ್ಥಳೀಯತೆಯ ಭಾಗವಾಗಿ ಚರ್ಚಿಸುತ್ತದೆ.

ಪಂಜೆಯವರ 'ವೈದ್ಯರ ಒಗ್ಗರಣೆ' ಕತೆಯು ವಸಾಹತುಶಾಹಿಯ ನ್ಯಾಯಿಕ ವ್ಯವಸ್ಥೆಯ ಪ್ರತಿಯಾಗಿ ಭಾರತೀಯ ನ್ಯಾಯಿಕ ಪರಂಪರೆಯನ್ನು ಮುಖಾಮುಖಿಯಾಗಿಸುವುದನ್ನು ಕಾಣಬಹುದು. ಭಾರತವನ್ನು ವಸಾಹತುಶಾಹಿ ಆಕ್ರಮಿಸಿಕೊಂಡು ಆಳ್ವಿಕೆ ನಡೆಸಲು ಆರಂಭಿಸಿದ ಮೇಲೆ ಪಾಶ್ಚಾತ್ಯ ಮಾದರಿಯ ಕೋರ್ಟು ಕಾನೂನುಗಳನ್ನು ಏಕರೂಪತೆಯ ನೆಲೆಯಲ್ಲಿ ರೂಪಿಸಿತು. ಈ ವ್ಯವಸ್ಥೆಯು ಭಾರತೀಯ ನ್ಯಾಯಿಕ ವ್ಯವಸ್ಥೆಗಿಂತ ಉತ್ತಮವಾದದ್ದು ಎಂಬ ತಿಳುವಳಿಕೆ ರೂಪುಗೊಂಡ ಕಾಲಮಾನದಲ್ಲಿ ಕತೆಗಾರರು ಈ ನ್ಯಾಯಿಕ ವ್ಯವಸ್ಥೆಯನ್ನು ವಿಮರ್ಶೆಗೆ ಒಳಪಡಿಸುವ ಕೆಲಸ ಮಾಡುತ್ತಾರೆ. ಹಾಗೂ ವಸಾಹತುಶಾಹಿ ನ್ಯಾಯಿಕ ವ್ಯವಸ್ಥೆಗಿಂತ ಭಾರತೀಯ ಸ್ಥಳೀಯ ನ್ಯಾಯಿಕ ವ್ಯವಸ್ಥೆಯೇ ಗುಣಾತ್ಮಕವಾದದ್ದು ಎಂದು ನಿರೂಪಿಸುತ್ತಾರೆ. ವಲ್ಲಭಾಚಾರ್ಯರು ವಿಜಯಪುರದ ಅಮ್ದರ್ ಹುದ್ದೆಯನ್ನು ಪಡೆದ ಮೇಲೆ ಕೋರ್ಟಿನಲ್ಲಿ ನ್ಯಾಯ ನಿರ್ಣಯವನ್ನು ಮಾಡುವಾಗ ವಸಾಹತುಶಾಹಿಯ ಪೀನಲ್ ಕೋಡುಗಳ ಬದಲಾಗಿ ರಾಮಾಯಣ ಮತ್ತು ಮಹಾಭಾರತದ ಆದರ್ಶ ತತ್ವಗಳ ನೆಲೆಯಲ್ಲಿ ತೀರ್ಪು ನೀಡುತ್ತಾರೆ. ಈ ರೀತಿಯ ಸ್ಥಳೀಯತೆಯ ಪ್ರಧಾನತೆಯನ್ನು ಪಂಜೆಯವರ ಕತೆಯಲ್ಲಿ ಕಾಣಬಹುದು.

ವಸಾಹತುಶಾಹಿಯ ಆಡಳಿತದ ಸ್ವರೂಪವು ಕೈಗಾರಿಕೆ ಹಾಗೂ ನಗರದ ಬೆಳವಣಿಗೆ ಬಹುರೂಪಿಗೊಳಿಸಿತು. ಬಂಡವಾಳಶಾಹಿತ್ವದ ಆಲೋಚನೆಗಳು ಪ್ರಧಾನವಾದವು. ವ್ಯಕ್ತಿಯ

ಉದ್ದೇಶ ಲಾಭಗಳಿಸುವುದು ಆಯಿತು. ಭಾರತೀಯ ಪರಂಪರೆಯ ನೆಲೆಯಲ್ಲಿ ನಡೆಸಿಕೊಂಡು ಬಂದಿದ್ದ ದಾನ, ಧರ್ಮ, ವಸ್ತುಗಳ ಬಗೆಗಿನ ಪೂಜ್ಯತೆಯ ಬಾವ ಹಾಗೂ ಪ್ರಕೃತಿಯೊಂದಿಗಿನ ಭಾವನಾತ್ಮಕ ಸಂಬಂಧವು ವಸಾಹತುಶಾಹಿಯ ಪ್ರಭಾವದಿಂದ ನಿಧಾನಕ್ಕೆ ದೂರಕ್ಕೆ ಸರಿದು ಬಂಡವಾಳ ಮೀಮಾಂಸೆ ಜೀವ ಪಡೆಯಿತು. ಈ ರೀತಿಯ ಬೆಳವಣಿಗೆಯನ್ನು ಈ ಭಾಗದ ಕತೆಗಾರರು ಗುರುತಿಸಿದರಲ್ಲದೆ ಅದನ್ನು ಸ್ಥಳೀಯತೆಯ ನೆಲೆಯಲ್ಲಿ ಅಭಿವ್ಯಕ್ತಿಸಿದರು.

ಪಂಜೆಯವರ 'ಕಮಲಪುರ ಹೊಟ್ಲಿನಲ್ಲಿ' ಕತೆಯಲ್ಲಿ ಹೊಸದಾಗಿ ನಗರಗಳಲ್ಲಿ ಹುಟ್ಟಿಕೊಂಡ ಹೊಟೇಲುಗಳಲ್ಲಿ ಜನರನ್ನು ಹೇಗೆ ಆಕರ್ಷಣೆಯ ಕೇಂದ್ರವಾದವು ಮತ್ತು ಆಹಾರವು ಲಾಭದ ಭಾಗವಾದ ಬಗೆಯನ್ನು ಸೂಕ್ಷ್ಮವಾಗಿ ಚರ್ಚಿಸುತ್ತದೆ. ಗುಂಡಾಚಾರ್ಯ ತನ್ನ ವ್ಯಾಪಾರವನ್ನು ಹೆಚ್ಚಿಸುವ ಸಲುವಾಗಿ ಹೇಳುವ ಕತೆ ಹಾಗೂ ಗಿರಾಕಿಗಳಿಂದ ಹಣವನ್ನು ವಸೂಲಿ ಮಾಡುವ ರೀತಿಯು ಬಂಡವಾಳಶಾಹಿತ್ವದ ಚೌಕಟ್ಟನ್ನು ನಿರೂಪಿಸುತ್ತದೆ. ಈ ರೀತಿಯ ಆಲೋಚನೆಯನ್ನೆ ಗುರುತಿಸುವ ಇದಿನಬ್ಬನವರ ಸೋತ ಮೇಲೆ ಬುದ್ಧಿ ಎಂಬ ಕತೆಯು ಲಾಭವನ್ನು ಕೇಂದ್ರವಾಗಿಸಿ ಕೊಂಡು ರೈತರಿಗೆ ಮೋಸ ಮಾಡುವ ವ್ಯಾಪಾರಿ ವರ್ಗದ ನಡೆ ಹಾಗೂ ವ್ಯಾಪಾರದ ತಂತ್ರವನ್ನು ತಾತ್ವೀಕರಿಸುತ್ತದೆ. ನಗರದ ಅಡಿಕೆಯ ವ್ಯಾಪಾರಿ ಕೊರಗಯ್ಯ ತಿಮ್ಮಪ್ಪನಿಗೆ ಲಂಚ ನೀಡಿ, ಹನ್ನೆರಡು ಖಂಡಿ ಅಡಿಕೆ ಬೆಳೆಯುತ್ತಿದ್ದ ಕಿಟ್ಟಯ್ಯನನ್ನು ತನ್ನ ಬಲೆಗೆ ಬೀಳಿಸಿಕೊಂಡು ನೋಡಿಕೊಂಡು ಕಿಟ್ಟಯ್ಯನಿಗೆ ತಿಳಿಯದಂತೆ ಲಾಭ ಮಾಡಿಕೊಳ್ಳುತ್ತಾನೆ.

ಕತೆಯು ಲಾಭವನ್ನು ಕೇಂದ್ರವಾಗಿಸಿದೆ, ಹಣವನ್ನು ಮಾಡಲು ಆ ಕಾಲಮಾನದಲ್ಲಿ ವ್ಯಕ್ತಿಯು ನಡೆಸಿದ್ದ ವ್ಯಾಪಾರದಲ್ಲಿ ಮೋಸ, ನಂಬಿಕೆ ದ್ರೋಹದಂತಹ ವಿಚಾರಗಳು ನಮ್ಮ ಪರಂಪರೆಗೆ ವಿರುದ್ಧವಾದ ನೆಲೆಗಳು, ವಸ್ತುಗಳ ವ್ಯಾಪಾರದಲ್ಲಿ ನಂಬಿಕೆ, ಮೌಲ್ಯಯುತವಾದ ಸಂಬಂಧಗಳು ವಸಾಹತುಶಾಹಿಯ ಪ್ರಭಾವದಿಂದ ಹೇಗೆ ಮರೆಯಾದವು ಎಂಬುವುದನ್ನು ಕತೆಯು ಮಂಡಿಸುತ್ತದೆ.

ವಸಾಹತುಶಾಹಿಯ ಧೋರಣೆಗಳಿಗೆ ಕತೆಗಾರರು ಸ್ಥಳೀಯತೆಯ ಮೂಲಕ ಪ್ರತಿಕ್ರಿಯಿಸುತ್ತಾರೆ. ಕಾನೂನು ವ್ಯವಸ್ಥೆ, ಆಡಳಿತ ವ್ಯವಸ್ಥೆ, ಆಧುನೀಕರಣದಂತಹ ರೂಪುಗಳು ಭಾರತದ ಸಮಾಜದ ಸತ್ವವನ್ನೆ ಬದಲಾಯಿಸಿದವು ಹಾಗೂ ದೀರ್ಘವಾದ ಪರಿಣಾಮವನ್ನು ಉಂಟು ಮಾಡಿದವು. ದಕ್ಷಿಣದ ಭಾಗದ ಕತೆಗಾರರು ವಸಾಹತುಶಾಹಿಯ ಆಡಳಿತಾತ್ಮಕ ಧೋರಣೆಯನ್ನು ವಿರೋಧಿಸಿ, ಸ್ಥಳೀಯ ವ್ಯವಸ್ಥೆಯನ್ನು ಗುಣಾತ್ಮಕವಾಗಿ ಕತೆಯ ಮೂಲಕ ನಿರೂಪಿಸುತ್ತಾರೆ. ಇನ್ನೂ ಕೆಲವು ಸಂದರ್ಭದಲ್ಲಿ ವಸಾಹತುಶಾಹಿಯ ಉತ್ತಮವಾದ

ನ್ಯಾಯಿಕ ನೆಲೆಯನ್ನು ನಮ್ಮ ಸ್ಥಳೀಯ ನ್ಯಾಯಿಕ ವ್ಯವಸ್ಥೆಯೊಂದಿಗೆ ಸಂಕರವಾಗಿಸುತ್ತಾರೆ. ಸ್ಥಳೀಯತೆಯು ಈ ಕತೆಗಳಲ್ಲಿ ವಸಾಹತುಶಾಹಿಯ ಪ್ರಕ್ರಿಯೆಯಾಗಿ ರೂಪುಗೊಂಡಂತಿದ್ದರೂ ಸಹಾ ಜೀವನ ಸತ್ವವನ್ನು ಉಳಿಸಿಕೊಂಡಿದೆ.

### ೪.೧.೩ ಸಂಬಂಧದ ಸಂಕರತೆಯ ಸ್ಥಳೀಯತೆ

ದಕ್ಷಿಣ ಕನ್ನಡದ ಭಾಗದ ಪರಿಸರವು ಬಹುಬೇಗ ವಸಾಹತುಶಾಹಿ ಆಲೋಚನೆಗೆ ತೆರೆದುಕೊಂಡ ಪರಿಣಾಮದಿಂದ ಸಾಮಾಜಿಕವಾಗಿ ಹೆಚ್ಚಿನ ಪಲ್ಲಟವನ್ನು ಕಂಡುಕೊಂಡಿತು. ಕೈಗಾರಿಕೆಯ ಬೆಳವಣಿಗೆ, ಆಸ್ಪತ್ರೆ, ಹೊಟೇಲುಗಳ ಉದಯ, ಪಾಶ್ಚಾತ್ಯ ಶಿಕ್ಷಣ, ಮುದ್ರಣ ವ್ಯವಸ್ಥೆ, ಕ್ರಿಸ್ತ ಮಿಷನರಿಗಳ ಸಾಂಸ್ಕೃತಿಕ ಕಾರ್ಯಗಳು ಕುಟುಂಬ ವ್ಯವಸ್ಥೆಯಲ್ಲಿ ತೀವ್ರವಾದ ಬದಲಾವಣೆಯನ್ನು ತಂದಿತು. ಹೆಣ್ಣು ಗಂಡುಗಳ ನಡುವಿನ ಸಂಬಂಧ ಸಂಘರ್ಷಗಳು ಕುಟುಂಬವನ್ನು ವಿಘಟಿಸಿದವು. ಈ ಸ್ಥಿತಿಯು ಸಮಾಜದ ಆರೋಗ್ಯವನ್ನು ಹಾಳು ಮಾಡಿತು. ಈ ಸಾಮಾಜಿಕ ಸಂದರ್ಭವನ್ನು ಮೊದಲ ತಲೆಮಾರಿನ ಕತೆಗಾರರು ಗ್ರಹಿಸಿದರಲ್ಲದೆ ಸಮಾಜವನ್ನು ಸ್ಥಳೀಯ ಜೀವನ ಮೀಮಾಂಸೆಯ ಮೂಲಕ ಕಟ್ಟುವ ಕೆಲಸವನ್ನು ಕತೆಗಳ ಮೂಲಕ ಅಭಿವ್ಯಕ್ತಿಸಿದರು.

ಮಟ್ಟಾರು ವಿಠಲ ಹೆಗ್ಡೆಯವರ 'ಮಗುವಿನ ತಂದೆ' ಕತೆಯು ನಗರಗಳ ಬೆಳವಣಿಗೆ, ಉದ್ಯೋಗ, ವಲಸೆಯಂತಹ ಚಟುವಟಿಕೆಗಳು, ಹೆಣ್ಣು ಗಂಡುಗಳ ಮನೋಕಾಮನೆಗಳನ್ನು ಹೇಗೆ ವ್ಯಕ್ತಪಡಿಸಿತು ಎಂಬುವುದನ್ನು ಗುರುತಿಸುವ ಜೊತೆಗೆ ಗಂಡ ಹೆಂಡತಿಯನ್ನು ಒಟ್ಟಿಗೆ ಬೆಸೆಯುವ ತಾತ್ವಿಕತೆಯನ್ನು ಹೊಂದಿದೆ. ಜಿಲ್ಲಾ ವೈದ್ಯನಾದ ಮೂರ್ತಿಯು ಲಲಿತೆ ಎಂಬವಳನ್ನು ಪ್ರೀತಿಸಿ, ಲಗ್ನವಾಗುತ್ತಾನೆ. ವೈದ್ಯನಾಗಿದ್ದರಿಂದ ಲಲಿತೆಗೆ ಸಮಯವನ್ನು ನೀಡಲು ಸಾಧ್ಯವಾಗದೆ ಅವಳ ಆಸೆಯನ್ನು, ಮನೋಕಾಮನೆಯನ್ನು ಪೂರ್ಣಗೊಳಿಸುವಲ್ಲಿ ವಿಫಲನಾಗುತ್ತಾನೆ. ಲಲಿತೆ ತನ್ನ ಆಸೆಗಳು ಪೂರ್ಣವಾಗದೆ ನೊಂದುಕೊಳ್ಳುತ್ತಾಳೆ ಮತ್ತು ತನ್ನ ಯೌವನದ ಆಸೆಗಳನ್ನು ತನ್ನಲ್ಲೆ ಬಚ್ಚಿಟ್ಟುಕೊಳ್ಳುತ್ತಾಳೆ.

ನಂತರದ ದಿನಗಳಲ್ಲಿ ಪರಿಚಯವಾದ ಬೆಸ್ತ ಹುಡುಗನೊಂದಿಗೆ ಲಲಿತೆ ತನ್ನ ಬಯಕೆಯನ್ನು ಪೂರೈಸಿಕೊಳ್ಳುತ್ತಾಳೆ ಹಾಗೂ ಇದರ ಪರಿಣಾಮದಿಂದ ಗರ್ಭಿಣಿಯಾಗುತ್ತಾಳೆ. ಈ ಸಂದರ್ಭದಲ್ಲಿ ಲಲಿತೆಗೆ ದ್ವಂದ್ವವಾದ ಚಿಂತೆಯು ಮೂಡುತ್ತದೆ. ಹೊಟ್ಟೆಯಲ್ಲಿ ಇರುವ ಮಗು ಗಂಡನದ್ದೊ, ಬೆಸ್ತನದ್ದೊ ಎಂದು. ಈ ಸಂದರ್ಭದಲ್ಲಿ ಲಲಿತೆಯ ಗಂಡನಿಗೆ ಬೇರೆ ಊರಿಗೆ ವರ್ಗಾವಣೆಯಾಗುತ್ತದೆ. ಮೂರ್ತಿ ಲಲಿತೆಯ ಹೆರಿಗೆಗೆ

ಎಲ್ಲಾ ವ್ಯವಸ್ಥೆ ಮಾಡಿ ಹೋಗುತ್ತಾನೆ. ಲಲಿತೆಗೆ ಹುಟ್ಟುವ ಮಗುವಿನದ್ದೆ ಚಿಂತೆಯಾಗಿ, ಸಮಸ್ಯೆಯಾಗಿ ಕಾಡುತ್ತದೆ. ತನ್ನ ಗೆಳೆಯನಾದ ಬೆಸ್ತನಲ್ಲಿ ಚರ್ಚಿಸುತ್ತಾಳೆ, ಬೆಸ್ತರ ಹುಡುಗ ಮಗು ಹೆತ್ತಮೇಲೆ ತನ್ನ ಅಜ್ಜಿಗೆ ನೀಡಿ, ಗಂಡನಿಗೆ ಮಗು ಸತ್ತಿತೆಂದು ಹೇಳಬೇಕೆಂದು ಸಲಹೆ ನೀಡುತ್ತಾನೆ. ಈ ಸಲಹೆಯನ್ನು ಇಬ್ಬರು ಒಪ್ಪಿಕೊಳ್ಳುತ್ತಾರೆ.

ಮೂರ್ತಿಗೆ ಬೆಸ್ತರ ಮುದುಕಿಯಿಂದ ಎಲ್ಲಾ ವಿಚಾರ ತಿಳಿದು ಮಗುವನ್ನು ಸಂಜೆ ಮನೆಗೆ ತರಬೇಕೆಂದು ಮುದುಕಿಗೆ ಮೂರ್ತಿ ಹೇಳುತ್ತಾನೆ. ಮುದುಕಿ ಮಗುವನ್ನು ಮನೆಗೆ ತಂದಾಗ ಮೂರ್ತಿ ಲಲಿತೆಯನ್ನು ಕರೆದು 'ಈ ಮಗು ನಮ್ಮದಲ್ಲದಿದ್ದರೂ ನಮ್ಮಂತೆಯೇ ಇದೆ. ಈ ಮಗು ನಮಗಿರಲಿ ಎಂದಾಗ ಲಲಿತೆ ಮೂರ್ತಿಯ ಕಾಲಿಗೆ ಬಿದ್ದು ನಡೆದ ಘಟನೆಯನ್ನು ವಿವರಿಸುತ್ತಾಳೆ. ಮೂರ್ತಿ ತನ್ನ ತಪ್ಪನ್ನು ಅರಿತುಕೊಂಡು ಹೆಂಡತಿ, ಮಗುವನ್ನು ಅಪ್ಪಿಕೊಂಡು ಮನೆಯೊಳಕ್ಕೆ ಹೋಗುತ್ತಾನೆ. ಮೂರ್ತಿ ಹೆಂಡತಿಯ ನಡೆಗೆ ತನ್ನದೆ ತಪ್ಪು ಎಂಬುವುದು ಅರಿತುಕೊಂಡು ಕುಟುಂಬದೊಂದಿಗೆ ಬೆಸೆದುಕೊಳ್ಳುತ್ತಾರೆ.

'ಸೀದ ಒಗ್ಗರಣೆ' ಟಿ.ಎಸ್. ಸಂಜೀವ್‌ರಾವ್ ಅವರ ಕತೆಯು ಗೃಹಿಣಿಯೊಬ್ಬಳು ತನ್ನ ಕುಟುಂಬವನ್ನು ಅತ್ಯಂತ ಚಾತುರ್ಯದಿಂದ ಕಟ್ಟುವ ತಾತ್ವಿಕತೆಯನ್ನು ಸ್ಥಳೀಯತೆಯ ಎಳೆಯೊಳಗೆ ಮಂಡಿಸುತ್ತದೆ. ಉದ್ಯೋಗದ ಕಾರಣದಿಂದ ನಗರವನ್ನು ಸೇರಿದ ಶಿವರಾಮ, ಗೋಪಾಲಯ್ಯ, ನಾಣಿ, ಇತರ ನಾಲ್ಕು ಜನ ಸ್ನೇಹಿತರು ಊಟದ ವಿಚಾರದಲ್ಲಿ ಸಮಸ್ಯೆಯನ್ನು ಅನುಭವಿಸಿ ಕೊನೆಗೆ ಅವರಲ್ಲಿ ಹಿರಿಯರಾದ ಗೋಪಾಲಯ್ಯ ತನ್ನ ಹೆಂಡತಿಯನ್ನು ಕರೆತರುವುದಾಗಿ ಹೇಳುವ ಮೂಲಕ ಸಮಸ್ಯೆಗೆ ಪರಿಹಾರವನ್ನು ಸೂಚಿಸಿದರು. ಗೋಪಾಲಯ್ಯನ ಹೆಂಡತಿ ಲಲಿತೆಯು ಮನೆಗೆ ಬಂದ ಮೇಲೆ ವ್ಯವಸ್ಥಿತವಾದ ದಿನಚರಿಯು ಆರಂಬಿಸಿದ ಗೋಪಾಲಯ್ಯ ಮತ್ತು ಆತನ ಗೆಳೆಯರು ಲಲಿತೆಯೊಂದಿಗೆ ಪ್ರೀತಿಯಿಂದ ಗೌರವದಿಂದ ನಡೆದುಕೊಳ್ಳಲಾರಂಭಿಸಿದರು. ಲಲಿತೆಯ ಸರಳತೆ ಮತ್ತು ಎಲ್ಲರೊಂದಿಗೆ ಬೆರೆಯುವ ಮನೋಭಾವ ಗೋಪಾಲಯ್ಯನ ಗೆಳೆಯರಿಗೆ ಸಲಿಗೆಯನ್ನು ತಂದಿತು. ಗೋಪಾಲಯ್ಯನ ಗೆಳೆಯರಲ್ಲಿ ಒಬ್ಬನಾದ ಶಿವಾರಾಮಯ್ಯ, ಲಲಿತೆಯೊಂದಿಗೆ ಹೆಚ್ಚು ಸಲಿಗೆಯಿಂದ ವರ್ತಿಸುತ್ತಿದ್ದ. ಲಲಿತೆಯ ಆತ್ಮೀಯತೆಯ ನಡೆಯನ್ನು ತಪ್ಪಾಗಿ ತಿಳಿದುಕೊಂಡು ಲಲಿತೆಯೊಂದಿಗೆ ಅಸಭ್ಯವಾಗಿ ವರ್ತಿಸಿದ ಶಿವರಾಮನನ್ನು ಅತ್ಯಂತ ಚತುರತೆಯಿಂದ ಯಾರಿಗೂ ಅರಿವಾಗದಂತೆ ಬುದ್ಧಿ ಕಲಿಸುವ ಲಲಿತೆಯ ಮನೋಭಾವ, ಶಿವರಾಮ ಏನು ಮಾಡಿದ ಎಂಬುವುದನ್ನು ತನ್ನ ಗಂಡ ಹಾಗೂ ಇತರಿಗೆ ಹೇಳದೆ ಸಂಸಾರವನ್ನು ಒಟ್ಟಿಗೆ ರೂಪಿಸುವ ಕಾರ್ಯವನ್ನು ಮಾಡುತ್ತಾಳೆ. ಲಲಿತೆಯ ಸಂಸಾರವನ್ನು ಬೆಸೆಯುವ

ಸಂಬಂಧವನ್ನು ಸಹಜ ಸ್ಥಿತಿಯಲ್ಲಿ ಇಟ್ಟುಕೊಳ್ಳುವ ಗುಣವನ್ನು ಸ್ಥಳೀಯತೆ ಎಂದು ಕರೆಯಬಹುದು.

ಕೇರೂರು ವಾಸುದೇವಾಚಾರ್ಯರ 'ತೊಳೆದ ಮುತ್ತು' ಕತೆಯು ಗಂಡ ಹೆಂಡತಿಯನ್ನು ಬೆಸೆಯುವ ಜೊತೆ, ಆ ಕಾಲಘಟ್ಟದಲ್ಲಿ ವಸಾಹತುಶಾಹಿಯ ಧೋರಣೆಯನ್ನು ಒಪ್ಪಿಕೊಂಡ ವಿದ್ಯಾವಂತ ವರ್ಗ ಭಾರತೀಯ ಪರಂಪರೆಯನ್ನು ತನ್ನ ಜೀವನ ವಿಧಾನವಾಗಿಸಿಕೊಂಡ ಜನರನ್ನು ಹೇಗೆ ಕಂಡರು ಹಾಗೂ ಅವರ ನಡುವಿನ ಸಂಘರ್ಷವನ್ನು ಚರ್ಚಿಸುವ ಕತೆಯು ಬ್ರಾಹ್ಮಣ ಸಮುದಾಯ ಹೇಗೆ ಪಾಶ್ಚಾತ್ಯ ಸಂಸ್ಕೃತಿಯನ್ನು ವಿದ್ಯಾವಂತನೆಂಬ ನೆಲೆಯಲ್ಲಿ ಒಪ್ಪಿಕೊಂಡು ಅನುಸರಿಸಿತು ಎಂಬುವುದನ್ನು ಮಾಧವ ಹಾಗೂ ಗುಂಡಮ್ಮನನ್ನು ಬೆಸೆಯುವ ಅಭಿವ್ಯಕ್ತಿಯ ನೆಲೆಯಲ್ಲಿ ಚರ್ಚಿಸುತ್ತದೆ. ಮಾಧವ ನಗರದ ವಿದ್ಯಾಭ್ಯಾಸವನ್ನು ಮಾಡಿದನಲ್ಲದೆ ಪಾಶ್ಚಾತ್ಯ ಜೀವನ ವಿಧಾನವನ್ನು ಶ್ರೇಷ್ಠವೆಂದು ಒಪ್ಪಿಕೊಂಡು ಅನುಕರಿಸಲಾರಂಭಿಸುತ್ತಾನೆ. ಆದರೆ ಮಾಧವ ತಂದೆ ಭಾರತೀಯ ಜೀವನ ವಿದಾನದಲ್ಲಿ ನಡೆದವರಾಗಿದ್ದರಿಂದ ಮಾದವನಿಗೆ ಗುಂಡಕ್ಕನೆಂಬ ಕನ್ಯೆಯನ್ನು ಲಗ್ನವಾಗಬೇಕೆಂದು ಒತ್ತಾಯಿಸುತ್ತಾರೆ. ತಂದೆ ತಾಯಿಯ ಒತ್ತಾಯಕ್ಕೆ ಮಣಿದ ಮಾಧವ ಇಷ್ಟವಿಲ್ಲದಿದ್ದರೂ ಗುಂಡಕ್ಕನನ್ನು ಲಗ್ನವಾಗುತ್ತಾನೆ. ಲಗ್ನವಾದ ಮೇಲೆ ಪಟ್ಟಣ ಸೇರಿದ ಮಾಧವ ಹೆಂಡತಿಯನ್ನು ಮನೆಯನ್ನು ತಿರಸ್ಕರಿಸಿ, ತನಗೆ ಬೇಕಾದ ಹುಡುಗಿಯನ್ನು ಆಯ್ಕೆ ಮಾಡಿಕೊಳ್ಳುತ್ತೇಂದು ನಿಂತಾಗ ಮಾಧವನ ಸಂಬಂಧಿಯಾದ ಶೇಷಗಿರಿ ನಾಯಕರು ಸುಧಾರಣವಾದಿಗಳ ಪ್ರಭಾವದಿಂದ ಪಾಶ್ಚಾತ್ಯ ಜೀವನ ವಿಧಾನವನ್ನು ಒಪ್ಪಿಕೊಂಡವರು ಗುಂಡಕ್ಕನನ್ನು ಪಾಶ್ಚಾತ್ಯ ಜೀವನ ವಿದಾನವನ್ನು ಒಪ್ಪಿಕೊಂಡ ಹೆಣ್ಣಿನಂತೆ ರೂಪಿಸಿ, ಚಂದ್ರಭಾಗೆ ಎಂಬ ಹೆಸರಿನಿಂದ ಮಾಧವನಿಗೆ ಪರಿಚಯಿಸುತ್ತಾರೆ. ಮಾಧವ ಚಂದ್ರಭಾಗೆಯ ಪಾಶ್ಚಾತ್ಯ ಸೋಗಿನ ಜೀವನ ವಿಧಾನವನ್ನು ಕಂಡು ಇಷ್ಟಪಟ್ಟು ಲಗ್ನವಾಗುತೆಂದು ನಾಯಕರಲ್ಲಿ ಒತ್ತಾಯಿಸಿದಾಗ ನಾಯಕರು ಒಪ್ಪಿಕೊಂಡು ಚಂದ್ರಭಾಗೆಯೇ ಗುಂಡಕ್ಕನೆಂದು ತಿಳಿಸುತ್ತಾರೆ ಹಾಗೂ ಮಾಧವ ಗುಂಡಕ್ಕ ಸಂತೋಷದಿಂದ ಒಂದಾಗುತ್ತಾರೆ.

ಕತೆಯು ಭಾರತೀಯ ಜೀವನ ಸತ್ವವನ್ನು ಅಂದರೆ ಸ್ಥಳೀಯತೆಯನ್ನು ಏಕೆ? ಶ್ರೇಷ್ಠವೆಂದು ಒಪ್ಪಿಕೊಳ್ಳಬಾರದು ಎಂಬ ಆಲೋಚನೆಯನ್ನು ನಿರೂಪಸಿದರೂ ಅದು ಗೌಣವಾಗಿ, ಸುಧಾರಣಾವಾದಿ ನೆಲೆಯಲ್ಲಿ ಭಾರತೀಯ ಕಟುಂಬಗಳನ್ನು ನೋಡುವ ತಾತ್ವಿಕತೆಯನ್ನು ಮಂಡಿಸುತ್ತದೆ. ಗಂಡು ಹೆಣ್ಣುಗಳನ್ನು ಬೆಸೆಯುವ ನೆಲೆಯಲ್ಲಿ ಪಾಶ್ಚಾತ್ಯ ಜೀವನ ವಿಧಾನವನ್ನು ಗುಣಾತ್ಮಕವೆಂದು ಕಾಣಿಸುವ ಕತೆಗಾರರು ಆ ಕಾಲಘಟ್ಟದಲ್ಲಿ

ಪಾಶ್ಚಾತ್ಯ ಜೀವನ ವಿಧಾನವು ಹೇಗೆ ಸ್ಥಳೀಯ ಜೀವನ ವಿನ್ಯಾಸವನ್ನು ಮೀರಿತು ಎಂಬುವುದನ್ನು ಚರ್ಚಿಸುತ್ತಾರೆ.

ಗೋಪಿಚಂದ್ ರಾವ್ ಅವರ 'ಒಡೆದು ಬೆಸೆದ ಗಡಿಗೆ' ಎಂಬ ಕತೆಯು ಒಟ್ಟಿಗೆ ಬೆಸೆಯುವ ಮೀಮಾಂಸೆಯನ್ನೆ ಉಳಿಸಿಕೊಳ್ಳುತ್ತದೆ. ಮಕ್ಕಳ ಮನಸ್ಸನ್ನು ಕಟ್ಟುವ ಚಿಂತನೆಯನ್ನು ಹೊಂದಿರುವ ಗೋಪಾಲಯ್ಯ ಮಾಸ್ತರರು ತಮ್ಮ ಶಾಲೆಯಲ್ಲಿನ ವಿದ್ಯಾರ್ಥಿಗಳಾದ ರಾಜು ಮತ್ತು ಮಂಜು ಇಬ್ಬರು ದ್ವೇಷವನ್ನು ಸಾಧಿಸುತ್ತಿರುವುದನ್ನು ಗಮನಿಸಿ ವಾರ್ಷಿಕೋತ್ಸವದ ಸಂದರ್ಭದಲ್ಲಿ ಹತ್ತಿರಕ್ಕೆ ತರುವ ಉದ್ದೇಶದಿಂದ ತಮ್ಮ ಮನೆಗೆ ರಾಜು, ಮಂಜನನ್ನು ಕರೆಸಿಕೊಂಡು ಇಬ್ಬರಲ್ಲಿ ಹುಟ್ಟಿದ ದ್ವೇಷವನ್ನು ತಿಳಿಯಾಗಿಸಿ ಸ್ನೇಹಿತರನ್ನಾಗಿ ಮಾಡುತ್ತಾರೆ. ಕತೆಗಾರರು ಮಾಸ್ತರರ ಮೂಲಕ ಮಕ್ಕಳನ್ನು ಒಟ್ಟಿಗೆ ಬೆಸೆಯುವ ನಮ್ಮ ನೆಲದ ಸ್ಥಳೀಯ ಸತ್ವವನ್ನು ನಿರೂಪಿಸುತ್ತಾರೆ.

ದಕ್ಷಿಣ ಕನ್ನಡ ಭಾಗದ ಕತೆಗಾರರು ವಸಾಹತುಶಾಹಿ ಸಂದರ್ಭದಲ್ಲಿ ಉಂಟಾದ ಸಾಮಾಜಿಕ ಬದಲಾವಣೆ ಕುಟುಂಬ ವಿನ್ಯಾಸದ ಪಲ್ಲಟ, ಹೆಣ್ಣು ಗಂಡು ಸಂಬಂಧದಲ್ಲಿ ಉಂಟಾದ ವ್ಯತ್ಯಾಸಗಳನ್ನು ಗುರುತಿಸುವ ಜೊತೆಗೆ ಸ್ಥಳೀಯ ಜೀವನ ಮೀಮಾಂಸೆಯು ಬದಲಾವಣೆಯನ್ನು ಕಾಣುತ್ತಿದ್ದ ಬಗೆಯನ್ನು ನಿರೂಪಿಸುತ್ತಾರೆ. ಸ್ಥಳೀಯತೆಯ ಸತ್ವವು ಗಾಢವಾಗಿ ಕತೆಗಳಲ್ಲಿ ಕಂಡುಬಂದರೂ ಪಾಶ್ಚಾತ್ಯ ಪ್ರಭಾವದಿಂದ ಬದಲಾವಣೆಯನ್ನು ಹೊಂದುವುದನ್ನು ಗಮನಿಸಬಹುದು. ಭಾರತೀಯ ಜೀವನ ಸತ್ವವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಸಂಬಂಧವನ್ನು ಬೆಸೆಯುವ ಚಿಂತನೆಯನ್ನು ಸ್ಥಳೀಯತೆ ಎಂದು ಕರೆಯಬಹುದು. ಈ ರೀತಿಯ ಸಂಬಂಧವನ್ನು ಬೆಸೆಯುವ ಸತ್ವವನ್ನು ಅತಿಹೆಚ್ಚು ಕತೆಗಾರರು ಅನುಸಂಧಾನಕ್ಕೆ ಒಳಗು ಮಾಡಿದ್ದು ಮೊದಲ ತಲೆಮಾರಿನ ಕತೆಗಳ ವಿಶೇಷವಾಗಿದೆ.

### ೫.೧.೪ ಯಜಮಾನಿಕೆಯ ಸ್ಥಳೀಯತೆ

ತುಳು ಅರಸು ಮನೆತನದ ಆಳ್ವಿಕೆಗೆ ಒಳಪಟ್ಟ ದಕ್ಷಿಣ ಕನ್ನಡ ಭಾಗವು ಊಳಿಗಮಾನ್ಯ ವ್ಯವಸ್ಥೆಯಿಂದ ಹೊರತಾಗಿರಲಿಲ್ಲ. ಧನಿ ಮತ್ತು ಆಳುಗಳ ಸಂಬಂಧ ಜೀತ ಮಕ್ಕಳನ್ನು ನೋಡುತ್ತಿದ್ದ ಯನಮಾನಿಕೆ ವ್ಯವಸ್ಥೆಯ ಬಗೆ, ಜೀತ ಮತ್ತು ದುಡಿಯುವ ವರ್ಗಗಳ ಆಸೆ–ಆಕಾಂಕ್ಷೆ, ಪ್ರತಿಭಟನೆ, ಸಾವು ನೋವು, ಗೆಲುವುಗಳು ಈ ಭಾಗದ ದೈನಂದಿನ ಬದುಕಾಗಿತ್ತು. ದುಡಿಯುವ ವರ್ಗಗಳ ಸಂವೇದನೆಯನ್ನು ಗುರುತಿಸುವ ಕೆಲಸವನ್ನು

ಮೊದಲ ತಲೆಮಾರಿನ ಕತೆಗಾರರು ಮಾಡಿದರು.

ಧನಿ ಹಾಗೂ ಆಳಿನ ಸ್ಥಾನಮಾನ ಕೆಲಸಗಳು ಹೇಗೆ ಆಚಾರದಂತೆ ನಿರ್ಧರಿತವಾಗಿದ್ದವು ಎಂಬ ಸಾಮಾಜಿಕ ವ್ಯವಸ್ಥೆಯನ್ನು ಕೊರಡ್ಕಲ್ ಶ್ರೀನಿವಾಸರಾಯರ 'ಧನಿಯರ ಸತ್ಯನಾರಾಯಣ' ಕತೆಯು ಮಾರ್ಕ್ಸ್ ಸಿದ್ಧಾಂತದ ನೆಲೆಯಲ್ಲಿ ಮಂಡಿಸುತ್ತದೆ. ಭೂಮಿ, ಉತ್ಪನ್ನ, ಒಡೆತನ ಹಾಗೂ ಕೆಲಸಗಾರರ ಸಂಬಂಧವನ್ನು ಸಂಘರ್ಷ ಮತ್ತು ಉತ್ಪಾದಕ ವ್ಯವಸ್ಥೆಯ ನಾಶವನ್ನು ಸ್ಥಳೀಯತೆಯ ನೆಲೆಯಲ್ಲಿ ಚರ್ಚಿಸುತ್ತದೆ. ತೌಡ ನಾಗಪಯ್ಯನ ಗೇಣಿಯ ಲೆಕ್ಕದಲ್ಲಿ ವಾಸವಾಗಿ ದುಡಿಯುವನಾಗಿದ್ದನು. ಇವನ ಮಕ್ಕಳಾದ ಬೂದ, ತುಕ್ರಿಯು ಅಜ್ಜಿಯ ಮನೆಯಿಂದ ಬಾಳೆಯ ಕಂದನ್ನು ಹೊತ್ತು ತಂದು ಹಠಪಟ್ಟು ತಂದೆಯಿಂದ ನೆಡಿಸಿ, ನೀರು ಹಾಕಿ ರಕ್ಷಣೆ ಮಾಡುತ್ತಾರೆ. ನಂತರ ಬಾಳೆಗಿಡ ಬೆಳೆದು ಗೊನೆಯನ್ನು ಹಾಕಿದಾದ ಮಕ್ಕಳು ಸಂತಸ ಪಟ್ಟು ಅದರ ಬೆಳವಣಿಗೆಯನ್ನು ನೋಡುತ್ತಾರೆ. ಆ ಬಾಳೆಯಗಿಡದ ಮಾಲಿಕರು ಅವರೆ ಆಗಿದ್ದರಿಂದ ಬಾಳೆಹಣ್ಣು ಯಾರಿಗೆಲ್ಲ ಸೇರಬೇಕೆಂದು ಪಾಲು ಹಾಕಿ ಹಣ್ಣಿಗಾಗಿ ಕಾಯುತ್ತಾರೆ. ಆದರೆ ಆ ಬಾಳೆಗೊನೆ ನಾಗಪ್ಪಯ್ಯನ ಕಣ್ಣಿಗೆ ಬಿದ್ದನಂತರ ಸತ್ಯನಾರಾಯಣ ಪೂಜೆಗೆ ತರಬೇಕೆಂದು ತೌಡನಿಗೆ ಆಜ್ಞೆ ಮಾಡಿ ಹೋಗುತ್ತಾನೆ. ತೌಡ ನೊಂದುಕೊಂಡು ಅನಿವಾರ್ಯವಾಗಿ ಮಕ್ಕಳಿಗೆ ತಿಳಿಯದಂತೆ ಬಾಳೆಗೊನೆಯನ್ನು ಧನಿಗಳಿಗೆ ತಲುಪಿಸುತ್ತಾನೆ. ಬೂದ, ತುಕ್ರಿ, ತುಕ್ರರು ಅತ್ತು ಕೂಗಾಡಿ ವಿಷಯ ತಿಳಿದ ಮೇಲೆ ಬಾಳೆಗಿಡಗಳನ್ನೆಲ್ಲ ತುಳಿದು ತುಳಿದು ಪುಡಿ ಪುಡಿ ಮಾಡುತ್ತಾರೆ.

ಕತೆಯು ದುಡಿಯುವ ಜನರ ಬದುಕಿನ ಆಸೆ-ಆಕಾಂಕ್ಷೆಯನ್ನು ಹಾಗೂ ಅವರ ಬದುಕಿನ ಪರಿಸರವನ್ನು ನಿರೂಪಿಸುತ್ತದೆ. ಬೂದ ತುಕ್ರಿಗೆ ಅಜ್ಜಿಯು ಬಾಳೆಹಣ್ಣುಗಳನ್ನು ತೆಗೆದಿಡುವುದು, ಮಕ್ಕಳು ಆಸೆಯಿಂದ ಬಾಳೆಗಿಡವನ್ನು ತಂದು ತಂದೆಯಲ್ಲಿ ನಡಿಸುವುದು, ತೌಡನ ಧನಿಯಾದ ನಾಗಪ್ಪಯ್ಯನು ಸತ್ಯ ನಾರಾಯಣ ಪೂಜೆಯ ನೆಪದಿಂದ ಬಾಳೆಗೊನೆಯನ್ನು ಪಡೆಯುವುದು. ಬಾಳೆಗೊನೆಯನ್ನು ಧನಿಗಳು ಕೇಳಿದಾಗ, ಅಸಹಾಯಕತೆಯಿಂದ ಬುಡದಲ್ಲಿನ ಸಣ್ಣಗಿರುವ ನಾಲ್ಕು ಬಾಳೆಕಾಯಿ ಮಕ್ಕಳಿಗಿರಲಿ ಎನ್ನುವ ದುಡಿಯುವ ಜನರ ಸಂವೇದನೆಯನ್ನು ಸ್ಥಳೀಯತೆ ಎಂದು ಗುರುತಿಸಬಹುದು.

ಕಡೆಂಗೋಡ್ಲು ಶಂಕರ ಭಟ್ಟರ 'ದುಡಿಯವ ಮಕ್ಕಳು' ಎಂಬ ಕತೆಯು ದುಡಿಯುವ ಜನರ ಮೇಲೆ ಧನಿಗಳ ಯಜಮಾನಿಕೆಯ ಸ್ವರೂಪವನ್ನು ಚರ್ಚಿಸುತ್ತದೆ. ಲಿಂಗಪ್ಪ ಹಾಗೂ ಕೆಂಚಿಯು ತಮ್ಮಣ್ಣ ನಾಯಕರ ದುಡಿಯವ ಮಕ್ಕಳಾಗಿ ಒಡೆಯರು ಕಾಲಿನಲ್ಲಿ ತೋರಿಸಿದನ್ನು ತಲೆಯಲ್ಲಿ ಇಟ್ಟುಕೊಂಡು ಮಾಡುತ್ತಿದ್ದರೂ, ಲಿಂಗಪ್ಪ ತನ್ನ ಮಗನಿಗೆ

ಅಕ್ಷರ ಕಲಿಸಿ, ಜೀತದಿಂದ ಮುಕ್ತಿ ಪಡೆಯಬೇಕೆಂದು ನಿರ್ಧರಿಸಿ, ನಾಯಕರನ್ನು ಬೇಡಿ ಶಾಲೆಗೆ ದಾಖಲಿಸಬೇಕೆಂದು ನಿರ್ಧರಿಸಿ ನಾಯಕರನ್ನು ಬೇಡಿ ಶಾಲೆಗೆ ಸೇರಿಸುತ್ತಾನೆ. ಸೋಮು ನಾಯಕರ ಮಗ ಕಿಟ್ಟಪ್ಪನ ಸೇವಕನಾಗಿ ಶಾಲೆಗೆ ಹೋಗಲು ಆರಂಭಿಸುತ್ತಾನೆ, ಸೋಮು ಆಸಕ್ತಿಯಿಂದ ಕಲಿಯುತ್ತಾನಲ್ಲದೆ, ಎಲ್ಲಾ ಮಕ್ಕಳಿಗಿಂತ ಬುದ್ಧಿವಂತನಾಗಿ ಬೆಳೆಯುತ್ತಾನೆ. ನಾಯಕರ ಮಗ ಕಿಟ್ಟಪ್ಪ ಎಲ್ಲರಿಗಿಂತ ಹಿಂದೆಯೇ ಉಳಿಯುತ್ತಾನೆ. ಶಾಲೆಗೆ ಮಕ್ಕಳ ಪರೀಕ್ಷೆಗೆ ಬಂದ ಇನ್ಸ್‌ಪೆಕ್ಟರ್ ಸೋಮುವಿನ ಬುದ್ಧವಂತಿಕೆಯನ್ನು ಮೆಚ್ಚಿ ಸೋಮುವಿನ ಕೈಯಿಂದ ಉಳಿದ ಮಕ್ಕಳಿಗೆ ಪಾಠ ಮಾಡಿಸಿ, ಸೋಮುವನ್ನು ಮುಂದಿನ ತರಗತಿಗೆ ತೇರ್ಗಡೆ ಮಾಡಬೇಕೆಂದು ಶಿಫಾರಸ್ಸು ಮಾಡುತ್ತಾರೆ. ಈ ವಿಚಾರ ಮಾಸ್ತರ ಶೀನಪ್ಪಯ್ಯನಿಗೆ ಹಾಗೂ ನಾಯಕರಿಗೆ ನುಂಗಲಾರದ ತುತ್ತಾಗಿ ಕಾಣಿಸಿತು. ಸೋಮು ಕಿಟ್ಟಪ್ಪನನ್ನು ಸಂಕದಿಂದ ದೂಡಿದ ಎಂಬ ಕಾರಣ ನೀಡಿ ಮಾಸ್ತರರು ಕೋಣೆಯಲ್ಲಿ ಸೋಮುವನ್ನು ಕೂಡಿಹಾಕಿ ಹೊಡೆದರು, ಸಂಜೆಯಾಗುವಾಗ ಸೋಮು ಹೆಣವಾಗಿ ಲಿಂಗಪ್ಪನ ಅಂಗಳ ತಲುಪಿದ.

ಕತೆಗಾರರು ದುಡಿಯುವ ಜನರ ಆಸೆ ಆಕಾಂಕ್ಷೆ ದುಡಿಮೆ ಯಜಮಾನಿಕೆಯ ದರ್ಪ ದುಡಿಯುವ ಜನರ ಅಕ್ಷರ ಕಲಿಯಬೇಕೆಂಬ ಹಂಬಲಗಳು ನಮ್ಮ ನೆಲದ ಸತ್ವದೊಂದಿಗೆ ಅಭಿವ್ಯಕ್ತಗೊಂಡಿರುವುದನ್ನು ಸ್ಥಳೀಯತೆಯ ನೆಲೆಯಲ್ಲಿ ಗುರುತಿಸಬಹುದು.

ವಸಾಹತುಕಾಲದಲ್ಲಿ ದುಡಿಯುವ ವರ್ಗಗಳಲ್ಲಿ ಉಂಟಾದ ಬದಲಾವಣೆ, ಶಿಕ್ಷಣ ಇತ್ಯಾದಿ ವಸಾಹತುಶಾಹಿಯ ಧೋರಣೆಯನ್ನು ಭಾರತೀಯ ಭೂಮಾಲಿಕ ವರ್ಗ ದುಡಿಯುವ ವರ್ಗಗಳಿಗೆ ಪರಿಚಯಿಸಿದ ಬಗೆಯನ್ನು ಮೊದಲ ತಲೆಮಾರಿನ ಕತೆಗಾರರು ಅಭಿವ್ಯಕ್ತಿಸಿದರು. ಈ ಅಭಿವ್ಯಕ್ತಿಯಲ್ಲಿ ನಿರೂಪಿತಗೊಂಡಿರುವ ದುಡಿಯುವ ವರ್ಗಗಳ ಸಂವೇದನೆಯನ್ನೆ ಸ್ಥಳೀಯತೆ ಎಂದು ಕರೆಯಬಹುದು.

### ೩.೧.೩. ಸ್ತ್ರೀ ಗುಣಾತ್ಮಕ ಸ್ಥಳೀಯತೆ

ವಸಾಹತುಶಾಹಿಯು ರೂಪಿಸಿದ ಶಿಕ್ಷಣ ವ್ಯವಸ್ಥೆಯನ್ನು ದಕ್ಷಿಣ ಕನ್ನಡದ ಭಾಗದಲ್ಲಿ ಮಿಷನರಿಗಳಿಂದ ಅತ್ಯಂತ ವ್ಯವಸ್ಥಿತವಾಗಿ ವಿಸ್ತರಣೆಗೊಂಡಿತು. ಶಾಲೆಗಳ ಉದಯವು ಈ ಭಾಗದ ಹೆಣ್ಣು ಮತ್ತು ಗಂಡು ಮಕ್ಕಳು ಅಕ್ಷರವನ್ನು ಕಲಿಯುವಂತೆ ಮಾಡಿತು. ಅಕ್ಷರವನ್ನು ಕಲಿಯುವ ಜೊತೆಗೆ ಪಾಶ್ಚಾತ್ಯ ಜ್ಞಾನದ ಪರಿಚಯವು ಆಯಿತು. ಮುಖ್ಯವಾಗಿ ವಿಜ್ಞಾನ ಹಾಗೂ ವೈಚಾರಿಕ ಚಿಂತನೆಗಳು ಯುವ ಮನಸುಗಳಲ್ಲಿ ಹೊಸ ಅಲೆಗಳನ್ನು

ಎಬ್ಬಿಸಿತು. ಧರ್ಮವನ್ನು ಸಾಮಾಜಿಕ ವ್ಯವಸ್ಥೆಯನ್ನು ವಿಮರ್ಶೆ ಮಾಡುವ ಒಂದು ವರ್ಗ ಹುಟ್ಟಿಕೊಂಡಿತು. ಇದೇ ಕಾಲಮಾನದಲ್ಲಿ ಧಾರ್ಮಿಕ ಸುಧಾರಣ ಚಳುವಳಿಗಳು ವ್ಯಕ್ತಿಯ ಜೀವನ ಸ್ವರೂಪವನ್ನೆ ಮರುಚಿಂತಿಸುವ ಪರಿಸರವನ್ನು ಹುಟ್ಟು ಹಾಕಿದವು. ಮಹಿಳೆಯರು ಸ್ವಾತಂತ್ರ್ಯ, ಸಮಾನತೆ, ವ್ಯಕ್ತಿ ಗೌರವದಂತಹ ವಿಚಾರಗಳನ್ನು ಗ್ರಹಿಸಿದರಲ್ಲದೆ, ತಮ್ಮ ಅಸ್ತಿತ್ವ ಕಟ್ಟಿಕೊಳ್ಳಲು ಸಂಘಟಿತರಾದರೂ ತಮ್ಮ ಮೇಲಾಗುತ್ತಿದ್ದ ಹಿಂಸೆ, ಮೋಸ, ಆಚಾರ–ವಿಚಾರಗಳನ್ನು ಸಮಾಜದ ಮುಂದಿಡಲು ಕತೆ ಪ್ರಧಾನ ಮಾಧ್ಯಮವಾಗಿ ರೂಪುಗೊಂಡಿತು.

ವೈದಿಕ ಸಂಪ್ರದಾಯದ ಹೆಣ್ಣು ಮಕ್ಕಳ ಜೀವನ ವಿಧಾನ, ಕಟ್ಟು ಪಾಡುಗಳು, ಮಡಿ, ಮೈಲಿಗೆ, ವ್ರತ, ವಿಧವೆಯ ಆಚರಣೆಗಳು ಸುಧಾರಣೆ ಮನೋಧರ್ಮ ಹಾಗೂ ವೈಚಾರಿಕ ಪ್ರಜ್ಞೆಯ ಟಂಕಸಾಲೆಯಲ್ಲಿ ಮರುರೂಪುಗೊಳ್ಳಲು ಆರಂಭವಾದವು. ಮೊದಲ ತಲೆಮಾರಿನ ಕತೆಗಾರ್ತಿಯರು ಸ್ತ್ರೀ ಸಂವೇದನೆಯನ್ನು ಗುಣಾತ್ಮಕ ನೆಲೆಯಲ್ಲಿ ಅನುಸಂಧಾನ ಮಾಡುವ ಕಾರ್ಯವನ್ನು ಮಾಡಿದರು. ಸರಸ್ವತಿ ರಾಜೆವಾಡೆಯವರ 'ಚಾವಡಿ ಕೂಟ' ಕತೆಯು ಸ್ತ್ರೀಯರ ಬದುಕಿನಲ್ಲಿ ರೂಪಿತಗೊಂಡಿದೆ. ಮೌಢ್ಯ ಆಚಾರಗಳನ್ನು ಮೀರುವ ತಾತ್ವಿಕತೆಯನ್ನು ಗ್ರಹಿಸುತ್ತದೆ. ನಾಗತ್ತೆ ಕತೆಯಲ್ಲಿ ಸಂಪ್ರದಾಯದ ಭಾಗವಾಗಿ ಗುರುತಿಸಿಕೊಳ್ಳುತ್ತಾರೆ, ಹಾಗೂ ತನ್ನ ಸೊಸೆ ಸೀತಮ್ಮ ವ್ರತ ನಿಯಮಗಳನ್ನು ಪಾಲಿಸಬೇಕು. ದೇವರನ್ನು ಪೂಜಿಸುವ ಜೊತೆಗೆ ಆಚಾರ ಬದ್ಧವಾಗಿ ಬದುಕು ನಡೆಸಬೇಕು, ಮೈ ತುಂಬ ಬಟ್ಟೆಗಳನ್ನು ಹಾಕಬೇಕು. ಮನೆಯ ಪರಿಸರದಲ್ಲಿಯೇ ಹೆಣ್ಣು ಬದುಕನ್ನು ಕಳೆಯಬೇಕೆಂಬ ಧೋರಣೆಯನ್ನು ನಾಗತ್ತೆಯಾದಿಯಾಗಿ ಇಡೀ ಸಮಾಜವು ಹೆಣ್ಣನ್ನು ಗ್ರಹಿಸಿತ್ತು. ಕತೆಗಾರ್ತಿ ಸೀತಮ್ಮ ಹಾಗೂ ಸುಶೀಲಮ್ಮಳ ಮೂಲಕ ಸ್ತ್ರೀ ಸಂವೇದನೆ ಮೀಮಾಂಸೆಯನ್ನು ಮಂಡಿಸುತ್ತಾರೆ. ಸೀತಮ್ಮ, ಅತ್ತೆಯ ಸಾಂಪ್ರದಾಯಿಕ ಮಾತುಗಳನ್ನು ತಿರಸ್ಕರಿಸಿ ಶಿಕ್ಷಣ, ವೈಚಾರಿಕ ಪ್ರಜ್ಞೆ, ಸಮಾನತೆಯ ಬದುಕಿಗೆ ದಾರಿಯನ್ನು ಕಂಡುಕೊಳ್ಳಲು ಮುಂದಾಗುತ್ತಾರೆ. ಸಾಂಪ್ರದಾಯಿಕ ಮನಸುಗಳು ಆಧುನಿಕವಾದ ಸ್ತ್ರೀ ಪ್ರಜ್ಞೆ ಹಾಗೂ ಸಂವೇದನೆಯ ನಿಲುವುಗಳಿಂದ ಹಿಂದಕ್ಕೆ ಸರಿಯುತ್ತದೆ. ಆಚಾರ, ಮೌಢ್ಯಪರವಾದ ಜೀವನ ವಿಧಾನವನ್ನು ಮೀರಿ ಸ್ತ್ರೀಯರು ತಮ್ಮ ಅಸ್ತಿತ್ವವನ್ನು ಕಟ್ಟಿಕೊಳ್ಳುವ ಸ್ವರೂಪವನ್ನು ಸ್ತ್ರೀ ಗುಣಾತ್ಮಕ ಸ್ಥಳೀಯತೆ ಎಂದು ಕರೆಯಬಹುದು.

ಸ್ತ್ರೀ ಅಸ್ಮಿತೆಯನ್ನು ನಿರೂಪಿಸುವ, ಸರಸ್ವತಿ ಬಾಯಿ ರಾಜವಾಡೆ ಅವರ 'ಆಹುತಿ' ಕತೆಯು ಹೆಣ್ಣು ಗಂಡುಗಳ ಆದರ್ಶ ದಾಂಪತ್ಯವನ್ನು ಕೇಂದ್ರೀಕರಿಸುವ ಜೊತೆಗೆ ಹೆಣ್ಣನ್ನು

ಗೊಡ್ಡು ಎಂದು ಕರೆಯುವ, ನಿಂದಿಸುವ ಸಾಮಾಜಿಕ ಸಂದರ್ಭವನ್ನು ಸೂಕ್ಷ್ಮವಾಗಿ ನಿರೂಪಿಸುವ ಕತೆ ಸ್ತ್ರೀ ಸಂವೇದನೆಯನ್ನು ಲಕ್ಷ್ಮಿಯ ಮೂಲಕ ಅನುಸಂಧಾನ ಮಾಡುತ್ತದೆ. ಲಕ್ಷ್ಮಿಗೆ ಮಕ್ಕಳಾಗಲಿಲ್ಲವೆಂದು ಅತ್ತೆ-ಮಾವ ಲಕ್ಷ್ಮಿಯನ್ನು ಗೊಡ್ಡು ಎಂದು ನಿರ್ಧರಿಸಿ, ತನ್ನ ಮಗ ನಾರಾಯಣನಿಗೆ ಬೇರೆ ಲಗ್ನ ಮಾಡಬೇಕೆಂದು ಯೋಚಿಸಿ, ಚರ್ಚಿಸಿದನ್ನು ಕೇಳಿಸಿಕೊಂಡ ಲಕ್ಷ್ಮಿ ನೊಂದು ಮಾನಸಿಕವಾಗಿ ಕುಗ್ಗಿ ಜ್ವರಕ್ಕೆ ಒಳಗಾಗುತ್ತಾರೆ. ಬದಲಾವಣೆಯು ದುಃಖವನ್ನು ತಂದಿತು ಹಾಗೂ ಅವಳ ಮನಸಿನ ನೋವು ಅರ್ಥವಾಗಲಿಲ್ಲ. ಲಕ್ಷ್ಮಿ ತನ್ನ ತಂಗಿ ರಮಾಳನ್ನು ಲಗ್ನವಾಗಬೇಕೆಂದು ನಾರಾಯಣನಲ್ಲಿ ಭಾಷೆ ಪಡೆದುಕೊಂಡು ಮರಣ ಹೊಂದಿದಳು. ನಾರಾಯಣನು ರಮಾಳನ್ನು ಲಗ್ನವಾಗಿ ಒಂದು ಮಗುವನ್ನು ಪಡೆದ ನಂತರ ಮಗುವನ್ನು ತಾಯಿಯ ಕೈಗೆ ನೀಡಿ ತಾನು ಹಾಗೂ ರಮಾ ಇಬ್ಬರು ವಿಷ ಕುಡಿದು ಲಕ್ಷ್ಮಿಯಲ್ಲಿಗೆ ಸೇರಬೇಕೆಂದು ನಿರ್ಧರಿಸಿ ವಿಷ ತೆಗೆದುಕೊಂಡು ಸಾಯುತ್ತಾರೆ.

ಕತೆಗಾರ್ತಿಯು ವೈದಿಕ ಸಮುದಾಯದಲ್ಲಿ ಚಾಲನೆಯಲ್ಲಿ ಇದ್ದ ಬಹುಪತ್ನಿತ್ವವನ್ನು ವಿಮರ್ಶೆ ಮಾಡುವ ಜೊತೆಗೆ ಪುರುಷ ಗ್ರಹಿಕೆಯು ಹೆಣ್ಣು ಸಹಾ ತನ್ನಂತೆ ಜೀವ ಹಾಗೂ ಗೌರವವಿದೆ ಎಂಬ ಭಾವನೆಯನ್ನು ನಾರಾಯಣನ ಮೂಲಕ ಅಭಿವ್ಯಕ್ತಿಸುತ್ತಾರೆ. ಈ ರೀತಿಯ ಜೀವಪರವಾದ ಚಿಂತನೆಯನ್ನು ಸ್ಥಳೀಯತೆ ಎಂದು ಗುರುತಿಸಬಹುದು. ಈ ಭಾಗದ ಕತೆಗಾರ್ತಿಯರು ಪ್ರಧಾನವಾಗಿ ಭಾರತೀಯ ನಂಬಿಕೆ, ಸಂಪ್ರದಾಯ, ಜೀವನ ವಿಧಾನವನ್ನು ಮನಸಿನಲ್ಲಿ ಇಟ್ಟುಕೊಂಡು ತಮ್ಮ ಮೇಲೆ ನಡೆಯುತ್ತಿದ ಹಿಂಸೆ, ಅಪಮಾನ, ದೌರ್ಜನ್ಯ, ಅಸಮಾನತೆ ಹಾಗೂ ಜೀವ ವಿರೋಧಿ ಘಟನೆಗಳನ್ನು ಕತೆಗಳು ಮೂಲಕ ವಿವಿಧ ಸ್ವರೂಪದಲ್ಲಿ ಪರಿಚಯಿಸುವ ಜೊತೆಗೆ ಸ್ತ್ರೀ ಬದುಕನ್ನು, ಆಸೆ-ಆಕಾಂಕ್ಷೆಯನ್ನು ಗುಣಾತ್ಮಕವಾಗಿಯೇ ಮಂಡಿಸುವುದನ್ನು ಕಾಣಬಹುದು. ಈ ನೆಲೆಯಲ್ಲಿ ಕತೆಗಳ ಆಲೋಚನೆ ಕ್ರಮವನ್ನು ಸ್ತ್ರೀ ಗುಣಾತ್ಮಕ ಸ್ಥಳೀಯತೆ ಎಂದು ಕರೆಯಬಹುದು.

ದಕ್ಷಿಣ ಕನ್ನಡ ಭಾಗವು ವಸಾಹತುಶಾಹಿಯ ಆಳ್ವಿಕೆಗೆ ಒಳಪಟ್ಟು, ವೇಗವಾಗಿ ಆಧುನಿಕ ಜೀವನ ವಿನ್ಯಾಸಕ್ಕೆ ತೆರೆದುಕೊಂಡು ಅನೇಕ ಪಲ್ಲಟಗಳಿಗೆ ಒಳಗಾದರೂ ತನ್ನ ನೆಲದ ಸತ್ವ, ಧರ್ಮ, ಪರಂಪರೆ, ಜೀವನ ಮೀಮಾಂಸೆಯನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಬೆಳೆದ ಪ್ರಧಾನ ಧಾರೆಯಂತೆ ಮೊದಲ ತಲೆಮಾರಿನ ಕತೆಗಳು ಕಾಣುತ್ತದೆ. ವಸಾಹತುಶಾಹಿಯ ನಡೆಗೆ ಪ್ರತಿರೋಧವಾಗಿ ಕತೆಗಳಲ್ಲಿ ನಿರೂಪಿಸವಾಗಿರುವ ಪರಂಪರೆಯ ಗುಣಾತ್ಮಕ ಚಿಂತನೆ, ಬೆಸೆಯುವ ತಂತ್ರ, ಯಜಮಾನಿಕೆಯ ಸತ್ವಗಳು, ಸ್ತ್ರೀ ಗುಣಾತ್ಮಕ ಸಂವೇದನೆಗಳು

ಸ್ಥಳೀಯತೆಯನ್ನು ಹುಟ್ಟು ಹಾಕಿದೆ ಹಾಗೂ ಅದರ ವ್ಯಾಪ್ತಿಯನ್ನು ವಿಸ್ತಾರವಾಗಿಸಿದೆ. ವಸಾಹತುಶಾಹಿಯ ಗುಣಾತ್ಮಕ ಧೋರಣೆಯನ್ನು ಸಂಕರವಾಗಿಸಿಕೊಂಡು ತಾತ್ವಿಕರಿಸಿರುವುದು ಮೊದಲ ತಲೆಮಾರಿನ ಕತೆಗಳ ಗೆಲುವಾಗಿದೆ. ಈ ಭಾಗದ ಮೊದಲ ತಲೆಮಾರಿನ ಕತೆಗರರು ಕತೆಗಳಿಗೆ ಸ್ಥಳೀಯ ಪರಂಪರೆಯನ್ನು ಹಾಕಿಕೊಟ್ಟರಲ್ಲದೆ, ಆ ಕಾಲಘಟ್ಟದ ಎಲ್ಲಾ ರೀತಿಯ ಪಲ್ಲಟಗಳನ್ನು ಚಿಕಿತ್ಸಾ ಮನೋಭಾವದಿಂದ ನೋಡುವ ಕ್ರಮದಿಂದ ಕತೆಗಳಿಗೆ ಜೀವ ತುಂಬಿದ ಈ ಕಾರಣದಿಂದ ಮೊದಲ ತಲೆಮಾರಿನ ಕತೆಗಳು ಇಂದಿಗೂ ಪ್ರಸ್ತುತವಾಗುತ್ತದೆ.

**೫.೨. ಮೈಸೂರು ಭಾಗದ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ**

ಆಧುನಿಕ ಕನ್ನಡ ಸಾಹಿತ್ಯಕ್ಕೆ ಮೈಸೂರು ಭಾಗದ ಕೊಡುಗೆ ಅಮೂಲ್ಯವಾಗಿದೆ. ಮೈಸೂರು ಪ್ರದೇಶವು ವಿಜಯನಗರ ಸಾಮ್ರಾಜ್ಯದ ನಂತರದಲ್ಲಿ ಅವಧಿಯಲ್ಲಿ ಮೈಸೂರು ಒಡೆಯರ ಆಡಳಿತಕ್ಕೆ ಒಳಪಟ್ಟಿತು. ರಾಜಕೇಂದ್ರಿತ ಆಶ್ರಯವನ್ನು ಪಡೆದ ಸಾಹಿತ್ಯ ತನ್ನ ಅಸ್ತಿತ್ವವನ್ನು ಪಡೆದುಕೊಳ್ಳುತ್ತ ಬಂದಿತು. ಜಯಚಾಮರಾಜೇಂದ್ರ ಒಡೆಯರು ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ಹೊಂದಿದ್ದ ಕಾರಣ ಅನೇಕ ಸಾಹಿತ್ಯ ಬರಹಗಳು ಭೂಮಿಕೆಯನ್ನು ಪಡೆದುಕೊಂಡಿತು. ಆದರೆ ಸಾಹಿತ್ಯ ಗ್ರಂಥಗಳು ಮುದ್ರಣಗೊಳ್ಳಲಿಲ್ಲ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕನ್ನಡ ನಾಟಕಗಳಿಗೆ ಜೀವ ಬಂದಿತು. 'ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭೆ' ಎಂಬ ಸಂಸ್ಥೆಯ ಸ್ಥಾಪನೆಯ ನಂತರದಲ್ಲಿ ಅನೇಕ ಕನ್ನಡದ ನಾಟಕಗಳು ರಚನೆಗೊಂಡವು. ೧೮೯೦ರಲ್ಲಿ ಪ್ರಕಟವಾದ ಕೃಷ್ಣ ಬ್ರಹ್ಮ ತಂತ್ರರ 'ಕಲ್ಯಾಣ ಗೀತಮಂಜರಿ' ಮುಖ್ಯವಾದದ್ದು.

ಮುಮ್ಮಡಿ ಕೃಷ್ಣರಾಜರ ಆಸ್ಥಾನ ಕವಿಯಾಗಿದ್ದ ಭಾಗವತಂ ಕೃಷ್ಣ ಸಾಮಿಯು 'ಜಾತಕ ಜ್ಞಾನ ರತ್ನಾವಳಿ, ಬ್ರಹ್ಮ ಜಾತಕ ಎಂಬ ಗ್ರಂಥಗಳನ್ನು ಬರೆದರು. ನಂಜನಗೂಡು ಸುಬ್ಬಾಶಾಸ್ತ್ರಿಗಳು ಶಾಕುಂತಲ ಮತ್ತು ರತ್ನಾವಳಿ ಎಂಬ ನಾಟಕಗಳನ್ನು ರಚಿಸಿದರು. ಹೀಗೆ ಬಸಪ್ಪಶಾಸ್ತ್ರಿ, ಸೋಸಲೆ ಅಯ್ಯಾಶಾಸ್ತ್ರಿ, ಗುಬ್ಬಿಯ ಗುರುಸಿದ್ದಪ್ಪ, ಸರಗೂರು ವೆಂಕಟರಮಣಾಚಾರ್ಯ, ಎಂ.ಎಲ್. ಶ್ರೀಕಂಠೇಗೌಡರಂತಹ ನಾಟಕಕಾರರನ್ನು ೧೮೩೪ ರಿಂದ ೧೯೨೬ರ ಕಾಲದಲ್ಲಿ ಗುರುತಿಸಬಹುದು. ವಸಾಹುತುಶಾಹಿಯು ಭಾರತದಲ್ಲಿ ನೆಲೆಗೊಂಡ ಮೇಲೆ ಮೈಸೂರು ಪ್ರದೇಶವನ್ನು ತನ್ನ ಆಳ್ವಿಕೆಗೆ ಒಳಪಡಿಸುವ ನೆಲೆಯ ಹೋರಾಟಗಳು ೧೭೫೦ ರಿಂದ ಆರಂಭವಾಯಿತು. ಹೈದರ್ ಅಲಿಯು ಮೈಸೂರನ್ನು

ತನ್ನ ಹಿಡಿತಕ್ಕೆ ತೆಗೆದುಕೊಂಡ ಮೇಲೆ ಬ್ರಿಟಿಷರ ವಿರುದ್ಧ ಸಂಘರ್ಷವನ್ನು ಆರಂಭಿಸಿದನು.

ಹೈದರ್ ಅಲಿಯ ನಂತರ ಟಿಪ್ಪು ಸುಲ್ತಾನ್ ೧೭೯೯ರ ವರೆಗೆ ಮೈಸೂರು ಪ್ರದೇಶವನ್ನು ಆಳ್ವಿಕೆ ಮಾಡಿದನಲ್ಲದೆ ಬ್ರಿಟಿಷರ ಕೈಯಲ್ಲಿ ಸೋಲುವ ಮೂಲಕ ಸಾಮ್ರಾಜ್ಯವನ್ನು ಕಳೆದುಕೊಂಡನು. ಬ್ರಿಟಿಷರು ಮೈಸೂರು ಸಾಮ್ರಾಜ್ಯವನ್ನು ನಾಲ್ಕು ವಿಭಾಗ ಮಾಡುವ ಮೂಲಕ ಕರ್ನಾಟಕದ ರಾಜಕೀಯಕ್ಕೆ ಪ್ರವೇಶ ಮಾಡಿದರು. ಮೈಸೂರು ಭಾಗವನ್ನು ವಸಾಹತುಶಾಹಿಯ ಅಧೀನದಲ್ಲಿ ಆಡಳಿತ ಮಾಡಬೇಕೆಂಬ ಕರಾರಿನ ಮೂಲಕ ಮೈಸೂರು ರಾಜರಿಗೆ ವಹಿಸಿದರು. ವಸಾಹತುಶಾಹಿಯ ಪರಿಧಿಯಲ್ಲಿ ಮೈಸೂರು ಒಡೆಯರು ತಮ್ಮ ಆಡಳಿತ ಪರಂಪರೆಯನ್ನು ನಡೆಸುವಂತಾಯಿತು. ಮೈಸೂರಿನ ಜನರು ವಸಾಹತು ಶಾಹಿಯ ಧೋರಣೆಯನ್ನು ಒಡೆಯರ ರಾಜಪ್ರಭುತ್ವದ ಮೂಲಕ ಪಡೆಯುವಂತಾಯಿತು. ೧೮೩೧ ರಲ್ಲಿ ಬೂದಿಬಸಪ್ಪನ ದಂಗೆ ಮತ್ತು ಆಡಳಿತಾತ್ಮಕ ಕಾರಣಗಳಿಂದ ಒಡೆಯರ ಆಳ್ವಿಕೆಯನ್ನು ವಸಾಹತುಶಾಹಿ ನೇರವಾಗಿ ತನ್ನ ಹಿಡಿತಕ್ಕೆ ತೆಗೆದುಕೊಂಡಿತು. ಈ ಕಾಲಮಾನದಲ್ಲಿ ಅಂದರೆ ೧೮೮೧ ರ ವರೆಗೆ ಅನೇಕ ಕಮಿಷನರುಗಳು ಮೈಸೂರನ್ನು ಆಳ್ವಿಕೆ ಮಾಡಿದರು. ಹಾಗೂ ಈ ಸಂದರ್ಭದಲ್ಲಿ ವಸಾಹತುಶಾಹಿಯ ನೇರ ಆಳ್ವಿಕೆಗೆ ಒಳಪಟ್ಟಿತ್ತಲ್ಲದೆ ಅನೇಕ ಪಲ್ಲಟಗಳಿಗೆ ಒಳಗಾಯಿತು. ೧೮೫೪ರ ಶಿಕ್ಷಣ ಕಾಯ್ದೆಯ ಮೂಲಕ ಮೈಸೂರಿನಲ್ಲಿ ಅನೇಕ ಶಾಲೆಗಳು ಹುಟ್ಟಿಕೊಂಡವು. ಕ್ರಿಸ್ತ ಮಿಷನರಿಗಳು ಧರ್ಮ ಪ್ರಚಾರದ ಜೊತೆಗೆ ಶಿಕ್ಷಣ ಹಾಗೂ ಮುದ್ರಣ ಚಟುವಟಿಕೆಯನ್ನು ತಮ್ಮನ್ನು ತೊಡಗಿಸಿಕೊಂಡರು. ಕಿಟಲ್, ರೈಸ್ ರಂತಹ ವಿದ್ವಾಸರು ಸಂಸ್ಕೃತ ಭಾಷೆಯನ್ನು ಕಲಿಯುವ ಮೂಲಕ ಕನ್ನಡದ ವ್ಯಾಕರಣಕ್ಕೆ ಸಂಬಂಧಿತ ಕೆಲಸವನ್ನು ಮಾಡಿದರೂ ಈ  ವಿದೇಶಿ ವಿದ್ವಾಂಸರ ಜೊತೆಗೆ ಕನ್ನಡದ ಅನೇಕರು ಸಂಶೋಧನೆ ಹಾಗೂ ಬರಹದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ವಸಾಹತುಶಾಹಿಯ ಧೋರಣೆ ಮತ್ತು ಸ್ವಭಾವದಿಂದ ಆರ್ಥಿಕ, ಧಾರ್ಮಿಕ, ಸಾಮಾಜಿಕ ಬದಲಾವಣೆಗಳಾದವು. ಈ ಸಂದರ್ಭದಲ್ಲಿ ಸಹಜವಾಗಿಯೇ ರಾಜಮನೆತನದ ಪರಂಪರೆಯನ್ನು ಒಪ್ಪಿಕೊಳ್ಳಬೇಕೇ ಅಥವಾ ವಸಾಹತುಶಾಹಿಯ ಧೋರಣೆಗಳಂತೆ ನಡೆಯಬೇಕೆ ಎಂಬ ದ್ವಂದ್ವವು ಹುಟ್ಟಿಕೊಂಡಿತು. ೧೮೮೧ರಲ್ಲಿ ವಸಾಹತುಸಾಹಿಯು ಮೈಸೂರನ್ನು ಪುನಃ ರಾಜರಿಗೆ ಹಿಂದಿರುಗಿಸಿದ ಮೇಲೆ ಮೈಸೂರು ಒಡೆಯರು ವಸಾಹತುಶಾಹಿಯ ಅಧೀನದಲ್ಲಿ ಸ್ವಾತಂತ್ರ್ಯ ಭಾರತದ ವರೆಗೆ ಆಳ್ವಿಕೆ ಮಾಡಿದರು.

ಮೈಸೂರು ಭಾಗವು ಒಡೆಯರ ಮೂಲಕ ಆಳ್ವಿಕೆಗೆ ಒಳಪಟ್ಟಿತ್ತಾದರೂ

ವಸಾಹತುಶಾಹಿಯ ದಟ್ಟವಾದ ಪ್ರಭಾವವಿದ್ದರಿಂದ, ಈ ಭಾಗದ ಜನರ ಭಾಷೆಯಲ್ಲಿ ಬದುಕಿನ ವಿನ್ಯಾಸದಲ್ಲಿ ಧರ್ಮ ಪರಂಪರೆಯಲ್ಲಿ ಅನೇಕ ಪಲ್ಲಟಗಳು ಉಂಟಾದವು. ಕನ್ನಡದ ಈ ಭಾಗದ ಮೊದಲ ತಲೆಮಾರಿನ ಕತೆಗಾರರು ತಮ್ಮ ಕತೆಗಳಲ್ಲಿ ವಸಾಹತುಶಾಹಿಯ ನಿಲುವುಗಳನ್ನು ರಾಜಪ್ರಭುತ್ವದ ಒಳಗಡೆಯೇ ಪ್ರಶ್ನಿಸುವ ವಿರೋಧಿಸುವ ಸಮನ್ವಯ ಮಾಡುವ ಕಾರ್ಯಗಳನ್ನು ಮಾಡಿದರು. ಈ ಕಾಲಮಾನದ ಪ್ರಮುಖ ಕತೆಗಾರರೆಂದರೆ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಗೋರೂರು ರಾಮಸ್ವಾಮಿ ಅಯ್ಯಂಗಾರ್, ನವರತ್ನ ರಾಮರಾವ್, ಪಾ.ವೆಂ ಆಚಾರ್ಯ, ಸಾವಿತ್ರಮ್ಮ, ದೇವುಡು, ಅಶ್ವತ, ಆನಂದ, ತಿರುಮಲಾಂಭ, ಅನಕೃ, ಜಯಲಕ್ಷ್ಮಿ ಶ್ರೀನಿವಾಸ್, ಎಸ್.ಜಿ. ಶಾಸ್ತ್ರಿ, ಕಾತ್ಯಾಯಿನಿ ಇತರರು. ಈ ಎಲ್ಲಾ ಕತೆಗಾರರು ತಮ್ಮ ಕತೆಗಳಲ್ಲಿ ಸ್ಥಳೀಯತೆಯನ್ನೆ ಕೇಂದ್ರವಗಿಸಿಕೊಂಡರು. ಹಾಗೂ ವಸಾಹತುಶಾಹಿಗೆ ಮುಖಾಮುಖಿಯಾಗಿಸುವ ತಾತ್ವಿಕತೆ ನಿರೂಪಿಸುತ್ತಾರೆ. ಸ್ಥಳೀಯತೆಯನ್ನು ಭಿನ್ನ ಭಿನ್ನವಾಗಿ ಕತೆಯು ಚರ್ಚೆಗೆ ಒಳಪಡಿಸಿದ್ದನ್ನು ಗುರುತಿಸುವುದಾದರು.

### ೫.೨.೧. ವಸಾಹತುಶಾಹಿ ಧೋರಣೆಗೆ ಪ್ರತಿಯಾದ ಸ್ಥಳೀಯತೆ

ವಸಾಹತುಶಾಹಿಯು ಮೈಸೂರು ಭಾಗವನ್ನು ಪ್ರವೇಶ ಮಾಡಿದ ಮೇಲೆ ಮೈಸೂರು ಒಡೆಯರು ಹಾಗೂ ಬ್ರಿಟಿಷರ ನಡುವಿನ ಸಂಮಿಶ್ರವಾದ ರಾಜಕೀಯ ವ್ಯವಸ್ಥೆ ಬಹುದೀರ್ಘ ಕಾಲ ಅಸ್ತಿತ್ವವನ್ನು ಪಡೆದುಕೊಂಡಿತು. ಈ ಕಾಲಮಾನದಲ್ಲಿ ವಸಾಹತುಶಾಹಿಯ ಆಡಳಿತಾತ್ಮಕ ಧೋರಣೆಗಳು ಮೈಸೂರು ರಾಜರ ಮೂಲಕ ಜನಸ್ಪರ್ಶಿಯಾಯಿತು. ಮೈಸೂರು ಒಡೆಯರ ಆಳ್ವಿಕೆಯು ವಸಾಹತುಶಾಹಿಯ ಪ್ರಭಾವಕ್ಕೆ ಒಳಪಟ್ಟಿದ್ದರಿಂದ ಸ್ಥಳೀಯವಾದ ಆಡಳಿತ ರಚನೆ ಹಾಗೂ ವಿನ್ಯಾಸಗಳು ಆಧುನಿಕ ರೂಪವನ್ನು ಪಡೆದುಕೊಂಡು ಪಲ್ಲಟಗೊಂಡವು ಹಾಗೂ ಸ್ಥಳೀಯವಾದ ಆಡಳಿತದ ರೂಪಗಳು, ಪರಂಪರಾಗತವಾದ ನಿಯಮಗಳು ತನ್ನ ಅಸ್ತಿತ್ವವನ್ನು ಕಳೆದುಕೊಂಡವು. ಈ ಬಗೆಯ ಬೆಳವಣಿಗೆಯನ್ನು ಮೊದಲ ತಲೆಮಾರಿನ ಕತೆಗಾರರು ತಮ್ಮ ಕತೆಯೊಳಗೆ ಗುರುತಿಸುವ ಹಾಗೂ ವಸಾಹತುಶಾಹಿಯ ಆಡಳಿತಾತ್ಮಕ ಅಭಿವ್ಯಕ್ತಿಗೆ ಮುಖಾಮುಖಿಯಾಗಿಸುವ ತಾತ್ವಿಕತೆಯನ್ನು ರಚಿಸಿಕೊಂಡರು.

ಒಡೆಯರ ಪ್ರಭುತ್ವದಲ್ಲಿ ಸಾಮಾಜಿಕ ಜೀವನ ವಿನ್ಯಾಸವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರನೆಂಬ ನೆಲೆಯಲ್ಲಿ ರೂಪುಗೊಂಡಿತ್ತಲ್ಲದೆ ನ್ಯಾಯಿಕ ವ್ಯವಸ್ಥೆಯು ವರ್ಗಕೇಂದ್ರೀತವಾದ ಬಹುರೂಪಿತವಾದ, ಪರಂಪರಾಗತವಾದ ನೆಲೆಯುಲ್ಲಿ ಕಾರ್ಯನಿರ್ವಹಿಸುತ್ತಿತ್ತು. ಆದರೆ ವಸಾಹತುಶಾಹಿ ಪ್ರಭಾವಕ್ಕೆ ಒಳಗಾದ ಮೇಲೆ

ಏಕರೂಪವಾದ ನ್ಯಾಯಿಕ ವ್ಯವಸ್ಥೆ ಅಸ್ತಿತ್ವವನ್ನು ಪಡೆದುಕೊಂಡಿತಲ್ಲದೆ ಶ್ರೇಣೀಕೃತ ನ್ಯಾಯಿಕ ವ್ಯವಸ್ಥೆಯ ದಿಕ್ಕನ್ನು ಬದಲಾಯಿಸಿತು. ವಸಾಹತುಶಾಹಿಯ ನೆಲೆಯಲ್ಲಿ ರೂಪುಗೊಂಡ ಕೋರ್ಟು, ಸಾಕ್ಷಿ, ಪೀನಲ್ ಕೋಡುಗಳು ಭಾರತೀಯ ಹಾಗೂ ಪಾಶ್ಚಾತ್ಯವೆಂಬ ಭೇದಗಳನ್ನು ಹುಟ್ಟುಹಾಕಿತು. ಕೋರ್ಟಿನ ಪರಿಸರ ಹಾಗೂ ಅಧಿಕಾರಿ ವರ್ಗವು ಭ್ರಷ್ಟತೆಯನ್ನು ಒಳಗೊಂಡಿದ್ದರಿಂದ ಭ್ರಷ್ಟತೆಯ ಸ್ವರೂಪವನ್ನು ಗುರುತಿಸುವ ಮತ್ತು ವಸಾಹತುಶಾಹಿಯ ನ್ಯಾಯಿಕ ವ್ಯವಸ್ಥೆಯನ್ನು ನಿರಾಕರಿಸುವ ಜೊತೆಗೆ ಸ್ಥಳೀಯ ಪಂಚಾಯಿತಿ ವ್ಯವಸ್ಥೆಯನ್ನು ಭಾರತೀಯ ಕಾನೂನುಗಳನ್ನು ಗುಣಾತ್ಮಕವೆಂದು ಮಂಡಿಸುವ ಕಾರ್ಯವನ್ನು ಮಾಸ್ತಿ ತನ್ನ ಜ್ಯೋಗ್ಯೋರ ಅಂಜಪ್ಪನ ಕೋಳಿಕತೆಯಲ್ಲಿ ಮಾಡುತ್ತಾರೆ. ಅಂಜಪ್ಪನ ಲೋಕಾನುಭವ, ಅವನ ಹಾಡುಗಾರಿಕೆಯ ವೃತ್ತಿ, ಪ್ರಾಮಾಣಿಕತನದ ಮನೋಭಾವಗಳು ಸ್ಥಳೀಯತೆಯನ್ನು ನಿರೂಪಿಸುತ್ತದೆ ಅಲ್ಲದೆ ವಸಾಹತುಶಾಹಿಯ ನ್ಯಾಯಿಕ ವ್ಯವಸ್ಥೆಯ ಪೊಳ್ಳುತನವನ್ನು ಸೂಕ್ಷ್ಮವಾಗಿ ಮಂಡಿಸುತ್ತದೆ. ವಸಾಹತುಶಾಹಿಯ ನ್ಯಾಯಿಕ ವ್ಯವಸ್ಥೆ ಅಂದರೆ ಕೋರ್ಟು ಅಂಜಪ್ಪನನ್ನು ಅಪರಾಧಿ ಎಂದು ದಂಡ ವಿಧಿಸುವ ಮೂಲಕ ತೀರ್ಪು ನೀಡುತ್ತದೆ. ಅಂಜಪ್ಪ ಕೋರ್ಟಿನಲ್ಲಿ ನ್ಯಾಯಾಧೀಶರು ಕೇಳುವ ಪ್ರಶ್ನೆಗಳಿಗೆ ತನ್ನೊಳಗೆ ಉತ್ತರಗಳಿದ್ದರು ಹೇಳದೆ ತಾನು ಕೊಟ್ಟ ಮಾತನ್ನು ಕಾಪಿಟ್ಟುಕೊಳ್ಳುತ್ತಾನೆ. 'ನಾನು ಕದ್ದಿಲ್ಲ, ನನಗೆ ದೇವರು ಸಾಕ್ಷಿ' ಎಂದು ನುಡಿಯುವ ಮೂಲಕ ಕೋರ್ಟು ಹಾಕಿದ ದಂಡವನ್ನು ಕಟ್ಟಿ ಹೊರಬರುತ್ತಾನೆ. ವಸಾಹತುಶಾಹಿಯ ದೃಷ್ಟಿಯಲ್ಲಿ ಅಂಜಪ್ಪ ಅಪರಾಧಿಯಾದರೂ ಕತೆಯು ಅಂಜಪ್ಪ ನಿರಪರಾಧಿ ಎಂಬ ತತ್ವವನ್ನು ಧ್ವನಿಸುತ್ತದೆ. ವಸಾಹತುಶಾಹಿಯ ವ್ಯವಸ್ಥೆಯು ಸೂಕ್ತವಾದ ನ್ಯಾಯವನ್ನು ಒದಗಿಸುತ್ತಿಲ್ಲ ಎಂಬುದನ್ನು ಸೂಕ್ಷ್ಮವಾಗಿ ಗುರುತಿಸುವ ಜೊತೆಗೆ ನಮ್ಮ ನೆಲದ ಸತ್ವವನ್ನು ಮೈಗೂಡಿಸಿಕೊಂಡಿರುವ ಪಂಚಾಯಿತಿ ವ್ಯವಸ್ಥೆಯೇ ಗುಣಾತ್ಮಕವಾದ ನ್ಯಾಯಿಕ ವ್ಯವಸ್ಥೆಯಾಗಿದೆ. ಈ ವ್ಯವಸ್ಥೆಯು ಕಂಡದ್ದನ್ನು, ಕೇಳಿದ್ದನ್ನು, ಪರಾಮರ್ಶಿಸುವ ಗುಣವನ್ನು ಹೊಂದಿದೆ ಎಂಬ ಸ್ಥಳೀಯತೆಯ ಸತ್ವವನ್ನು ಅಂಜಪ್ಪನ ಮೂಲಕ ಮಾಸ್ತಿ ಮಂಡಿಸುತ್ತಾರೆ.

ವಸಾಹತುಶಾಹಿಯು ತನ್ನ ನಿಯಂತ್ರಣವನ್ನು ಆಡಳಿತ ವ್ಯವಸ್ಥೆಯಲ್ಲಿ ಹೊಂದಲು ವರ್ಣದ ಅಭಿವ್ಯಕ್ತಿಯನ್ನು ಅಸ್ತ್ರವಾಗಿ ಬಳಸುತ್ತದೆ. ಭಾರತೀಯರು ಆಳ್ವಿಕೆಯನ್ನು ನಡೆಸಲು ಯೋಗ್ಯರಲ್ಲ. ಕಾರಣ ಅವರು ಕಪ್ಪು ಬಣ್ಣವನ್ನು ಹೊಂದಿದವರು. ಆಳ್ವಿಕೆ ನಡೆಸಲು ಯೋಗ್ಯರಾದವರು ಬಿಳಿ ಬಣ್ಣವನ್ನು ಹೊಂದಿದ ಪಾಶ್ಚಾತ್ಯರು ಎಂಬ ಧೋರಣೆಯನ್ನು ಹುಟ್ಟು ಹಾಕಿದ ವಸಾಹತುಶಾಹಿಯು ಭಾರತೀಯ ಚರಿತ್ರೆಯನ್ನು ಉಲ್ಲೇಖಿಸುವಾಗ

ಭಾರತದಲ್ಲಿ ಆಳ್ವಿಕೆ ಮಾಡಿದ ಶ್ರೇಷ್ಠ ಹಾಗೂ ಪರಾಕ್ರಮಿ ರಾಜರನ್ನು ವಿದೇಶದಿಂದ ವಲಸೆ ಬಂದವರೆಂದು ನಿರೂಪಿಸುವ ಮೂಲಕ ಭಾರತೀಯ ಗುಲಾಮರು ಎಂದು ನಿರ್ಧರಿಸುವ ಒಂದು ಆಲೋಚನೆ ಹುಟ್ಟು ಹಾಕಿತು. ಈ ಸಂದರ್ಭದಲ್ಲಿ ವರ್ಣದ ರಾಜಕೀಯವನ್ನು ಗ್ರಹಿಸುವ ಜೊತೆಗೆ ಕಪ್ಪು ಬಣ್ಣವನ್ನು ಬಿಳಿ ಬಣ್ಣದ ಎದುರಿಗೆ ಗೆಲ್ಲಿಸುವ ತಾತ್ವಿಕತೆಯನ್ನು ಹೊಂದಿರುವ ಜಯಲಕ್ಷ್ಮಿ ಆರ್. ಶ್ರೀನಿವಾಸನ್ ಅವರ 'ಲಾಸ್ಯಜೆ' ಕತೆಯು ಬಣ್ಣದ ನೆಲೆಯಲ್ಲಿ ಸ್ಥಳೀಯತೆಯನ್ನು ನಿರೂಪಿಸುತ್ತದೆ.

ವಸಾಹತುಶಾಹಿಯ ವರ್ಣದ ಸಾಂಸ್ಕೃತಿಕ ಪ್ರಧಾನತೆಯನ್ನು ಭಾರತೀಯರು ಹೇಗೆ ಅನುಕರಿಸಿದರು ಹಾಗೂ ಆದರಿಸಿದರು ಎಂಬುವುದನ್ನು ಮಾಧವಿ ಹಾಗೂ ಊರ್ಮಿಳೆಯ ತಾಯಿ ಮತ್ತು ಪರಿಸರವು ಮಾಧವಿಯ ಬಿಳಿವರ್ಣದ ದೇಹ ಕಾಂತಿಯನ್ನು ಹೊಗಳುವ ಮತ್ತು ಸತ್ಕರಿಸುವ ಬಗೆ. ಊರ್ಮಿಳೆಯ ಕಪ್ಪು ಮೈಬಣ್ಣವನ್ನು ದೂರ ಸರಿಸುವ ಹಾಗೂ ತಿರಸ್ಕಾರದ ನೆಲೆಯನ್ನು ಸೂಕ್ಷ್ಮವಾಗಿ ನಿರೂಪಿಸುವ ಕತೆಗಾರ್ತಿ ಕಪ್ಪು ಮೈಬಣ್ಣ ಹೊಂದಿದವರ ಜ್ಞಾನ ಅಭಿವ್ಯಕ್ತಿಯನ್ನು ಬಣ್ಣಕ್ಕಿಂತ ಮಿಗಿಲೆಂಬ ನೆಲೆಯನ್ನು ವಸಾಹತುಶಾಹಿಯ ಬಾಯಿಂದ ಹೇಳಿಸುವ ಮೂಲಕ ಕಪ್ಪು ಬಣ್ಣವನ್ನು, ಕಪ್ಪು ಬಣ್ಣ ಹೊಂದಿರುವವರ ವ್ಯಕ್ತಿತ್ವ, ಗುಣ, ಜ್ಞಾನವನ್ನು ಪ್ರಧಾನವೆಂದು ಮಂಡಿಸುವ ವಿನ್ಯಾಸವನ್ನು ಸ್ಥಳೀಯತೆ ಎಂದು ಕರೆಯಬಹುದು. ಊರ್ಮಿಳೆಯ ನೃತ್ಯಗಾರಿಕೆ, ಹಾಡುಗಾರಿಕೆಯ ಕಲೆಯನ್ನು ಮೆಚ್ಚಿ ತಲೆದೂಗಿದ ಸಭೆ ಹಾಗೂ ಬ್ರಿಟಿಷ್ ಅಧಿಕಾರಿಯು 'ಲಾಸ್ಯಜೆ' ಎಂಬ ಬಿರುದು ನೀಡಿ, ಹಾರಹಾಕಿ ಸನ್ಮಾನಿಸುತ್ತದೆ. ಕತೆಗಾರ್ತಿ ಭಾರತೀಯ ಸತ್ವವನ್ನು ಜ್ಞಾನವನ್ನು ವಸಾಹತುಶಾಹಿಯ ಧೋರಣೆಯ ನೆಲೆಯಲ್ಲಿ ಗುಣಾತ್ಮಕವಾಗಿ ಮಂಡಿಸುವುದನ್ನು ಕಾಣಬಹುದು. ಮೈಸೂರು ಭಾಗದ ಕತೆಗಾರರು ವಸಾಹತುಶಾಹಿ ಆಡಳಿತಾತ್ಮಕ ಧೋರಣೆಗಳಿಗೆ ತೀವ್ರವಾಗಿ ಪ್ರತಿಕ್ರಿಯಿಸಲಿಲ್ಲ ಕಾರಣ ಮೈಸೂರು ಒಡೆಯ ಮೂಲಕ ವಸಾಹತುಶಾಹಿಯ ನಿಲುವುಗಳು ಜನಮುಖಿಯಾಗಿದ್ದರಿಂದ ಬಹುದೊಡ್ಡ ಆಡಳಿತಾತ್ಮಕ ಪಲ್ಲಟಗಳು ಜನರ ಸ್ಪರ್ಶಕ್ಕೆ ಆಗದ ಕಾರಣ ಕತೆಗಳು ಈ ನೆಲೆಯನ್ನು ಬಹುಮುಖಿಯಾಗಿ ಚರ್ಚೆಗೆ ಒಳಪಡಿಸಲಿಲ್ಲ. ಮಾಸ್ತಿ ಹಾಗೂ ಕೆಲವು ಕತೆಗಾರರು ಆಡಳಿತಾತ್ಮಕ ಪರಿಸರವನ್ನು ಅನುಸಂಧಾನ ಮಾಡಿರುವುದು.

### ೩.೨.೨ ಪರಂಪರೆಯ ಸ್ಥಳೀಯತೆ

ನಮ್ಮ ನೆಲದ ಭಾಷೆ, ನಂಬಿಕೆ, ಆಚಾರ, ವಿಚಾರ, ಧರ್ಮ ಹಾಗೂ ಜೀವನ

ವಿಧಾನವನ್ನು ಒಳಗೊಂಡ ಸಾಂಸ್ಕೃತಿಕ ಪರಂಪರೆಯನ್ನು ಕರ್ನಾಟಕವನ್ನು ಆಳ್ವಿಕೆ ಮಾಡಿದ ಬಹುಪಾಲು ರಾಜ ಮನೆತನಗಳು ಕಾಪಿಟ್ಟುಕೊಂಡು ಬಂದಿದ್ದವು. ಹಾಗು ಅವುಗಳು ನಮ್ಮ ಬದುಕಿನ ಭಾಗವಾಗಿ ರಕ್ತಗತವಾಗಿದ್ದವು. ಮೈಸೂರು ಒಡೆಯರ ಕಾಲಮಾನದಲ್ಲಿ ವಸಾಹತುಶಾಹಿಯ ಪ್ರವೇಶ ಮತ್ತು ಪ್ರಭಾವವು ನಮ್ಮ ಪರಂಪರೆಯಲ್ಲಿ ಬದಲಾವಣೆಯನ್ನು ಹುಟ್ಟುಹಾಕಿತು. ಪಾಶ್ಚಾತ್ಯ ಶಿಕ್ಷಣವನ್ನು ಪಡೆದ ಜನಸಮುದಾಯವು ಪಾಶ್ಚಾತ್ಯ ಚಿಂತನ ಕ್ರಮವನ್ನು ಅಪ್ಪಿಕೊಂಡು ನಮ್ಮ ನೆಲದ ಭಾಷೆ, ನಂಬಿಕೆ, ಆಹಾರ, ಆಚಾರ, ಪದ್ಧತಿಗಳನ್ನು ವಿಜ್ಞಾನ ಕೇಂದ್ರಿತ ಮೀಮಾಂಸೆಯಲ್ಲಿ ನೋಡಲು ಆರಂಭವಾದಾಗ ನಮ್ಮ ಸಾಂಸ್ಕೃತಿಕ ಪರಂಪರೆಯು ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ರಾಜಪರಂಪರೆ, ಜನರ ಆಚಾರ, ವಿಚಾರಗಳು ಪಲ್ಲಟವಾಗಿ ಪಾಶ್ಚಾತ್ಯ ಜೀವನ ಕ್ರಮವು ನಮ್ಮೊಳಗೆ ಬೆಸೆದುಕೊಂಡಿತು. ಈ ಕಾಲಮಾನದಲ್ಲಿ ವಸಾಹತುಶಾಹಿಯ ಸಾಂಸ್ಕೃತಿಕ ಪರಂಪರೆಯಷ್ಟೆ ಭಾರತೀಯ ಸಾಂಸ್ಕೃತಿಕ ಪರಂಪರೆಯು ಶ್ರೇಷ್ಠವೆಂಬ ಆಲೋಚನೆಯನ್ನು ಹುಟ್ಟು ಹಾಕುವ ಅನಿವಾರ್ಯತೆ ನಿರ್ಮಾಣವಾಯಿತು. ಈ ಪರಿಸರವನ್ನು ಗಮನಿಸಿದ ಈ ಭಾಗದ ಮೊದಲ ತಲೆಮಾರಿನ ಕತೆಗಾರರು ನಮ್ಮ ನೆಲದ ಸತ್ವವನ್ನು ಸ್ಥಳೀಯತೆಯ ಅಭಿವ್ಯಕ್ತಿಯಲ್ಲಿ ಕತೆಯಾಗಿಸುವ ಕಾರ್ಯವನ್ನು ಮಾಡಿದರು.

ಮಾಸ್ತಿಯವರ 'ಮಸುಮತ್ತಿ' ಕತೆಯು ನಮ್ಮ ನೆಲದ ಆಚಾರ, ಕಲೆ, ವಾಸ್ತುಶಿಲ್ಪ, ನಂಬಿಕೆಗಳನ್ನು ವಸಾಹತುಶಾಹಿಗೆ ಪರಿಚಯ ಮಾಡುವುದರ ಮೂಲಕ ನಮ್ಮ ಸಾಂಸ್ಕೃತಿಕ ಪರಂಪರೆಯ ಮೌಲ್ಯವನ್ನು ಗುಣಸತ್ವಗಳನ್ನು ನಿರೂಪಿಸುತ್ತದೆ. ವಸಾಹತುಶಾಹಿಯ ಮೂಲಕ ನಮ್ಮ ನೆಲದ ಆಚಾರ, ಕಲೆ, ನಂಬಿಕೆ, ಜೀವನ ಸಾರವನ್ನು ಗುಣಾತ್ಮಕವಾದ ನೆಲೆಯಲ್ಲಿ ಮಂಡಿಸುವ ಮೂಲಕ ಸ್ಥಳೀಯತೆಯನ್ನು ಅನುಸಂಧಾನ ಮಾಡುತ್ತದೆ. ಮಾಸ್ತಿಯವರು ವಸಾಹತುಶಾಹಿಯ ಆಳ್ವಿಕೆಯ ಪರಿಸರದಲ್ಲಿ ಅಧಿಕಾರಿಯಾಗಿ ಇದ್ದುಕೊಂಡು ವಸಾಹತುಶಾಹಿಯ ಧೋರಣೆಗಳನ್ನು ಸ್ಥಳೀಯತೆಯ ನೆಲೆಯಲ್ಲಿ ಸೂಕ್ಷ್ಮವಾಗಿ ಪ್ರತಿರೋಧಿಸುತ್ತಾರೆ. ಪ್ರತಿರೋಧದ ನೆಲೆಯು ಗಾಢವಾಗಿ ಗೋಚರವಾಗದಿದ್ದರು ಸಹಾ ಸ್ಥಳೀಯತೆಯ ಸತ್ವವು ಬಿಗುವಾಗಿಯೇ ಪ್ರತಿನಿಧಿತಗೊಂಡಿರುತ್ತದೆ. ಕೃಷ್ಣಯ್ಯ, ಎಮಿಲಿ ಹಾಗೂ ಫರ್ಕುವರ್‌ಗೆ ಭಾರತೀಯ ಚರಿತ್ರೆಯ ನೆಲೆಯಿಂದ ಮಸುಮತ್ತಿಯ ಪರಿಸರ, ಜನಬದುಕು, ನಂಬಿಕೆ, ಪುರಾಣ, ಶ್ರಮ, ಕಲಾ ಪರಿಕರವನ್ನು ಪರಿಚಯಿಸುತ್ತಾರೆ. ವಸಾಹತುಶಾಹಿ ಕಾಲಮಾನದಲ್ಲಿ ಪಾಶ್ಚಾತ್ಯರು ಹೇಳುವ ಜ್ಞಾನವೆಲ್ಲವು ಪ್ರಧಾನ ಹಾಗೂ ಶ್ರೇಷ್ಠವೆಂಬ ಭಾವನೆ ಭಾರತೀಯ ಮನಸ್ಸನ್ನು ಅವಲಂಬಿಸಿರುವುದರಿಂದ ಮಾಸ್ತಿ ಎಮಿಲಿ

ಹಾಗೂ ಫರ್ಕುವರ್ ಮೂಲಕ ಭಾರತೀಯ ಜ್ಞಾನವನ್ನು ಗುಣಾತ್ಮಕವೆಂದು ನಿರೂಪಿಸುತ್ತಾರೆ. ಈ ರೀತಿಯ ನಿರೂಪಣೆಯ ಅಭಿವ್ಯಕ್ತಿಯನ್ನು ಸ್ಥಳೀಯತೆ ಎಂದು ಕರೆಯಬಹುದು.

ಜಯಲಕ್ಷ್ಮಿ ಆರ್. ಶ್ರೀನಿವಾಸನ್ ಅವರ 'ಹಸಿರು ಲಂಗ' ಕತೆಯು ನಮ್ಮ ಬದುಕಿನ ನೆಲೆಯಲ್ಲಿ ಇರುವ ದಾನದ ಸತ್ವವನ್ನು ನಿರೂಪಿಸುತ್ತದೆ. ಪಾಪ-ಪುಣ್ಯಗಳನ್ನು ಕೇಂದ್ರವಾಗಿಸಿಕೊಳ್ಳುವ ಕತೆಯು ಶ್ರೀಮಂತನೊಬ್ಬ ಭಿಕ್ಷುಕಿಗೆ ತುದಿಗಾಲಿನಲ್ಲಿ ಒದೆಯುವ ಮೂಲಕ ಅವಳನ್ನು ಹಿಂಸಿಸುತ್ತಾನೆ. ಭಿಕ್ಷುಕಿ ಮರಣ ಹೊಂದುತ್ತಾಳೆ. ಶ್ರೀಮಂತನ ಈ ಕೃತ್ಯದ ಫಲವಾಗಿ ಅವನ ಮಗಳು ಹೊಟ್ಟೆಯಲ್ಲಿ ಹುಣ್ಣಾಗಿ ಸಾಯುತ್ತಾಳೆ. ಕತೆಗಾರ್ತಿ ನಮ್ಮ ಬದುಕಿನಲ್ಲಿ ಇರುವ ಜೀವನ ಮೌಲ್ಯಗಳನ್ನು ಗುಣಾತ್ಮಕವಾಗಿಯೇ ಮಂಡಿಸುತ್ತಾರೆ. ಈ ರೀತಿಯ ಜೀವನ ಮೌಲ್ಯಗಳನ್ನು ಅರಿತುಕೊಂಡ ಪದ್ಮ, ತನ್ನ ಮನೆಕೆಲಸದ ಕೆಂಪಿಯು ತನ್ನ ಮಗಳಿಗೆ ಹಸಿರು ಲಂಗವನ್ನು ಬೇಡಿದಾಗ ಹಸಿರು ಲಂಗವನ್ನು ದಾನವಾಗಿ ನೀಡುತ್ತಾಳೆ. ಕತೆಯೊಳಗೆ ನಮ್ಮ ಸ್ಥಳೀಯ ಪರಂಪರೆಯ ಆಶಯಗಳೇ ಅನುಸಂಧಾನವಾಗಿರುವುದನ್ನು ಕಾಣಬಹುದು.

ಸಿ.ಎನ್. ಜಯಲಕ್ಷ್ಮಿಯವರ 'ಅಂಧಶ್ರದ್ಧೆ' ಕತೆಯು ಭಾರತೀಯ ಧಾರ್ಮಿಕ ಪರಂಪರೆಯ ಮೀಮಾಂಸೆಯನ್ನು ಗುಣಾತ್ಮಕವಾಗಿ ವಸಾಹತುಶಾಹಿಯ ಧೋರಣೆಗೆ ಮುಖಾಮುಖಿಯಾಗಿಸುತ್ತದೆ. ವಸಾಹತುಶಾಹಿಯ ಧೋರಣೆಯ ಭಾಗವಾಗಿ ರೂಪುಗೊಂಡ ಆಧುನಿಕ ಶಿಕ್ಷಣ ಕ್ರಮದ ಫಲವಾಗಿ ಭಾರತೀಯ ಯುವ ಮನಸುಗಳು ವೈಚಾರಿಕತೆಯನ್ನು, ವೈಜ್ಞಾನಿಕ ಪಾಶ್ಚಾತ್ಯ ನಂಬಿಕೆಯನ್ನು ಪ್ರವೇಶ ಪಡೆದ ಮೇಲೆ ನಮ್ಮ ನೆಲದ ನಂಬಿಕೆ, ಆಚಾರ, ದೇವರು, ಧರ್ಮಗಳು ಮತ್ತು ಅದಕ್ಕೆ ಸಂಬಂಧಿಸಿದ ಜ್ಞಾನ ಮೀಮಾಂಸೆಯನ್ನು ಅನುಮಾನದಿಂದ ಗ್ರಹಿಸಿದರು. ಸೋಮಾ 'ಸೋಷಿಯಲಿಸಂ'ಗೆ ಪ್ರಭಾವಿತನಾಗಿ, ಪಾಶ್ಚಾತ್ಯ ಸಂಸ್ಕೃತಿಯಲ್ಲಿ ನಂಬಿಕೆಯಿಟ್ಟವನಾಗಿ ಭಾರತೀಯ ಧಾರ್ಮಿಕ ಚಿಂತನಾ ಕ್ರಮಗಳನ್ನು ತಿರಸ್ಕರಿಸಿ, ಅವುಗಳು ಮೌಲ್ಯರಹಿತವಾಗಿವೆ ಎಂದು ನಿರ್ಧರಿಸುತ್ತಾನೆ. ಸೋಮುವಿನ ಗೆಳೆಯನಾದ ಶಿವ ಭಾರತೀಯ ಸ್ಥಳೀಯವಾದ ದೈವ, ನಂಬಿಕೆ, ಆಚಾರಗಳಲ್ಲಿ ನಂಬಿಕೆಯಿಟ್ಟವನಾಗಿ, ಅವುಗಳನ್ನು ಗುಣಾತ್ಮಕವಾಗಿ ಚಿಂತಿಸುತ್ತಾನೆ. ಶಿವನ ಮಾವನು ಸೋಮುವಿಗೆ ಭಾರತೀಯ ನಂಬಿಕೆಗಳನ್ನು ದೈವಿಕ ಮೀಮಾಂಸೆಯನ್ನು ವಾಸ್ತವದ ನೆಲೆಯಲ್ಲಿ ಪರಿಚಯಿಸುತ್ತಾನೆ. ಹಾಗೂ ಸೋಮುವಿನ ಅರಿವಿಗೂ ಅರಿವದಾಗ ಭಾರತೀಯ ಧಾರ್ಮಿಕ ಪರಂಪರೆಯನ್ನು ಗುಣಾತ್ಮಕವೆಂದು ಭಾವಿಸುತ್ತಾನೆ. ಕತೆಗಾರ್ತಿ ಪಾಶ್ಚಾತ್ಯ ಪರಿಸರದಲ್ಲಿ ಸ್ಥಳೀಯ ಪರಂಪರೆಯನ್ನು ಮೌಲ್ಯಯುತವಾದದ್ದು ಎಂದೂ ತಾತ್ವೀಕರಿಸುತ್ತಾರೆ.

ಅಸ್ವತ್ಥರ 'ಗಂಟು' ಕತೆಯು ಪ್ರಾಮಾಣಿಕತೆಯನ್ನು ಸ್ಥಳೀಯ ಪರಂಪರೆಯ ಚೌಕಟ್ಟಿನಲ್ಲಿ ಚರ್ಚಿಸುತ್ತದೆ. ಮುಂಬೈಯಂತಹ ವಸಾಹತುಶಾಹಿ ಕೇಂದ್ರಿತ ನಗರದಲ್ಲಿ ಯುದ್ಧ ಸಂದರ್ಭದಲ್ಲಿ ಉಂಟಾದ ಬಿಗುವಿನ ವಾತಾವರಣವನ್ನು ನಿರೂಪಿಸುವ ಕತೆಗಾರರು ಇನ್ನೊಬ್ಬರ ಗಂಟನ್ನು ಮುಟ್ಟಬಾರದೆಂಬ ಹಾಗೂ ಯಾವುದೇ ಗಂಟುಗಳು ಸಿಕ್ಕರು ಅದನ್ನು ಸಂಬಂಧಪಟ್ಟವರಿಗೆ ನೀಡಬೇಕೆಂಬ ಮನೋಭಾವವನ್ನು ರೈಲಿನಲ್ಲಿ ಪ್ರಯಾಣಿಸುತ್ತಿದ್ದ ಒಬ್ಬ ಪ್ರಯಾಣಿಕನ ಮೂಲಕ ಅಭಿವ್ಯಕ್ತಿಸುತ್ತಾರೆ. ಪ್ರಯಾಣಿಕನೊಬ್ಬ ತನ್ನ ಮುಂದಿನ ಸೀಟಿನಲ್ಲಿ ಅನಾಥವಾಗಿ ಬಿದ್ದಿರುವ ಗಂಟನ್ನು ಗಮನಿಸಿ ಆ ಗಂಟಿನಲ್ಲಿ ಇರಬಹುದಾದ ಬೆಲೆಬಾಳುವ ವಸ್ತುಗಳನ್ನು ಗಮನಿಸುತ್ತಾನೆ. ಮತ್ತು ಗಂಟಿನ ಯಜಮಾನಿಗೆ ತಲುಪಿಸುವುದು ಹೇಗೆ ಎಂದು ಆಲೋಚಿಸುವ ಪ್ರಾಮಾಣಿಕತನವನ್ನು ನಾವು ಪರಂಪರೆಯ ಸ್ಥಳೀಯತೆ ಎಂದು ಗುರುತಿಸಬಹುದು.

ದೇವುಡು ಅವರ 'ಮೂರು ಕನಸು' ಕತೆಯು ಬ್ರಾಹ್ಮಣ ಸಮುದಾಯದ ಪರಂಪರೆಯನ್ನು ಕಾಪಿಟ್ಟುಕೊಳ್ಳವುದರ ಜೊತೆಗೆ ಸಾವಿನ ನಂತರ ನಡೆಸುವ ಸಂಸ್ಕಾರ, ವಿಧಿ-ವಿಧಾನಗಳನ್ನು ಹಾಗೂ ಸ್ವರ್ಗ ನರಕದಂತಹ ನಂಬಿಕೆಯನ್ನು ಗುಣಾತ್ಮಕವಾಗಿ ಅನುಸಂಧಾನ ಮಾಡುತ್ತದೆ, ಕಿಟ್ಟಮ್ಮ ಕ್ಲಬಿನ ಹೊಟೇಲಿನಲ್ಲಿ ಹಿಟ್ಟು ರುಬ್ಬಿಕೊಂಡು ಬದುಕುತ್ತಿರುವ ಏಕಜೀವಿ, ಗಂಡನನ್ನು ಕಳೆದುಕೊಂಡು ಹಿಂದು ಮುಂದು ಯಾರು ಇಲ್ಲದೆ ಒಬ್ಬಳೆ ಹಿಟ್ಟು ರುಬ್ಬುವ ಕಾಯಕದಿಂದ ಬದುಕು ರೂಪಿಸಿಕೊಂಡಿರುವ ಕಿಟ್ಟಮ್ಮ ತಾನು ಸತ್ತರೇ ಸಂಸ್ಕಾರ ಮಡಬೇಕು, ಪಿಂಡ ತಿಥಿಯನ್ನು ಕ್ರಮಬದ್ಧತೆಯಿಂದ ಮಾಡಿದರೆ ತಾನು ಸ್ವರ್ಗಕ್ಕೆ ಹೋಗುತ್ತೇನೆಂಬ ನಂಬಿಕೆಯಿಂದ ತನ್ನ ಸಂಬಂಧಿಯಾದ ಸುಬ್ಬನನ್ನು ಪ್ರೀತಿಯಿಂದ ಮಾತನಾಡಿಸುವುದರ ಜೊತೆಗೆ, ತಿಂಡಿ, ಕಾಫಿ ಮಾಡಿಕೊಡುವ ಆರೈಕೆ ಮಾಡುತ್ತಾಳೆ. ಹಾಗೆಯೇ ತಾನು ದುಡಿದ ದುಡ್ಡನ್ನು ಮಣ್ಣಿನಲ್ಲಿ ಹೂತಿಟ್ಟು ತನ್ನ ಸಂಸ್ಕಾರ ತಿಥಿಯನ್ನು ಆ ಹಣದಿಂದ ಮಾಡಬೇಕೆಂದು ಸುಬ್ಬನಿಗೆ ಹೇಳುತ್ತಾಳೆ. ಸುಬ್ಬನು ಕಿಟ್ಟಮ್ಮ ಸತ್ತ ಸುದ್ದಿ ತಿಳಿದು, ಅವಳ ಮನೆಗೆ ತೆರಳಿ ಅವಳ ಸಂಸ್ಕಾರವನ್ನು ಹಾಗೂ ಸಾವಿನ ನಂತರದ ಕಾರ್ಯವನ್ನು ಮಾಡುತ್ತಾನೆ.

ದೇವುಡು ಪರಂಪರೆಯನ್ನೆ ವಸಾಹತುಶಾಹಿ ಪರಿಸರದಲ್ಲಿ ಗಟ್ಟಿಯಾಗಿ ಪ್ರತಿಪಾದಿಸುತ್ತಾರೆ. ಈ ಪ್ರತಿಪಾದನೆಯಲ್ಲಿ ಸ್ಥಳೀಯತೆಯ ಸತ್ವಗಳು ಆಧುನಿಕತೆಯ ಪ್ರವೇಶದಿಂದಾಗುವ ಬದಲಾವಣೆಯನ್ನು ಹೇಳುವ ಜೊತೆಗೆ ತನ್ನ ಮೂಲಭೂತವಾದ ಪರಂಪರೆಯ ಸತ್ವವನ್ನು ಕಾಪಾಡಿಕೊಳ್ಳುವುದನ್ನು ಗುರುತಿಸಬಹುದು.

ಮೈಸೂರು ಭಾಗದ ಮೊದಲ ತಲೆಮಾರಿನ ಕತೆಗಾರರು ನಮ್ಮ ನೆಲದ ಪರಂಪರೆಯ ಭಾಗವಾಗಿರುವ ನಂಬಿಕೆ, ಆಚಾರ, ಧರ್ಮ, ದೈವ ಹಾಗೂ ಜೀವನ ಮೌಲ್ಯಗಳನ್ನು ಗುರುತಿಸುವ ಹಾಗೂ ಉನ್ನತವಾದ ಜ್ಞಾನವೆಂದು ನಿರೂಪಿಸುವುದನ್ನು ಕಾಣಬಹುದು. ವಸಾಹತುಶಾಹಿಯ ಧೋರಣೆಗಳಿಗೆ ಬದಲಾದ ನಮ್ಮ ನೆಲದ ಪರಂಪರೆಯ ಬಹುತ್ವವನ್ನು ವಿಮರ್ಶಿಸುವ ಹಾಗೂ ಮೂಲಸತ್ವವನ್ನು ಕಾಪಿಟ್ಟುಕೊಳ್ಳುವ ಕಾರ್ಯವನ್ನು ಕತೆಗಳ ಮೂಲಕ ಅನುಸಂಧಾನ ಮಾಡಿರುವುದು ಈ ಭಾಗದ ಕತೆಗಾರರ ಕಥಾಶಕ್ತಿಯಾಗಿದೆ. ಕತೆಗಾರರು ವಸಾಹುತುಶಾಹಿಯ ಪ್ರಭುತ್ವದ ಒಳಗೆ ಇದ್ದುಕೊಂಡು ವಸಾಹತುಶಾಹಿಯ ಧೋರಣೆಗಳನ್ನು ಪ್ರತಿರೋಧಿಸುವ ಮೂಲಕ ನಮ್ಮ ಸ್ಥಳೀಯ ಪರಂಪರೆಯನ್ನು ಗುಣಾತ್ಮಕವಾಗಿ ಮಂಡಿಸುವುದನ್ನು ಗುರುತಿಸಬಹುದು. ಮುಖ್ಯವಾಗಿ ವಸಾಹತುಶಾಹಿಯ ಮೂಲಕವೇ ಭಾರತೀಯ ನಂಬಿಕೆ, ಧರ್ಮ, ಕಲೆ, ಸಾಹಿತ್ಯವನ್ನು ಶ್ರೇಷ್ಠವೆಂದು ಹೇಳಿಸುವ ತಂತ್ರವನ್ನು ಬಳಸುವ ಮೂಲಕ ಪರಂಪರೆಯನ್ನು ಕಟ್ಟುವ ಕಾರ್ಯ ಮಾಡುತ್ತಾರೆ. ಈ ಎಲ್ಲಾ ಕತೆಗಳ ಪ್ರಧಾನ ಸತ್ವ ಪರಂಪರೆಯನ್ನು ಮರುನಿರೂಪಣೆ ಮಾಡುವುದು ಹಾಗೂ ಆಧುನಿಕತೆಯ ಪರಿಸರದಲ್ಲಿ ಅಸ್ಮಿತೆಯನ್ನು ಉಳಿಸುವುದೇ ಆಗಿರುವುದರಿಂದ ಇದನ್ನು ಪರಂಪರೆಯ ಸ್ಥಳೀಯತೆ ಎಂದು ಕರೆಯಬಹುದು.

### ೫.೨.೩. ಸಂಬಂಧವನ್ನು ಬೆಸೆಯುವ ಸ್ಥಳೀಯತೆ

ವಸಾಹತುಶಾಹಿಯ ಪ್ರಭುತ್ವದ ಧೋರಣೆ, ಹೋರಾಟ, ಒಪ್ಪಂದಗಳು ಸ್ಥಳೀಯ ನೆಲದಲ್ಲಿ ನಡೆಯಿತು. ಇದರ ಪರಿಣಾಮ ಸಾಮಾಜಿಕ ಸ್ತರ ವ್ಯವಸ್ಥೆಯನ್ನು ಪಲ್ಲಟಿಸಿತ್ತಲ್ಲದೆ, ಕೆಳ ಹಾಗೂ ಮೇಲುವರ್ಗದ ಚಲನೆಯನ್ನು ಉಂಟುಮಾಡಿತು. ವಸಾಹತುಶಾಹಿಯು ರೂಪಿಸಿದ ರೈಲ್ವೆ, ರಸ್ತೆ, ಸಾರಿಗೆ, ಕೈಗಾರಿಕೆ ಇತ್ಯಾದಿ ಆರ್ಥಿಕ ವ್ಯವಸ್ಥೆಯು ಸ್ಥಳೀಯ ಸಾಮಾಜಿಕ ರಚನೆಯನ್ನು ಛಿದ್ರವಾಗಿಸಿತು. ಕೃಷಿ ಬದುಕಿನ ಜೊತೆಯಲ್ಲಿ ಸ್ವಾವಲಂಬಿ ಆರ್ಥಿಕತೆಯನ್ನು ಪಡೆದುಕೊಂಡು ಕೂಡು ಕುಟುಂಬದಲ್ಲಿ ಬದುಕುತ್ತಿದ್ದ ಜನರು ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಗಿ ನಗರವನ್ನು ಸೇರಿಕೊಂಡು ಬದಕಲು ಆರಂಭಿಸಿದರು. ನಗರದ ದುಡಿಮೆಯ ಬದುಕು ಜೀವನ ಮೌಲ್ಯವನ್ನು ಕೇಂದ್ರೀಕರಿಸದೆ ಹಣದ ಮೌಲ್ಯವನ್ನು ಜೀವಾಳವಾಗಿಸಿಕೊಂಡಿತು. ನಾಗರಿಕ ಜೀವನ ವಿಧಾನವು ಹೊಸ ಬಗೆಯ ಕುಟುಂಬ ರಚನೆಯನ್ನು ಆಹಾರ, ಭಾಷೆ, ವ್ಯವಹಾರಿಕತೆಯನ್ನು ನಿರ್ಮಾಣ ಮಾಡಿತು. ಈ ರೀತಿಯ ಪಾಶ್ಚಾತ್ಯ ಸಂಸ್ಕೃತಿಯ ಪ್ರವೇಶವು ಗಂಡು ಹೆಣ್ಣುಗಳ ಸಂಬಂಧವನ್ನು ವ್ಯವಹಾರಿಕ

ನೆಲೆಗಟ್ಟಿಗೆ ನೂಕಿತು. ಈ ಕಾಲಮಾನ ಪರಿಸರವನ್ನು ಗ್ರಹಿಸುವ ಕತೆಗಾರರು ನಮ್ಮ ಬದುಕಿನ ಮೌಲ್ಯಗಳನ್ನು ಮರುಕಟ್ಟುವ ಮೂಲಕ ಹೆಣ್ಣು ಗಂಡುಗಳನ್ನು ಭಾರತೀಯ ಕೌಟುಂಬಿಕ ನೆಲೆಯಲ್ಲಿ ಬೆಸೆಯುವ ತಾತ್ವಿಕತೆಯನ್ನು ರೂಪಿಸುವ ಮೂಲಕ ಸಾಮಾಜಿಕ ವ್ಯವಸ್ಥೆಯನ್ನು ಸ್ಥಳೀಯತೆಯ ನೆಲೆಯಿಂದ ಚಿಕಿತ್ಸೆ ನೀಡುವ ಮೂಲಕ ಬದುಕನ್ನು ಬೆಸೆಯುವ ಚಿಂತನೆಯನ್ನು ಹುಟ್ಟು ಹಾಕುತ್ತಾರೆ.

ಗೋರೂರು ರಾಮಸ್ವಾಮಿ ಅಯ್ಯಾಂಗಾರ್ ಅವರ 'ಹೆಂಡತಿಯೆಂಬುವುದನ್ನು ಮರೆತರೆ' ಕತೆಯು ವಸಾಹತುಶಾಹಿಯ ಬಂಡವಾಳಶಾಹಿತ್ವದ ದುಡಿಮೆಯ ಪರಿಸರ ಕುಟುಂಬ ಮೀಮಾಂಸೆಯನ್ನು ಪಲ್ಲಟಿಸಿದ ಬಗೆಯನ್ನು ಸ್ಥಳೀಯತೆಯ ಭೂಮಿಕೆಯಲ್ಲಿ ಚರ್ಚೆ ಮಾಡುತ್ತದೆ. ಗಂಡ ಹೆಂಡತಿಯ ಬದುಕಿನ ವಿನ್ಯಾಸದ ಮೂಲಕ ಪ್ರವೇಶ ಪಡುವ ಕತೆಯು ಹೆಣ್ಣು ಸಂಸಾರದಲ್ಲಿ ತನ್ನ ಗಂಡ ತನ್ನ ವಸ್ತುವಾಗಿರಬೇಕೆಂದು ಭಾವಿಸುವ ಜೊತೆ ಬೇರೆ ಹೆಣ್ಣುಗಳನ್ನು ಮಾತನಾಡಿಸಬಾರದು, ನೋಡಬಾರದು ಎಂಬ ನಿಲುವಿಗೆ ಬದ್ಧಳಾಗಿ ಬದುಕನ್ನು ನಡೆಸುತ್ತಾಳೆ. ಗಂಡ ಅಂಗಡಿ ವ್ಯವಹಾರವನ್ನು ನಡೆಸುವುದರಿಂದ ಎಲ್ಲರೊಂದಿಗೆ ಮಾತನಾಡುವ ಮತ್ತು ಬೆರೆಯುವ ಮನಸ್ಥಿತಿಯನ್ನು ಹೊಂದಿರುತ್ತಾನೆ. ಆದರೆ ಗಂಡನ ಈ ರೀತಿಯ ನಡವಳಿಕೆ ಹೆಂಡತಿಗೆ ಅನುಮಾನವನ್ನು ಹಾಗೂ ದ್ವೇಷವನ್ನು ಉಂಟು ಮಾಡುತ್ತದೆ. ಈ ಅನುಮಾನ ಇಬ್ಬರಲ್ಲಿಯೂ ಜಗಳ, ಕಿತ್ತಾಟ, ಕೂಗಾಟ, ಆರೋಪಗಳು ಹುಟ್ಟಿಕೊಂಡು ಸಂಸಾರದ ಸಾರವು ಅನಾರೋಗ್ಯಗೊಂಡು ವಿರಸವು ಉಂಟಾಗುತ್ತದೆ. ಗಂಡ ಹೆಂಡತಿಯರು ಇಬ್ಬರು ಮಾತನಾಡದೆ ಬದುಕಲು ಆರಂಭಿಸುತ್ತಾರೆ. ಆದರೆ ಕೆಲವು ದಿನಗಳ ನಂತರ ಗಂಡನಿಗೆ ತಾನು ಮಾಡುತ್ತಿರುವುದು ತಪ್ಪು ಅನ್ನಿಸುತ್ತದೆ. ಹೆಂಡತಿಯಾದವಳು ಎಲ್ಲಾ ಆಸೆಗಳನ್ನು ಮರೆತು ತನ್ನ ಬದುಕಿಗಾಗಿ ದುಡಿಯುತ್ತಿದ್ದಾಳೆ. ತನ್ನ ಗಂಡ ತನ್ನಲ್ಲೆ ಇರಬೇಕೆಂದು ಬಯಸುವುದು ತಪ್ಪಿಲ್ಲ. ಹೆಂಡತಿಯನ್ನು ಅರ್ಥಮಾಡಿಕೊಂಡು ಬದುಕಬೇಕೆಂದು ತೀರ್ಮಾನಿಸುತ್ತಾನೆ. ಹೆಂಡತಿಯು ಸಹಾ ತನ್ನ ಗಂಡ ಅಂಗಡಿಯಲ್ಲಿ ಮೈಮುರಿದು ದುಡಿದು ಮನೆಗೆ ಬಂದಾಗ ಪ್ರೀತಿಯ ನೆಮ್ಮದಿಯನ್ನು ನೀಡಬೇಕು ಹೊರತು ಅನುಮಾನ, ದ್ವೇಷ ಮಾಡಬಾರದೆಂದು ನಿರ್ಧರಿಸುತ್ತಾಳೆ. ಹೀಗೆ ಗಂಡ ಹೆಂಡತಿಯರಿಬ್ಬರೂ ಹೊಂದಾಣಿಕೆಯ ಬದುಕಿಗೆ ತಮ್ಮನ್ನು ತೆರೆದುಕೊಳ್ಳುತ್ತಾರೆ. ಕತೆಗಾರರು ಗಂಡ ಹೆಂಡತಿಯ ಹೊಂದಾಣಿಕೆಯ ನೆಲೆಯನ್ನು ಸ್ಥಳೀಯತೆಯ ಅಭಿವ್ಯಕ್ತಿಯಾಗಿ ಮಂಡಿಸುತ್ತಾರೆ.

ವಸಾಹುತುಶಾಹಿಯ ಪರಿಣಾಮದಿಂದ ಹುಟ್ಟಿಕೊಂಡ ನಗರ ಹಾಗೂ ಔದ್ಯೋಗಿಕ

ಕ್ಷೇತ್ರಗಳು ಕುಟುಂಬ ವ್ಯವಸ್ಥೆಯನ್ನು ಹೊಸದಾಗಿ ರೂಪಿಸಿದರು. ಈ ಕಾಲಮಾನದಲ್ಲಿ ಹುಟ್ಟಿಕೊಂಡ ಅಣುಕುಟುಂಬ ವ್ಯವಸ್ಥೆಯು ಸಾಮಾಜಿಕವಾಗಿ ಜೀವನ ಮೌಲ್ಯ ಕುಸಿಯುವಂತೆ ಮಾಡಿತು. ಪುರುಷ ಉದ್ಯೋಗ ಕ್ಷೇತ್ರದಲ್ಲಿ ದುಡಿಯಲು ಆರಂಭಿಸಿದ ಮೇಲೆ ಕುಟುಂಬ ಮೇಲಿನ ಆಸಕ್ತಿಯನ್ನು ಕಳೆದುಕೊಂಡನು, ತನ್ನ ಹೆಂಡತಿ, ಮಕ್ಕಳಿಗೆ ನೀಡಬೇಕಾದ ಪ್ರೀತಿ, ವಾತ್ಸಲ್ಯ, ಸಾಮಾಜಿಕ ಸ್ಪರ್ಶತೆಯನ್ನು ಮರೆತು ದುಡಿಮೆ ಹಾಗೂ ಹಣಗಳಿಕೆ ಪ್ರಧಾನವಾಗುವ ಕತೆಯೇ ಎಸ್.ಜಿ. ಶಾಸ್ತ್ರೀಯವರ 'ಹಾಗಲಕಾಯಿ ಮತ್ತು ತಾಳೆಹೂವು'. ಈ ಕತೆಯು ಭೌತಿಕ ಪ್ರಪಂಚವನ್ನು ದಾಟಿ ಸ್ಥಳೀಯತೆಯ ಹೊಂದಾಣಿಕೆ ರೂಪಿಸುವುದನ್ನು ತಾತ್ವಿಕವಾಗಿ ಮಂಡಿಸುತ್ತಾರೆ. ಸುಬ್ಬರಾವ್ 'ಹಿತಮೋದಿನಿ' ಪತ್ರಿಕೆಯನ್ನು ನಡೆಸುವ ಕಾರಣದಿಂದಾಗಿ ತನ್ನ ಎಲ್ಲಾ ಸಮಯವನ್ನು ದುಡಿಮೆಗೆ ಬಳಸುತ್ತಾರೆ. ಈ ನಡುವೆ ಸುಬ್ಬರಾವ್‌ನ ಹೆಂಡತಿ ಸುಂದರಿ ಗಂಡ ತನ್ನನ್ನು ಮರೆಯುತ್ತಿದ್ದಾನೆ ಎಂದು ತಿಳಿದು ಮಾನಸಿಕವಾಗಿ ಚಿಂತೆಗೆ ಒಳಗಾಗಿ ಜ್ವರದಿಂದ ಬದುಕಲಾಗದ ಸ್ಥಿತಿಗೆ ತೆರಳುತ್ತಾಳೆ. ಯಾವ ಔಷಧಿಯು ಅವಳ ರೋಗವನ್ನು ಗುಣಪಡಿಸುವುದಿಲ್ಲ. ಸುಂದರಿಯ ಮಾನಸಿಕ ರೋಗವನ್ನು ತಿಳಿದ ವೈದ್ಯರು ತನ್ನ ಗೆಳೆಯನಾದ ವೆಂಕಟಸುಬ್ಬಯ್ಯನ ಮನೆಗೆ ಸುಬ್ಬರಾವರನ್ನು ಕರೆದುಕೊಂಡು ಹೋಗಿ ವೆಂಕಟಸುಬ್ಬಯ್ಯ ಹಾಗೂ ಲಕ್ಷ್ಮಿದೇವಿಯ ಸರಸ ಸಲ್ಲಾಪ ಪ್ರೀತಿ ತುಂಬಿದ ಮಾತುಕತೆಗಳನ್ನು ಕಿಟಕಿಯಲ್ಲಿ ಕದ್ದು ನೋಡುವಂತೆ ಸೂಚಿಸುತ್ತಾರೆ. ಸುಬ್ಬರಾವ್ ಹೆಂಡತಿಯ ರೋಗಕ್ಕೆ ಕಾರಣವನ್ನು ಅರಿತುಕೊಂಡವನೇ ಸುಂದರಿಗೆ ಸಮಯವನ್ನು ನೀಡಲು ಆರಂಭಿಸಿದ, ಸುಂದರಿ ಕೆಲವು ದಿನಗಳಲ್ಲಿ ಮೊದಲಿನಂತಾದಳು ಹಾಗೂ ಸುಖಿಸಂಸಾರಕ್ಕೆ ನಾಂದಿಯಾಯಿತು. ಕತೆಗಾರರು ಗಂಡ ಹೆಂಡತಿಯ ನಡುವಿನ ಪ್ರೀತಿ, ನಂಬಿಕೆ, ರಸಿಕತೆ, ಸರಸ ಸಲ್ಲಾಪಗಳು ದಾಂಪತ್ಯವನ್ನು ಉಳಿಸುತ್ತದೆ ಎಂಬ ಸ್ಥಳೀಯತೆ ಆಶಯವನ್ನು ಕೇಂದ್ರೀಕರಿಸುತ್ತಾರೆ.

ಮಾಸ್ತಿಯವರ ವೆಂಕಟಿಗನ ಹೆಂಡತಿ, ಮೊಸರಿನ ಮಂಗಮ್ಮ ಕತೆಯು ಒಡೆದು ಹೋದ ಸಂಸಾರವನ್ನು ಬೆಸೆಯುವ ತತ್ವವನ್ನು ಭೂಮಿಕೆಯಾಗಿ ಹೊಂದಿದೆ. ಕತೆಯು ನಮ್ಮ ನೆಲದ ಹೊಂದಿಕೆಯ ಬದುಕಿನ ಮೀಮಾಂಸೆಯನ್ನು ಅನುಸಂಧಾನ ಮಾಡುವ ಕತೆ ಕೌಟುಂಬಿಕ ಆದರ್ಶವನ್ನು ಕಾಪಿಟ್ಟುಕೊಳ್ಳುವ ಕಡೆಗೆ ಮುಖ ಮಾಡುತ್ತದೆ. ವೆಂಕಟಿಗ ಲಗ್ನವಾಗಿ ನೂರಾರು ಆಸೆಗಳನ್ನು ತುಂಬಿಕೊಂಡು ದುಡಿಮೆಯ ನೆಲೆಯಿಂದ ಬದುಕನ್ನು ಆರಂಭಿಸಿದ ಕೆಲವು ದಿನಗಳಲ್ಲಿ ಊರಗೌಡನ ಕಾಮದಾಸೆಗೆ ಬಲಿಯಾಗಿ ಗೌಡನೊಂದಿಗೆ ವೆಂಕಟಿಗನನ್ನು ಬಿಟ್ಟು ಹೋದಾಗ ವೆಂಕಟಿಗ ತನ್ನ ಹೆಂಡತಿಯನ್ನು ಕರೆತರಲು ಅನೇಕ

ಪ್ರಯತ್ನವನ್ನು ಮಾಡುತ್ತಾನೆ. ತನ್ನ ಹೆಂಡತಿಯೇ ಗೌಡನನ್ನು ಬಿಟ್ಟು ಬರುವುದಿಲ್ಲ ಎಂದಾಗ ಅವಳನ್ನು ಬಿಟ್ಟು ಹಿಂತಿರುಗುತ್ತಾನೆ.

ಗೌಡನ ಸಂಘದಿಂದ ಒಂದು ಮಗುವನ್ನು ಹೆತ್ತ ಮೇಲೆ ವೆಂಕಟಿಗನ ಹೆಂಡತಿ ಗೌಡನ ಮನೆಯಲ್ಲಿ ತಿರಸ್ಕಾರಕ್ಕೆ ಒಳಗಾಗುವ ಮೂಲಕ ಗೌಡನ ಮನಸ್ಸಿನಲ್ಲಿ ತನ್ನ ಸ್ಥಾನವನ್ನು ಕಳೆದುಕೊಂಡು ಕಾಲುಕಸವಾಗುತ್ತಾಳೆ. ಈ ಕಾಲಮಾನದಲ್ಲಿ ಗೌಡನಲ್ಲಿಂದ ವೆಂಕಟಿಗ ಮನೆಗೆ ಬಂದು ತನ್ನದು ತಪ್ಪಾಯಿತೆಂದಾಗ ವೆಂಕಟಿಗ ಯಾವ ಪ್ರತಿಭಟನೆಯು ಇಲ್ಲದೆ ತನ್ನ ಹೆಂಡತಿ, ಮಗುವನ್ನು ಒಪ್ಪಿಕೊಂಡು ಅಪ್ಪಿಕೊಳ್ಳುತ್ತಾನೆ. ವೆಂಕಟಿಗನ ಉದಾರವಾದ ಮನಸ್ಸು, ಹೆಂಡತಿಯ ತಪ್ಪನ್ನು ಒಪ್ಪಿಕೊಂಡು ಮತ್ತೆ ಅವಳೊಂದಿಗೆ ಸಂಸಾರವನ್ನು ಕಟ್ಟಿಕೊಳ್ಳುವ ಮನಸನ್ನು ಸ್ಥಳೀಯತೆ ಅಭಿವ್ಯಕ್ತಿ ಎಂದು ಕರೆಯಬಹುದು.

'ಮೊಸರಿನ ಮಂಗಮ್ಮ' ಕತೆಯಲ್ಲೂ ಮಾಸ್ತಿ ಕುಟುಂಬವನ್ನು ಬೆಸೆಯುವ ಸತ್ವವನ್ನು ಕೇಂದ್ರಿಕರೀಸುತ್ತಾರೆ. ಮಂಗಮ್ಮ ತನ್ನ ಮಗ, ಸೊಸೆ ಹಾಗೂ ಮೊಮ್ಮಗನೊಂದಿಗೆ ಮೊಸರು ಮಾರುವ ಮೂಲಕ ಬದುಕು ಸಾಗಿಸುತ್ತಿರುತ್ತಾಳೆ. ಅಧಿಕಾರದ ವಿಷಯದಲ್ಲಿ ಮಂಗಮ್ಮಳಿಗೂ ಸೊಸೆಗೂ ಜಗಳವಾಗಿ ಮಂಗಮ್ಮ, ಮಗ ಸೊಸೆಯಿಂದ ದೂರವಾಗುತ್ತಾಳೆ. ಮಂಗಮ್ಮ ತನ್ನ ಮನೆಯ ಮೂಲೆಯಲ್ಲಿ ಕಲ್ಲುಗೂಡಿಕೊಂಡು ಗಂಜಿಬೇಯಿಸಿಕೊಂಡು ಮೊಸರು ಮಾರಿಕೊಂಡು ಬದುಕು ಆರಂಭಿಸುತ್ತಾಳೆ. ಮಂಗಮ್ಮ ಯಾವಾಗ ಸೊಸೆ ಮಗನಿಂದ ಸಂಘರ್ಷದ ಮೂಲಕ ದೂರವಾಗಿ ಒಂಟಿಯಾದಳೋ ಆ ಸಂದರ್ಭದಲ್ಲಿ ಅನೇಕರು ಹಣವನ್ನು ಪಡೆದುಕೊಂಡು ಮಂಗಮ್ಮನನ್ನು ಮೋಸಗೊಳಿಸಲು ಆರಂಭಿಸಿದರು, ಈ ವಿಚಾರವನ್ನು ಅರಿತುಕೊಂಡ ಮಂಗಮ್ಮನ ಮಗ ಸೊಸೆ ಮಂಗಮ್ಮನೊಂದಿಗೆ ಹೊಂದಿಕೆಯ ನೆಲೆಯಲ್ಲಿ ಒಂದುಗೂಡುತ್ತಾರೆ. ಮಂಗಮ್ಮ ಮನೆಯ ಕೆಲಸ, ಮಕ್ಕಳನ್ನು ಆಡಿಸುವ ಜೊತೆಗೆ ಮನೆಯ ಯಜಮಾನಿಕೆಯನ್ನು ವಹಿಸಿಕೊಳ್ಳುತ್ತಾಳೆ. ಸೊಸೆ ಮೊಸರು ಮಾರುವ ಕೆಲಸಕ್ಕೆ ತೊಡಗುತ್ತಾಳೆ. ಕತೆಯು ಅತ್ತೆ ಸೊಸೆಯ ಹೊಂದಾಣಿಕೆಯ ನೆಲೆಯಿಂದ ಒಂದುಗೂಡುವ ಜೀವನ ಸತ್ವವನ್ನು ಅನುಸಂಧಾನ ಮಾಡುತ್ತದೆ.

ಆಸ್ತಿ ವಿಚಾರದಲ್ಲಿ ಉಂಟಾಗಬಹುದಾದ ಸಂಘರ್ಷಗಳಿಂದ ಕುಟುಂಬಗಳು ಒಡೆದು ಹೋಗಬಹುದಾದ ಸಂದರ್ಭದಲ್ಲಿ ಕುಟುಂಬಗಳನ್ನು ಹಾಗೂ ಕುಟುಂಬಗಳ ಸಂಬಂಧವನ್ನು ಕಟ್ಟುವ ತಾತ್ವಿಕತೆಯನ್ನು ದೇವುಡು ಅವರ 'ಘಾಟಿ ಮುದುಕ' ಕತೆಯು ಅಭಿವ್ಯಕ್ತಿಸುತ್ತದೆ.

ರಾಮೇ ಕೃಷ್ಣೆಗೌಡ ತನ್ನ ಇಳಿವಯಸಿನಲ್ಲಿ ಎಳೆಯ ಹುಡುಗಿಯನ್ನು ಲಗ್ನವಾಗಿ ಸಂಸಾರವನ್ನು ಆರಂಭಿಸುತ್ತಾನೆ. ರಾಮೇ ಕೃಷ್ಣೆ ಗೌಡ ಮಗ ವೆಂಕಟೇಗೌಡ ಹಾಗೂ

ಅವನ ಹೆಂಡತಿ, ಸಂಬಂಧಿಕರು ರಾಮೇ ಕೃಷ್ಣೇ ಗೌಡನ ನಡೆಯನ್ನು ಟೀಕಿಸಿ, ತಲೆಗೊಂದು ಮಾತನಾಡುತ್ತಾರೆ. ಮುದುಕ ಹಾಗೂ ಹುಡುಗಿಯ ಸಂಸಾರ ಅತ್ಯಂತ ಆದರ್ಶವಾಗಿ ಊರಿಗೆ ಪರಿಚಯವಾಗುತ್ತದೆ. ಎರಡು ವರ್ಷಗಳ ಬಳಿಕ ಈ ದಂಪತಿಗಳಿಗೆ ಗಂಡು ಮಗು ಜನಿಸುತ್ತದೆ. ಗಂಡು ಮಗುವಿಗೆ ನಾಲ್ಕು ವರ್ಷವಾಗುತ್ತಿದ್ದಂತೆ ರಾಮಕೃಷ್ಣೇ ಗೌಡ ಅನಾರೋಗ್ಯದಿಂದ ಸಾವಿನ ಹತ್ತಿರಕ್ಕೆ ಹೋಗುತ್ತಾನೆ. ಈ ಕಾಲದಲ್ಲಿ ಮುದುಕನು ಮಗ ಮತ್ತು ಹೆಂಡತಿಯ ಭವಿಷ್ಯತ್ತಿಗಾಗಿ ವಿಲ್‌ನಲ್ಲಿ ತನ್ನ ತೋಟ, ಮನೆ, ಚಿನ್ನ, ಬೆಳ್ಳಿ ಎಲ್ಲವನ್ನು ತನ್ನ ಮಗ ವೆಂಕಟೇಗೌಡನಿಗೆ ಬರೆಯುತ್ತಾನೆ. ತನ್ನ ಕಿರಿಯ ಹೆಂಡತಿ, ಮಗನಿಗೆ ಒಂದು ಉಗ್ರಾಣವನ್ನು ಮತ್ತು ಎರಡು ಎಕರೆ ಜಮೀನನ್ನು ಬರೆಯುತ್ತಾನೆ. ನಂತರ ದಿನ ಮಾನದಲ್ಲಿ ತನ್ನ ಕಿರಿಯ ಹೆಂಡತಿಗೆ ಒಂದು ಚಿತ್ರವಿರುವ ಕಾಗದವನ್ನು ನೀಡಿ, ಕಷ್ಟ ಕಾಲದಲ್ಲಿ ಈ ಕಾಗದವನ್ನು ಬುದ್ಧಿವಂತರಿಗೆ ನೀಡುವ ಮೂಲಕ ಸುಖವಾಗಿ ಬದುಕಬಹುದೆಂದು ಹೇಳಿ ಮುದುಕ ಸಾಯುತ್ತಾನೆ. ಮುಂದೊಂದು ದಿನ ಪತ್ರವನ್ನು ಓದಿದ ನ್ಯಾಯಾಧೀಶ ಮುದುಕನ ಕಿರಿಯ ಹೆಂಡತಿಗೆ ಐದು ಸಾವಿರ ಚಿನ್ನ ಹಾಗೂ ಐದು ಸಾವಿರ ಬೆಳ್ಳಿಯ ನಾಣ್ಯವನ್ನು ಉಗ್ರಾಣದ ನೆಲದಲ್ಲಿ ಹೂತಿಟ್ಟಿದ್ದ ಸಂಪತ್ತನ್ನು ತೆಗೆದುಕೊಡುತ್ತಾರೆ.

ದೇವುಡು ಕತೆಯಲ್ಲಿ ಆಸ್ತಿಯನ್ನು ಹಂಚುವಲ್ಲಿ ಮುದುಕನ ತಂತ್ರ ಹಾಗು ಬುದ್ಧಿವಂತಿಕೆಯನ್ನು ಪರಂಪರೆಯ ಭಾಗವಾಗಿ ಮಂಡಿಸುತ್ತಾರೆ. ಆಸ್ತಿಯ ವಿಚಾರದಲ್ಲಿ ತಾನು ಸತ್ತ ಮೇಲೆ ಹಿರಿಯ ಹೆಂಡತಿಯ ಮಕ್ಕಳು ಹಾಗೂ ಕಿರಿಯ ಹೆಂಡತಿಯ ಮಕ್ಕಳ ನಡುವೆ ಸಂಘರ್ಷ ಉಂಟಾಗಿ, ಸಾವು–ನೋವುಗಳಾಗಬಹುದೆಂದು ಯೋಚಿಸಿ, ಕಣ್ಣಾ ಮುಂದಿದ್ದ ಎಲ್ಲಾ ಆಸ್ತಿಯನ್ನು ತನ್ನ ಹಿರಿಯ ಮಗ ವೆಂಕಟೇಗೌಡನಿಗೆ ನೀಡಿ, ಕಿರಿಯ ಹೆಂಡತಿ ಮತ್ತು ಮಗನನ್ನು ಹಿರಿಯ ಮಗನ ಕಣ್ಣಿನಿಂದ ದೂರವಿರಿಸುತ್ತಾನೆ. ಹಾಗೂ ತಾನು ಸಂಪಾದಿಸಿದ ಹಣವನ್ನು ಉಗ್ರಾಣದಲ್ಲಿ ಹೂತಿಡುವ ಮೂಲಕ ಕಿರಿಯ ಹೆಂಡತಿ ಹಾಗೂ ಮಗನಿಗೆ ಸೇರುವಂತೆ ಮಾಡುತ್ತಾನೆ. ಹೀಗೆ ಜಾಣತನದಿಂದ ಆಸ್ತಿಯನ್ನು ಮಕ್ಕಳಿಗೆ ಹಂಚಿ ಸಂಸಾರವನ್ನು ಸಂಬಂಧವನ್ನು ಉಳಿಸುವ ಅಭಿವ್ಯಕ್ತಿಯ ನೆಲೆಯನ್ನು ಸ್ಥಳೀಯತೆ ಎಂದು ಕರೆಯಬಹುದು.

ರಾಮಕೃಷ್ಣೇ ಗೌಡನಂತಹ ಮುದುಕನನ್ನು ಲಗ್ನವಾಗುವ ಅನಾಥ ಹುಡುಗಿ, ಆಸ್ತಿ, ಹಣಕ್ಕೆ ಆಸೆ ಪಡದೆ ಸಹಜವಾಗಿ ಮುದುಕನನ್ನು ತನ್ನ ಗಂಡನೆಂದು ಒಪ್ಪಿಕೊಂಡು ಸಂಸಾರ ನಡೆಸುವ ಮೂಲಕ ಆದರ್ಶ ದಾಂಪತ್ಯಕ್ಕೆ ಹೆಜ್ಜೆ ಹಾಕುತ್ತಾಳೆ. ರಾಮೇಕೃಷ್ಣೇಗೌಡ

ಸಾವಿನ ಅಂಚಿನಲ್ಲಿ ಇರುವಾಗ ಹೆಂಡತಿಯನ್ನು ಕರೆದು 'ನಿನಗೆ ಇನ್ನೂ ವಯಸ್ಸಿದೆ, ಒಳ್ಳೆಯ ನಿನಗೆ ಬೇಕಾದ ಹುಡುಗನನ್ನು ನೋಡಿಕೊಂಡು ಅವನೊಂದಿಗೆ ಕೂಡಿಕೊಂಡು ಸುಖವಾಗಿರು' ಎಂದಾಗ ಎಳೆಯ ಹೆಂಡತಿ ನನಗೆ ಸಾಯುವವರೆಗೂ ನೀವೇ ಗಂಡ ಎಂದು ಹೇಳುತ್ತಾಳೆ. ಈ ದಾಂಪತ್ಯದ ನಿಲುವುಗಳನ್ನು ಸ್ಥಳೀಯತೆ ಎಂದು ಕರೆಯಬಹುದು.

ಭಾರತದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಉಂಟಾದ ಹಿಂದು ಹಾಗೂ ಮುಸ್ಲಿಂ ನಡುವಿನ ಸಂಘರ್ಷಗಳನ್ನು ಕೇಂದ್ರೀಕರಿಸುವ ಜೊತೆಗೆ ಸ್ತ್ರೀಯೊಬ್ಬಳ ಮೇಲೆ ನಡೆಯುವ ದೈಹಿಕ ಹಿಂಸೆಯನ್ನು ನಿರೂಪಿಸುವ ಜೊತೆಗೆ ಒಡೆದು ಹೋದ ಸಂಸಾರವನ್ನು ಒಂದುಗೂಡಿಸುವ ಸ್ಥಳೀಯತೆಯ ನಿಲುವುಗಳನ್ನು ಹೆಚ್.ವಿ. ಸಾವಿತ್ರಮ್ಮ ಅವರ 'ನಿರಾಶ್ರಿತೆ' ಕತೆಯಲ್ಲಿ ಗುರುತಿಸಬಹುದು. ಚಂದ್ರನಿಗೆ ರಾವಲ್ಪಿಂಡಿಯಲ್ಲಿ ವೈದ್ಯನಾಗಿ ಕೆಲಸ ಪಡೆದ ಮೇಲೆ ಹೆಂಡತಿಯನ್ನು ಕರೆದುಕೊಂಡು ಹೋಗಿ ಬದುಕನ್ನು ಆರಂಭಿಸುತ್ತಾನೆ. ಆದರೆ ಅಲ್ಲಿ ನಡೆದ ಹಿಂದು ಮುಸ್ಲಿಂ ಸಂಘರ್ಷದಲ್ಲಿ ತುಳಸಿ ಅತ್ಯಾಚಾರಕ್ಕೊಳಗಾಗಿ ಮುಸ್ಲಿಂ ದಂಗೆಕೋರರ ಸೆರೆಯಾಗುತ್ತಾಳೆ. ಚಂದ್ರ ಅಪಾಯದಿಂದ ಪಾರಾಗಿ ಭಾರತಕ್ಕೆ ಬರುತ್ತಾನೆ. ಒಂದು ವರ್ಷಗಳ ಕಾಲ ತುಳಸಿಗಾಗಿ ಕಾಯುತ್ತಾನೆ. ಈ ನಡುವೆ ಗಾಂಧೀಜಿಯ ಚಿಂತನೆಯ ಪ್ರಭಾವಕ್ಕೆ ಒಳಗಾಗಿ ನೊಂದ ಜೀವಗಳ ಚಿಕಿತ್ಸೆಯಲ್ಲಿ ಕಾಲ ಕಳೆಯುತ್ತಾನೆ. ಕೊನೆಗೊಂದು ದಿನ ತುಳಸಿ ಚಂದ್ರನನ್ನು ಸಂಧಿಸುತ್ತಾಳೆ. ಹಾಗೂ ತನಗಾದ ಹಿಂಸೆ, ಅತ್ಯಾಚಾರವನ್ನು ವಿವರಿಸಿ ತನ್ನೊಂದಿಗೆ ಮಗ ಇರುವುದಾಗಿ ಹೇಳಿ ನೀವು ಒಪ್ಪುವುದಾದರೆ ನಿಮ್ಮಲ್ಲಿಗೆ ಬರುವೆ ಎನ್ನುತ್ತಾಳೆ. ಚಂದ್ರ ಯೋಚಿಸಿ ತನ್ನ ತಂದೆಯಲ್ಲಿ ಕೇಳಿ ಒರುತ್ತೇನೆಂದು ಹೇಳಿ ಹಿಂದಿರುಗುತ್ತಾನೆ. ತುಳಸಿಯನ್ನು ಕಾಣಲು ಮರುದಿನ ಬಂದ ಚಂದ್ರುವಿನ ತಂದೆ ಶ್ರೀನಿವಾಸರಾಯರು ತುಳಸಿಯ ಬೆನ್ನು ನೇವರಿಸಿ, 'ಬಾಮ್ಮಾ ಮನೆಗೆ ಹೋಗೋಣ' ಎಂದು ಕರೆತರುತ್ತಾರೆ.

ಕತೆಗಾರ್ತಿ ಸ್ವಾತಂತ್ರ್ಯ ಭಾರತದ ಸಂದರ್ಭ ಪರಿಸರವನ್ನು ನಿರೂಪಿಸುವ ಜೊತೆಗೆ ಹೆಣ್ಣು ಹೇಗೆ ಬಲಿಪಶುವಾದಳು ಎನ್ನುವುದನ್ನು ಸಮಾಜದ ಮುಂದಿಡುವ ಮೂಲಕ ಸ್ತ್ರೀ ಸಂವೇದನೆಯನ್ನು ತಾತ್ವೀಕರಿಸುವ ಜೊತೆಗೆ ಸಮಾಜವೊಂದರ ಕೃತ್ಯಕ್ಕೆ ಬಲಿಯಾದ ಹೆಣ್ಣನ್ನು ಸಮಾಜದಿಂದ ಹೊರಕ್ಕೆ ಹಾಕದೆ, ಅವಳನ್ನು ಕುಟುಂಬದೊಳಗೆ ಸೇರಿಸಿಕೊಂಡು ಅವಳನ್ನು ಒಪ್ಪಿಕೊಳ್ಳುವ ನಿಲುವನ್ನು ಸ್ಥಳೀಯತೆ ಎಂದು ಕರೆಯಬಹುದು.

ಸುಧಾರಣಾವಾದ ಹಾಗೂ ವಸಾಹತುಶಾಹಿಯ ವೈಚಾರಿಕ ಪ್ರಜ್ಞೆಯ ಭಾಗವಾಗಿ ಹೆಣ್ಣಿನ ಜೀವನದ ಸ್ಥಿತಿಗತಿಯಲ್ಲಿ ಅನೇಕ ಪಲ್ಲಟವಾದವು. ಈ ಪಲ್ಲಟಗಳನ್ನು ಒಪ್ಪಿಕೊಳ್ಳುವ

ಹಾಗೂ ತಿರಸ್ಕರಿಸುವ ಆಲೋಚನೆಯನ್ನು ಮಂಡಿಸುವ ಹೆಚ್.ವಿ. ಸಾವಿತ್ರಮ್ಮ ಅವರ 'ಬಹಿಷ್ಕೃತೆ' ಕತೆಯು ವಿಧವೆಯೊಬ್ಬಳಿಗೆ ಪುರುಷನೊಬ್ಬನ ಕೃತ್ಯದಿಂದ ಹುಟ್ಟಿದ ಹೆಣ್ಣು ಮಗುವನ್ನು ಭಾರತೀಯ ಹಿಂದು ಸಮಾಜ ಗ್ರಹಿಸುವ ಬಗೆಯನ್ನು ಹಾಗೂ ವಸಾಹತುಶಾಹಿ ಕ್ರಿಸ್ತ ಸಮುದಾಯವು ಗ್ರಹಿಸಿದ ಬಗೆಯನ್ನು ಅನುಸಂಧಾನ ಮಾಡುವ ಕತೆ, ಹೆಣ್ಣನ್ನು ಸಮಾಜ ಹೇಗೆ ಬಹಿಷ್ಕಾರ ಮಾಡುತ್ತದೆ ಎಂಬುದನ್ನು ಸೂಕ್ಷ್ಮವಾಗಿ ಚರ್ಚಿಸುತ್ತದೆ.

ಅನಾಥವಾಗುವ ವಿಧವೆಯ ಮಗುವನ್ನು ಪುಟ್ಟಣ್ಣ ಥಾಮಸ್ ಸಹಾಯದಿಂದ ಪಡೆದು ಸಾಕಲು ನಿರ್ಧರಿಸುತ್ತಾನೆ. ಪುಟ್ಟಣ್ಣನಿಗೆ ಬ್ರಾಹ್ಮಣ ವಿಧವೆಯ ಹೆಣ್ಣು ಮಗುವನ್ನು ಸಾಕುವುದಕ್ಕೆ ಅವನ ಕುಟುಂಬ, ಸುತ್ತಲಿನ ಸಮಾಜ ವಿರೋಧಿಸಿದರೂ, ವಿರೋಧವನ್ನು ಮೀರಿ ಹೆಣ್ಣು ಮಗುವನ್ನು ಬೆಳೆಸುತ್ತಾನೆ. ಪುಟ್ಟಣ್ಣನ ಹೆಂಡತಿ, ಮಗ ಜಯಾಳನ್ನು ಒಪ್ಪಿಕೊಳ್ಳುತ್ತಾರೆ. ಮುಂದೆ ಜಯಾಳ ವಿವಾಹ ಸಂದರ್ಭಕ್ಕೆ ಯಾವ ಗಂಡು ಹಾಗೂ ಬ್ರಾಹ್ಮಣ ಸಮಾಜ ಒಪ್ಪುವುದಿಲ್ಲ. ಈ ನಡುವೆ ಕ್ರಿಸ್ತ ಥಾಮಸರು ತನ್ನ ಮಗನಿಗೆ ಜಯಾಳನ್ನು ಗೊತ್ತುಪಡಿಸಿ, ಲಗ್ನ ಮಾಡಿಸುತ್ತಾರೆ. ಕತೆಗಾರ್ತಿ ಜಾತಿ-ಧರ್ಮವನ್ನು ಯೋಚಿಸುವುದಕ್ಕಿಂತ ಹೆಣ್ಣನ್ನು ಜಾತಿ ಧರ್ಮವನ್ನು ಮೀರಿ ಒಪ್ಪಿಕೊಳ್ಳುವ ಮತ್ತು ಕುಟುಂಬದೊಳಗೆ ಸೇರಿಸಿಕೊಳ್ಳುವ ನಿಲುವುಗಳನ್ನು ಸ್ಥಳೀಯತೆ ಎಂದು ಕರೆಯಬಹುದು.

ಜಯಲಕ್ಷ್ಮೀ ದೇವಿ ಸಿ.ಎಸ್. ಅವರ 'ನುಂಗಲಾರದ ತುತ್ತು' ಕತೆಯು ಗಂಡ ಹಾಗೂ ಮಕ್ಕಳ ಹಿಂಸೆಗೆ ಒಳಗಾಗಿ ಕುಟುಂಬದಿಂದ ಹೊರಬಿದ್ದ ಹೆಣ್ಣನ್ನು ಇನ್ನೊಂದು ಹೆಣ್ಣು ಅವಳ ನೋವುಗಳನ್ನು ಅರ್ಥ ಮಾಡಿಕೊಂಡು ತನ್ನ ಮನೆಯೊಳಕ್ಕೆ ದುಡಿಯುವ ನೆಲೆಯಿಂದ ಸೇರಿಸಿಕೊಂಡು ಆಸರೆಯಾಗುವ ತಾತ್ವಿಕತೆಯನ್ನು ಮಂಡಿಸುತ್ತದೆ. ಬಸಪ್ಪ ಒಬ್ಬ ಸಭ್ಯ ರೈತನಾಗಿದ್ದು ತನ್ನ ದುಡಿಮೆಯ ಮೂಲಕ ಸಾಮಾಜಿಕ ಗೌರವವನ್ನು ಪಡೆದಿದ್ದನು. ಪುಟ್ಟರಸಿ ಎಂಬ ಹುಡುಗಿಯನ್ನು ಲಗ್ನವಾಗಿ ದುಡಿಮೆಯ ಮೂಲಕ ಬದುಕು ಕಟ್ಟಿಕೊಂಡರು. ಆದರೆ ವರ್ಷಗಳು ಉರುಳಿದರು ಮಗುವನ್ನು ಪಡೆಯಲು ಸಾಧ್ಯವಾಗಲಿಲ್ಲ. ಈ ಕೊರಗಿನಲ್ಲಿಯೇ ಪುಟ್ಟರಸಿ ರೋಗವಿಡಿದು ಹಾಸಿಗೆ ಪಾಲಾದಳು. ಈ ಕಾಲಮಾನದಲ್ಲಿ ಪುಟ್ಟರಸಿ ತನ್ನ ತಂಗಿಯಾದ ಚೆನ್ನಿಯನ್ನು ತನ್ನ ಗಂಡನಿಗೆ ಲಗ್ನವಾಗಬೇಕು ಎಂದು ಹೇಳಿ ಒಪ್ಪಿಸಿ ತಾನೇ ಮುಂದೆ ನಿಂತು ಲಗ್ನ ಮಾಡಿಸುತ್ತಾಳೆ. ಚೆನ್ನಿಗೆ ಮಗುವಾದ ಮೇಲೆ ಮಕ್ಕಳನ್ನು ನೋಡಿಕೊಳ್ಳುವ ಕೆಲಸವನ್ನು ಪುಟ್ಟರಸಿ ಮಾಡುತ್ತಾಳೆ. ಚೆನ್ನಿ ಮಗು ಹೆರುವ ಸಾಧನವಾದಳೇ ಹೊರತು ಮಕ್ಕಳ ನಿಜವಾದ ತಾಯಿಯಾಗಲಿಲ್ಲ. ಪುಟ್ಟರಸಿಯೇ ಮಕ್ಕಳಿಗೆ ಆಸರೆಯಾಗಿ, ಮಕ್ಕಳನ್ನು ಬೆಳೆಸಿದಳು. ಬೆಳೆದ ಮಕ್ಕಳು

ಪುಟ್ಟರಸಿಯನ್ನು ತಾಯಿಯಾಗಿ ಗ್ರಹಿಸಿದವು. ಆದರೆ ಹೆತ್ತ ಚೆನ್ನಿಯನ್ನು ನಿಕೃಷ್ಟವಾಗಿ ಕಂಡರಲ್ಲದೆ, ಹೊಡೆದು ಬಡಿದು ಗಾಸಿ ಮಾಡಿದರೂ ಈ ನೋವು ಅಪಮಾನದಿಂದ ಕುಟುಂಬವನ್ನು ಬಿಟ್ಟು ಬಂದ ಚೆನ್ನಿಯನ್ನು ಅವಳ ನೋವುಗಳನ್ನು ಮತ್ತು ಕೇಳಿದ ಹೊಸಹಳ್ಳಿ ಜಮೀನುದಾರನ ಹೆಂಡತಿ ಚೆನ್ನಿಯನ್ನು ದುಡಿಮೆಯ ನೆಲೆಯಿಂದ ತನ್ನ ಮನೆಯಲ್ಲಿ ಆಶ್ರಯವನ್ನು ಕೊಡುತ್ತಾಳೆ. ಕತೆಗಾರ್ತಿಯು ಹೆಣ್ಣಿನ ಸಂವೇದನೆಯನ್ನು ಹೇಳುವ ಜೊತೆಗೆ ನೋವುಗಳಿಂದ ಮತ್ತು ಅಪಮಾನಗಳಿಂದ ಕುಟುಂಬದಿಂದ ನಿರಾಕರಿಸಲ್ಪಟ್ಟ ಹೆಣ್ಣನ್ನು ಇನ್ನೊಂದು ಹೆಣ್ಣು ಆಸರೆನೀಡುವ ಮತ್ತು ತನ್ನೊಳಗೆ ಸೇರಿಸಿಕೊಳ್ಳುವ ನಡೆಯನ್ನು ಸ್ಥಳೀಯತೆ ಎಂದು ಗುರುತಿಸಬಹುದು.

ಮೈಸೂರು ಭಾಗದ ಮೊದಲ ತಲೆಮಾರಿನ ಕತೆಗಾರರು ಮಾನವ ಸಂಬಂಧವನ್ನು ಪರಂಪರೆಯ ಚೌಕಟ್ಟಿನಲ್ಲಿ ಉಳಿಸಿ, ಕಾಪಿಟ್ಟುಕೊಳ್ಳುವ ಕೆಲಸವನ್ನು ಮಾಡುತ್ತಾರೆ. ವಸಾಹತುಶಾಹಿ ಸಂದರ್ಭದಲ್ಲಿ ಉಂಟಾದ ಅನೇಕ ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ವಿದ್ಯಮಾನಗಳು ಕುಟುಂಬದ ಸಂಬಂಧದ ಶಿಥಿಲತೆಗೆ ಕಾರಣವಾದವು. ಹಾಗು ಅನೈತಿಕ ಸಂಬಂಧ ಹಾಗೂ ಹಣಕೇಂದ್ರಿತ ಕೌಟುಂಬಿಕ ಸ್ವರೂಪ ಹುಟ್ಟಿಕೊಳ್ಳಲು ಆರಂಭವಾದಾಗ ಈ ಕಾಲಮಾನದಲ್ಲಿ ಕತೆಗಾರರು ಕುಟುಂಬ ವ್ಯವಸ್ಥೆಯ ಶಿಥಿಲತೆಗೆ ಕಾರಣವನ್ನು ಗುರುತಿಸುವ ಜೊತೆಗೆ ವಿಘಟಿತಗೊಂಡ ಹೆಣ್ಣು ಗಂಡುಗಳ ಸಂಬಂಧವನ್ನು ಒಟ್ಟಿಗೆ ಬೆಸೆಯುವ ತಾತ್ವಿಕತೆಯನ್ನು ಕತೆಯೊಳಗೆ ರೂಪಿಸುತ್ತಾರೆ. ಇದನ್ನೆ ಸಂಬಂಧವನ್ನು ಬೆಸೆಯುವ ಸ್ಥಳೀಯತೆ ಎಂದು ಕರೆಯಬಹುದು. ಇಲ್ಲಿ ಕತೆಗಾರರು ನಮ್ಮ ನೆಲದ ಸತ್ವವಾದ ಹೊಂದಿಕೆ, ಸಹನೆ, ಪ್ರೀತಿ ಒಪ್ಪಿಕೊಳ್ಳುವಂತಹ ಜೀವಪರವಾದ ಅಭಿವ್ಯಕ್ತಿಗಳೇ ಪ್ರಧಾನವಾದ ಗೋಚರವಾಗುತ್ತದೆ.

### ೫.೨.೩ ಸ್ತ್ರೀ ಗುಣಾತ್ಮಕ ಸ್ಥಳೀಯತೆ

ಭಾರತಕ್ಕೆ ವಸಾಹತುಶಾಹಿಯ ಆಗಮನವು ಸ್ತ್ರೀಯರ ಬದುಕಿನಲ್ಲಿ ಅನೇಕ ಪಲ್ಲಟವನ್ನು ಉಂಟು ಮಾಡಿತು. ಪಾಶ್ಚಾತ್ಯ ಶಿಕ್ಷಣ, ನಗರಗಳ ಬೆಳವಣಿಗೆ ಕೈಗಾರಿಕೆಗಳು ನೀಡಿದ ಉದ್ಯೋಗ, ಭಾರತದಲ್ಲಿ ರೂಪುಗೊಂಡ ಸುಧಾರಣ ಚಳುವಳಿ, ಮುದ್ರಣಗಳ ಬೆಳವಣಿಗೆ ಸ್ತ್ರೀಯರು ತಮ್ಮ ಬದುಕಿನ ಮೀಮಾಂಸೆಯನ್ನು ವಿಮರ್ಶೆ ಮಾಡುವಂತೆ ಸ್ಥಿತಿಯನ್ನು ರೂಪಿಸಿತು. ಅನೇಕ ಸ್ತ್ರೀಯರು ಪುರುಷ ಗ್ರಹಿಕೆಯ ಲೋಕವನ್ನು ಚರ್ಚಿಸುವ ಹಾಗೂ ಪ್ರಶ್ನಿಸುವ ಕೆಲಸವನ್ನು ಮಾಡಿದರು. ಮೈಸೂರು ಭಾಗದಲ್ಲಿನ ಮೊದಲ ತಲೆಮಾರಿನ

ಕತೆಗಾರ್ತಿ ಹಾಗೂ ಕತೆಗಾರರು ಸ್ತ್ರೀಯರ ಬದುಕಿನ ಸಮಸ್ಯೆಗಳನ್ನು ಅನುಸಂಧಾನ ಮಾಡುವ ಮೂಲಕ ಅವಳ ವ್ಯಕ್ತಿತ್ವವನ್ನು, ಪಾತ್ರವನ್ನು, ಅಭಿವ್ಯಕ್ತಿಯನ್ನು ಗುಣಾತ್ಮಕವಾಗಿ ನಿರೂಪಿಸಿದರು.

ಜಯಲಕ್ಷ್ಮಿ ಆರ್. ಶ್ರೀನಿವಾಸನ್ ಅವರ 'ಸಮಸ್ಯೆಯ ಮಗು' ಕತೆಯು ಪುರುಷ ಲೋಕ ಗ್ರಹಿಕೆಯನ್ನು ಸೂಕ್ಷ್ಮವಾಗಿ ಪ್ರಶ್ನಿಸುವ ಮೂಲಕ ಸ್ತ್ರೀ ಸಂವೇದನೆಯ ಭೂಮಿಕೆಯನ್ನು ಹುಟ್ಟು ಹಾಕುತ್ತದೆ. ಪ್ರಕಾಶ ತನ್ನ ಹೆಂಡತಿಯನ್ನು ಕಳೆದುಕೊಂಡ ಮೇಲೆ ವಿಧವೆ ಮಗಳನ್ನು ಹಾಗೂ ಚಿಕ್ಕ ಪ್ರಾಯದ ಮಗನನ್ನು ಅತಿಕ್ರೂರವಾಗಿ ಕಾಣುತ್ತಾನೆ. ಮಕ್ಕಳ ಮಾತು ಹಾಗೂ ಆಸೆ-ಆಕಾಂಕ್ಷೆಗಳು ಪ್ರಕಾಶನಿಗೆ ಮಹತ್ವವಾಗಿ ಕಾಣಿಸುವುದೆ ಇಲ್ಲ. ತನ್ನ ಬದುಕಿನ ಬಗ್ಗೆ ಯೋಚಿಸುವ ನಿಲುವಿನಿಂದ ಮರು ಮದುವೆಯಾಗಲು ನಿರ್ಧರಿಸುತ್ತಾನೆ. ಮರು ಮದುವೆಯ ಸಮಾರಂಭದಲ್ಲಿ ಪ್ರಕಾಶನ ಮಗ ತನ್ನ ಚಿಕ್ಕಮ್ಮನಲ್ಲಿ ಸಮಾರಂಭವನ್ನು ನೋಡಿ, ಅಕ್ಕನಿಗೆ ಲಗ್ನವೇ ಎಂದು ಪ್ರಶ್ನಿಸುತ್ತಾನೆ.

ಅಕ್ಕನ ಗಂಡ ದೇವರಲ್ಲಿ ಹೋಗಿದ್ದಾನೆ. ಇನ್ನೂ ಎಲ್ಲಿಯ ಮದುವೆ ನಿಮ್ಮಕ್ಕನಿಗೆ, ಈಗ ಮದುವೆ ನಿಮ್ಮ ಅಪ್ಪನಿಗೆ ಎಂದಾಗ ಹುಡುಗ 'ಅಮ್ಮನು ದೇವರಲ್ಲಿಗೆ ಹೋಗಿದ್ದಾಳೆ. ಅಪ್ಪನಿಗೆಲ್ಲಿಯ ಮದುವೆ ಎಂದೂ ಪ್ರಶ್ನಿಸುತ್ತಾನೆ. ಈ ಪ್ರಶ್ನೆಯ ಸತ್ವವೇ ಸ್ತ್ರೀ ಮತ್ತು ಪುರುಷರು ಸಮಾನರು ಎಂಬ ಭಾವನೆಯನ್ನು ತಾತ್ವಿಕರಿಸುತ್ತದೆ. ಹೆಣ್ಣಿಗೂ ಗಂಡನು ಸಾವನ್ನು ಅಪ್ಪಿದ ಮೇಲೆ ಮರು ಮದುವೆ ಆಗಬಹುದೆಂಬ ನಿಲುವನ್ನು ಕತೆ ಕೇಂದ್ರೀಕರಿಸುತ್ತದೆ. ಈ ಸ್ತ್ರೀ ಗುಣಾತ್ಮಕ ಚಿಂತನೆಯೇ ಸ್ಥಳೀಯತೆಯಾಗಿದೆ.

ಅಶ್ವತ್ಥರ 'ಕಲ್ಯಾಣಿ' ಎಂಬ ಕತೆಯು ಸ್ತ್ರೀ ಗುಣಾತ್ಮಕ ನಿಲುವುಗಳನ್ನು ಮಂಡಿಸುವ ಜೊತೆಗೆ ಮಾನವೀಯ ನಿಲುವುಗಳನ್ನು ಅನುಸಂಧಾನ ಮಾಡುತ್ತದೆ. ಕಲ್ಯಾಣಿಯು ವೇಶ್ಯೆಯಾಗಿದ್ದುಕೊಂಡು ತನ್ನ ಸಂಬಂಧಕ್ಕೆ ಬರುವಂತಹ ಜನರಿಂದ ಹಣವನ್ನು ಪಡೆದು ಬದುಕನ್ನು ಕಟ್ಟಿಕೊಳ್ಳುತ್ತಾಳೆ. ಆದರೆ ಅವಳಿಗೆ ತಗುಲಿದ್ದ ಅಂಟು ರೋಗವು ಅವಳ ಬದುಕನ್ನೆ ಕುಗ್ಗಿಸುತ್ತದೆ. ಈ ರೋಗದಿಂದ ಹೊರಬರಲು ಹಣದ ಅವಶ್ಯಕತೆ ಉಂಟಾದಾಗ ಒಳ್ಳೆಯ ಗಿರಾಕಿಗಾಗಿ ಕಾಯುತ್ತಾಳೆ. ಈ ಸಂದರ್ಭದಲ್ಲಿ ಯುವಕನೊಬ್ಬ ಕಲ್ಯಾಣಿಯ ಸಂಪರ್ಕಕ್ಕೆ ಬಂದಾಗ ಯುವಕನಿಂದ ಹಣ ಸಿಗುವುದೆಂದು ಹಾಗೂ ತನ್ನ ರೋಗ ಗುಣವಾಗುವುದನ್ನು ಯೋಚಿಸುತ್ತಾಳೆ. ಆದರೆ ತನ್ನಲ್ಲಿ ಇರುವ ಅಂಟು ರೋಗದಿಂದ ಯುವಕನ ಬಾಳು ಹಾಳಾಗುವುದೆಂದು ಯೋಚಿಸಿ, ತನ್ನ ಸಂಬಂಧವನ್ನು ಬಯಸುವ ಯುವಕನನ್ನು ನಿರಾಕರಿಸುತ್ತಾಳೆ. ಕತೆಗಾರ್ತಿ ಕಲ್ಯಾಣಿಯ ಮೂಲಕ ಸ್ತ್ರೀಯೊಬ್ಬಳ ಗುಣಾತ್ಮಕ

ನಿಲುವುಗಳನ್ನು ನಿರೂಪಿಸುತ್ತಾರೆ. ಇಲ್ಲಿ ಕಲ್ಯಾಣಿಗೆ ತನ್ನ ರೋಗವನ್ನು ಗುಣಪಡಿಸುವ ಮೂಲಕ ತನ್ನ ಸ್ವಾರ್ಥ ಪರವಾದ ಆಸಕ್ತಿಯನ್ನು ಕೈಬಿಟ್ಟು ಯುವಕನ ಬದುಕನ್ನು ಚಿಂತಿಸುವ ಜೊತೆಗೆ ಜೀವ ಪರವಾದ ನಿಲುವುಗಳನ್ನು ತಾತ್ವೀಕರಿಸುತ್ತಾರೆ. ಇದೇ ಸ್ತ್ರೀಯೊಬ್ಬಳ ಗುಣಾತ್ಮಕ ಸ್ಥಳೀಯತೆಯಾಗಿದೆ.

ಎಚ್.ವಿ.ಸಾವಿತ್ರಮ್ಮ ಅವರ 'ಲಕ್ಷ್ಮಿ' ಕತೆಯು ಹೆಣ್ಣಿನ ಸಂವೇದನೆಯನ್ನು ಅನುಸಂಧಾನ ಮಾಡುವುದರ ಜೊತೆಗೆ ಪುರುಷ ಗ್ರಹಿಕೆಯನ್ನು ವಿಮರ್ಶೆಗೆ ಒಳಪಡಿಸುತ್ತಾನೆ. ಹೆಣ್ಣೊಬ್ಬಳು ತನ್ನ ಬದುಕನ್ನು ಕಟ್ಟಿಕೊಳ್ಳುವ ನಡೆಯಲ್ಲಿ ಸಮಾಜದಿಂದ ಎದುರಾಗುವ ತೊಂದರೆಗಳನ್ನು ಕತೆ ಸೂಕ್ಷ್ಮವಾಗಿ ಗ್ರಹಿಸುವ ಜೊತೆಗೆ ಬಡತನದಲ್ಲಿ ಇರುವ ಹಾಗೂ ಶ್ರಮಜೀವಿಗಳನ್ನು ಶ್ರೀಮಂತ ವರ್ಗ ಹೇಗೆ ಮಾನಸಿಕವಾಗಿ, ದೈಹಿಕವಾಗಿ ಹಿಂಸೆಗೆ ಒಳಪಡಿಸುತ್ತದೆ ಎಂಬುವುದನ್ನು ಪರಿಚಯಿಸುವ ಕತೆ, ಸ್ತ್ರೀ ಸಹಜವಾದ ಗುಣಗಳನ್ನು ನಿರೂಪಿಸುತ್ತದೆ. ರಾಜಮ್ಮ ಗಂಡನನ್ನು ಕಳೆದುಕೊಂಡ ಮೇಲೆ ಮನೆ ಮನೆ ತಿರುಗಿ ದುಡಿಮೆಯ ಮೂಲಕ ತನ್ನ ಚಿಕ್ಕ ಮಗಳಾದ ಲಕ್ಷ್ಮಿಯನ್ನು ಸಾಕುತ್ತಾಳೆ. ಗಂಡನ ನೆನಪು ಬಂದಾಗ, ವರ್ಷದ ಆಚರಣೆಗಳು ಬಂದಾಗ ರಾಜಮ್ಮ ಕೋಪಗೊಳ್ಳುತ್ತಾಳೆ. ಗಂಡನ ಕುರಿತ ಆಚರಣೆ ಮಾಡಲು ನಿರಾಕರಿಸುತ್ತಾಳೆ. 'ಬಾಳಿದ ಎರಡು ದಿನ ಹುರಿದು ಮುಕ್ಕಿದ್ದ. ಅದೆಂತ ಕೋಪ, ಕ್ರೋಧ. ಗಂಡನ ಸದ್ದು ಕೇಳಿದರೆ ಅವಳ ಹೃದಯ ನಡುಗುತ್ತದೆ. ಹೊಟ್ಟೆ ತುಂಬ ಉಣಲಿಲ್ಲ, ಬಣ್ಣವಾದ ಬಟ್ಟೆ ಹಾಕಲಿಲ್ಲ, ಸರಸ, ನಗು, ವಿಶ್ವಾಸದ ಮಾತು ಇರಲಿಲ್ಲ' ಹಾಗಾಗಿ ಗಂಡನ ಧೋರಣೆಯನ್ನು ದಿಕ್ಕರಿಸುವ ರಾಜಮ್ಮ ಗಂಡನ ಸಾವಿನ ನಂತರದಲ್ಲಿ ನೈತಿಕವಾಗಿ ದುಡಿದು ಲಕ್ಷ್ಮಿಯನ್ನು ಬೆಳೆಸುತ್ತಾಳೆ. ಲಕ್ಷ್ಮಿ ಬೆಳೆದು ದೊಡ್ಡವಳಾದಾಗ, ಲಕ್ಷ್ಮಿಗೆ ಯೌವನ ಆಸೆಗಳು ಕಾಡಿತು, ಶ್ರೀಮಂತ ಹುಡುಗನಾದ ಶ್ಯಾಮಸುಂದರ ಲಕ್ಷ್ಮಿಯನ್ನು ಪ್ರೀತಿಸುತ್ತೇನೆಂದು ನಂಬಿಸಿ, ಬಣ್ಣದ ಲೋಕವನ್ನು ತೋರಿಸುವ ಮೂಲಕ ಲಕ್ಷ್ಮಿಯನ್ನು ತನ್ನ ಲೈಂಗಿಕ ಆಸೆಗೆ ಬಳಸಿಕೊಂಡು ಲಗ್ನವಾಗುತ್ತೇನೆಂದು ನಗರಕ್ಕೆ ರಾಜಮ್ಮನಿಗೆ ಗೊತ್ತಾಗದೆ ಕರೆದುಕೊಂಡು ಹೋದ ಮೇಲೆ ರಾಜಮ್ಮ ಮಗಳು ಇಲ್ಲದಕ್ಕಾಗಿ ಹುಡುಕುತ್ತಾಳೆ. ಮನೆ ಮನೆಗೆ ತಿರುಗಿ ಲಕ್ಷ್ಮಿಯ ಸುಳಿವನ್ನು ಅರಸುತ್ತಾಳೆ. ಕೊನೆಗೆ ಲಕ್ಷ್ಮಿ ಶ್ಯಾಮಸುಂದರನೊಂದಿಗೆ ಹೋಗಿದ್ದಾಳೆ ಎಂದು ತಿಳಿದ ಕೂಡಲೇ ಏನು ಮಾಡಲಾಗದೆ ಅಸಹಾಯಳಾಗಿ ಮೌನವಾಗುತ್ತಾಳೆ. ಎರಡು ತಿಂಗಳು ಕಳೆದ ಮೇಲೆ ಶ್ಯಾಮಸುಂದರನಿಗೆ ಲಗ್ನವೆಂಬ ಮಾತು ಕೇಳುವಾಗ ಲಕ್ಷ್ಮಿಗಾದ ಮೋಸ ಅರಿವಾಗಿ ದುಃಖಿಸುತ್ತಾಳೆ. ಮನೆಯ ಮೂಲೆಯಲ್ಲಿ ಅಳುಮುಖದಿಂದ ಸೊರಗಿದ್ದ ಲಕ್ಷ್ಮಿಯನ್ನು ಕಂಡು ಬಡಹೆಣ್ಣಿಗಾಗುವ

ಹಿಂಸೆಯನ್ನು ನೆನೆದು ರಾತ್ರಿಯೇ ಊರು ಬಿಟ್ಟು ಮಗಳನ್ನು ಕರೆದುಕೊಂಡು ಹೋಗುತ್ತಾಳೆ.

ಕತೆಗಾರ್ತಿಯು ಹೆಣ್ಣಿನ ಮೇಲೆ ನಡೆಯುವ ಹಿಂಸೆಯನ್ನು ರಾಜಮ್ಮ ಹಾಗೂ ಲಕ್ಷ್ಮಿ ಮೂಲಕ ನಿರೂಪಿಸುತ್ತಾರೆ. ರಾಜಮ್ಮನಿಗೆ ಕಟ್ಟಿಕೊಂಡ ಗಂಡ ತನ್ನ ಆಸೆ ಆಕಾಂಕ್ಷೆಗಳನ್ನು ಪೂರೈಸದೆ, ಹಿಂಸೆಯನ್ನೇ ನೀಡಿ ಮರಣ ಹೊಂದಿದ, ಲಕ್ಷ್ಮಿಯು ಶ್ಯಾಮಸುಂದರನ ಪ್ರೀತಿಯನ್ನು ನಿಜವೆಂದು ನಂಬಿ, ಕೊನೆಗೆ ಮೋಸಕ್ಕೆ ಬಲಿಯಾಗಿ ಹಿಂಸೆಗೆ ಒಳಗಾಗುತ್ತಾಳೆ. ಪುರುಷ ಸಮಾಜವು ರೂಪಿಸುವ ಆಚಾರ, ನಿಯಮ ಮತ್ತು ಅಪಮಾನಗಳನ್ನು ಪ್ರಶ್ನಿಸಲಾಗದ ಹೆಣ್ಣಿನ ಪರಿಸರವನ್ನು ಕತೆಯಲ್ಲಿ ಸ್ಥಳೀಯತೆಯ ಭಾಗವಾಗಿ ಗುರುತಿಸಬಹುದು.

'ಒಂದು ಪ್ರಕರಣ' ಎಚ್.ವಿ. ಸಾವಿತ್ರಮ್ಮ ಅವರ ಕತೆಯು ಹೆಣ್ಣಿನ ಗುಣಾತ್ಮಕ ಅಭಿವ್ಯಕ್ತಿಯನ್ನು ಮಂಡಿಸುತ್ತದೆ. ಕುಟುಂಬವನ್ನು ಬೆಸೆಯುವ ಗಂಡ ಹೆಂಡತಿಯನ್ನು ಒಟ್ಟಿಗೆ ತರುವ ನಮ್ಮ ಪರಂಪರೆಯ ಸತ್ವವನ್ನೆ ಗ್ರೇಸ್‌ಳ ಮೂಲಕ ಅಭಿವ್ಯಕ್ತಿಸುತ್ತದೆ. ಮಧು ಲಂಡನ್ ನಗರಕ್ಕೆ ಉದ್ಯೋಗಕ್ಕೆಂದು ಒಂದು ವರ್ಷದ ಕಾಲಕ್ಕೆ ಹೋದಾಗ ಮಧುವಿನ ವ್ಯಕ್ತಿತ್ವಕ್ಕೆ ಮನಸೋತು ಗ್ರೇಸ್ ಮಧುವನ್ನು ಪ್ರೀತಿಸುತ್ತಾಳೆ. ಮಧು ತನಗೆ ಮದುವೆಯಾಗಿರುವ ವಿಷಯವನ್ನು ಹೆಂಡತಿ ಲಲಿತೆಯ ವಿಚಾರವನ್ನು ಗ್ರೇಸ್‌ಗೆ ತಿಳಿಸಿದಾಗ, ಗ್ರೇಸ್ ಮಧುವನ್ನು ಒಪ್ಪಿಕೊಳ್ಳುತ್ತಾಳೆ. ತನ್ನೆಲ್ಲವನ್ನು ಮಧುಗೆ ನೀಡುತ್ತಾಳೆ. ಪ್ರತಿಯಾಗಿ ಏನನ್ನೂ ಕೇಳದೆ ಒಂದು ವರ್ಷದ ಕಾಲ ಮಧುವಿನೊಂದಿಗೆ ಕಳೆಯುತ್ತಾಳೆ. ಯಾರು ದಿಕ್ಕಿಲ್ಲದ ಪ್ರೀತಿ ಆಸರೆಯಿಲ್ಲದ ಗ್ರೇಸ್‌ಗೆ ಮಧುವಿನ ಸಂಘ ತೃಪ್ತಿಯನ್ನು ನೀಡುತ್ತದೆ. ವರ್ಷ ಕಳೆದ ಮೇಲೆ ಮಧು ಲಂಡನಿನಿಂದ ಭಾರತಕ್ಕೆ ಹಿಂದಿರುಗಿ ಬರುವಾಗ ಗ್ರೇಸ್‌ಳಿಗೆ ಮಧುವನ್ನು ಬಿಟ್ಟು ಇರಲು ಸಾಧ್ಯವಾಗದಿದ್ದರೂ ಮಧುವನ್ನು ಭಾರತಕ್ಕೆ ಕಳಿಸುತ್ತಾಳೆ. ಮಧುವನ್ನು ಲಲಿತೆಯಿಂದ ದೂರ ಮಾಡಬಾರದೆಂದು ಕಾರಣಕ್ಕಾಗಿ ಮಧು ಹಾಗೂ ಲಲಿತೆಯ ಸಂಸಾರವನ್ನು ಸ್ಥಿರವಾಗಿಡಲು ಗ್ರೇಸ್ ತನ್ನ ಪ್ರೀತಿಯನ್ನು ತ್ಯಾಗ ಮಾಡುತ್ತಾಳೆ. ಮಧು ಭಾರತಕ್ಕೆ ಬಂದು ಲಲಿತೆಯೊಂದಿಗೆ ಕೂಡಿಕೊಂಡರೂ ಗ್ರೇಸ್ ನೆನಪು ಮರೆಯಾಗದೆ ಕಾಡುತ್ತದೆ. ಗ್ರೇಸ್‌ಗಾಗಿ ಪತ್ರ ಬರೆಯುತ್ತಾನೆ. ಕೆಲವು ದಿನಗಳ ನಂತರ ಗ್ರೇಸ್ ತನ್ನ ಜೊತೆಯಲ್ಲಿ ತರುಣನೊಬ್ಬ ಚಿಕ್ಕ ಮಗುವನ್ನು ಎತ್ತಿಕೊಂಡು ನಿಂತಿರುವ ಫೋಟೋ ಜೊತೆಗೆ 'ನೀವು ನನ್ನ ವಿಚಾರವಾಗಿ ಆತಂಕ ಪಡಬೇಡಿ, ನಾನು ಸುಖವಾಗಿದ್ದೇನೆ. ದಯವಿಟ್ಟು ಕಾಗದ ಬರೆಯಬೇಡಿ' ಎಂದು ಪತ್ರ ಬರೆದಳು. ಪತ್ರ ಹಾಗೂ ಫೋಟೋವನ್ನು ನಿಜವೆಂದು ಭಾವಿಸಿದ ಮಧು ಗ್ರೇಸ್‌ಳನ್ನು ಮರೆತು ಲಲಿತೆಯೊಂದಿಗೆ ಸುಖದಿಂದ ಬದುಕಲು ಆರಂಭಿಸುತ್ತಾನೆ.

ಕತೆಗಾರ್ತಿಯು ಗ್ರೇಸ್‌ಳ ಗುಣಾತ್ಮಕ ಮನೋಭಾವವನ್ನು ಕತೆಯ ಆಶಯ ಪ್ರಧಾನವಾಗಿ ನಿರೂಪಿಸುತ್ತಾರೆ. ಗ್ರೇಸ್‌ಳಿಗೆ ಮಧುವನ್ನು ಬಿಟ್ಟು ಬದುಕಲು ಸಾಧ್ಯವಾಗದಿದ್ದರೂ ಮಧುವನ್ನು ನಂಬಿಕೊಂಡಿದ್ದ ಲಲಿತೆಗೆ ಮೋಸವಾಗಿ ಅವಳ ಸಂಸಾರ ಒಡೆಯಬಾರದೆಂದು ಗ್ರೇಸ್ ತನ್ನ ನೆರೆಮನೆ ಹುಡುಗನೊಂದಿಗೆ ಫೋಟೋ ತೆಗೆದು ಮಧುವಿಗೆ ಕಳಿಸುವ ಮೂಲಕ ಅವನ ಸಂಬಂಧವನ್ನು ನಿರಾಕರಿಸುತ್ತಾಳೆ. ಈ ರೀತಿಯ ಸಂಬಂಧವನ್ನು ಬೆಸೆಯುವ ಹೆಣ್ಣಿನ ಗುಣವನ್ನು ಸ್ತ್ರೀ ಗುಣಾತ್ಮಕ ಸ್ಥಳೀಯತೆ ಎಂದು ಕರೆಯಬಹುದು. 'ನಾವೆಯಲ್ಲಿ' ಎಂಬ ವಾಣಿಯನ್ನು ಕತೆಯು ಹೆಣ್ಣೊಬ್ಬಳ ಸಂವೇದನೆಯನ್ನು ಕಾಪಿಟ್ಟುಕೊಂಡು ಪುರುಷ ಲೋಕದ ಧೋರಣೆಯ ಪ್ರಶ್ನಿಸುವ ಅಭಿವ್ಯಕ್ತಿಯನ್ನು ಮಂಡಿಸುತ್ತದೆ. ಹೆಣ್ಣು ಗಂಡನ್ನು ಕಾಣುವ ನೆಲೆ ಹಾಗೂ ಗಂಡು ಹೆಣ್ಣನ್ನು ಕಾಣುವ ದೃಷ್ಟಿಯನ್ನು ಕತೆಯು ಹೆಣ್ಣಿನ ಆಂತರ್ಯದ ಮೂಲಕ ಚರ್ಚೆಗೆ ಒಳಪಡಿಸುತ್ತದೆ. ಹೆಣ್ಣಿನ ದುಡಿಮೆ ಹಾಗೂ ವ್ಯಕ್ತಿತ್ವವನ್ನು ಸಮಾಜವೇ ನಿರ್ಧರಿಸುತ್ತದೆ. ಈ ನಿರ್ಧರಿಕೆ ಹೆಣ್ಣಿನ ಅಸ್ಮಿತೆಯನ್ನು ಸಂವೇದನೆಯನ್ನು ಕಳೆದುಕೊಳ್ಳುವಂತೆ ಮಾಡುತ್ತದೆ ಎಂಬುವುದನ್ನು ಲಕ್ಷ್ಮಿಯ ಮೂಲಕ ಅನುಸಂಧಾನ ಮಾಡುತ್ತದೆ. ಲಕ್ಷ್ಮಿಯು ರೇಷ್ಮೆದಾರವನ್ನು ತಯಾರಿಸಿ, ಕಪ್ಪಡಿಗೆ ಹೋಗಿ ಮಾರಾಟ ಮಾಡಿಕೊಂಡು ಬದುಕು ಕಟ್ಟಿಕೊಂಡ 'ಲಕ್ಷ್ಮಿ' ತನ್ನ ಬಗ್ಗೆ ಮಾತನಾಡುವ ಜನರನ್ನು ನೇರವಾಗಿ ಎದುರಿಸುತ್ತಾಳೆ. ಯಾರಿಗೂ ತನ್ನ ಸ್ನೇಹವನ್ನು ನೀಡದೆ ತನ್ನ ಕಾಯಕ, ನೇರ ನಡೆ ನುಡಿಯ ಮೂಲಕ ಎಲ್ಲರಿಂದಲೂ ಗೈಯಾಳಿ, ಹೆಮ್ಮಾರಿ ಎಂದೂ ಕರೆಸಿಕೊಳ್ಳುತ್ತಾಳೆ. ದೋಣಿ ನಡೆಸುವ ಚೆನ್ನ ಲಕ್ಷ್ಮಿಯ ಸಂಘ ಬಯಸಿ, ಲಗ್ನವಾಗಬೇಕೆಂದು ಲಕ್ಷ್ಮಿಯನ್ನು ಕೇಳುತ್ತಾನೆ. ಲಕ್ಷ್ಮಿ ಪುರುಷನ ಪ್ರೀತಿ, ಹಂಬಲ, ಕೋಪ, ಸಂತೈಸುವಿಕೆಯ ಗುಣವನ್ನು ನಿರಾಕರಿಸುತ್ತಾಳೆ.

ತನ್ನ ತಂದೆ ತಾಯಿಯನ್ನು ಕಾಣುತ್ತಿದ್ದ ಬಗೆಯನ್ನು ಲಕ್ಷ್ಮಿ ಕಣ್ಣಾರೆ ನೋಡಿದ್ದಳು. ತಾಯಿಯನ್ನು ಹುಚ್ಚರಂತೆ ಹೊಡೆದು ಬಡಿದು ಪೀಡಿಸುತ್ತಿದ್ದ ಪ್ರಜ್ಞೆ, ತಪ್ಪಿ ಬಿದ್ದ ಮೇಲೆ ಸಮಾಧಾನಗೊಂಡು ಏಳುವವರೆಗೂ ಮುದ್ದಿಸುತ್ತಿದ್ದ. ಈ ನಡುವೆ ತಾಯಿ ಸುಖವಾಗಿ, ನೆಮ್ಮದಿಯಾಗಿ ನಾಲ್ಕು ದಿನ ಬದುಕಲಿಲ್ಲ. ಲಕ್ಷ್ಮಿಯು ತಾಯಿ ಸ್ಥಿತಿಯನ್ನು ಕಂಡು ಹೆಣ್ಣು ಲಗ್ನವಾದ ಮೇಲೆ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ಪುರುಷನ ಕ್ರೌರ್ಯಕ್ಕೆ ಒಳಗಾಗುವುದಕ್ಕಿಂತ ಲಗ್ನವಾಗದೆ ತನ್ನ ಅಸ್ತಿತ್ವವನ್ನು ಕಟ್ಟಿಕೊಳ್ಳುವುದಕ್ಕೆ ನಿರ್ಧರಿಸುತ್ತಾಳೆ. ಕತೆಗಾರ್ತಿ ಲಕ್ಷ್ಮಿಯ ಮೂಲಕ ಹೆಣ್ಣಿನ ಸ್ವಭಾವವನ್ನು, ಅವಳ ಆಸೆ-ಆಕಾಂಕ್ಷೆಯನ್ನು ಪುರುಷ ಪ್ರಧಾನತೆಯನ್ನು ಮೀರಿ ನೋಡುವ ತಾತ್ವಿಕತೆಯನ್ನು ರೂಪಿಸುತ್ತಾಳೆ. ಇದನ್ನೆ

ಸ್ತ್ರೀ ಗುಣಾತ್ಮಕವಾದ ಸ್ಥಳೀಯತೆ ಎಂದು ಕರೆಯುತ್ತೇವೆ.

ದೇವಿಯ ಪ್ರಸಾದ ಎಂಬ ಸಿ.ಎನ್. ಜಯಲಕ್ಷ್ಮಿ ದೇವಿಯವರ ಕತೆಯು ಸ್ತ್ರೀಯೊಬ್ಬಳ ಲೋಕ ಗ್ರಹಿಕೆಯನ್ನು ಅನುಸಂಧಾನ ಮಾಡುವ ಜೊತೆಗೆ ಜೀವಪರವಾದ ಅಭಿವ್ಯಕ್ತಿಯನ್ನು ಸ್ತ್ರೀಯೊಬ್ಬಳು ಪುರುಷನಿಗಿಂತ ಭಿನ್ನವಾಗಿ ಹೊಂದಿರುತ್ತಾಳೆ ಎಂಬುವುದನ್ನು ಚರ್ಚಿಸುವುದರ ಜೊತೆಗೆ ಜಾತಿ-ಧರ್ಮವನ್ನು ಮೀರಿದ ಹೊಂದಾಣಿಕೆಯನ್ನು ನಿರೂಪಿಸುತ್ತಾರೆ. ಕೃಷ್ಣಪ್ಪ ಊರ ಪ್ರಮುಖನಾಗಿ ದಾನಧರ್ಮ ಮಾಡಿಕೊಂಡು ಬದುಕು ನಡೆಸಿದ ಕಾಲಾನಂತರದಲ್ಲಿ ಎಲ್ಲವನ್ನು ಕಳೆದುಕೊಂಡ ತನ್ನ ಊರಿನವನೇ ಆದ ವೆಂಕಟಪ್ಪನಿಂದ ಸಾಲಪಡೆದ ಕಾರಣಕ್ಕಾಗಿ ತನ್ನ ಮನೆಯನ್ನು ವೆಂಕಟಪ್ಪನಿಗೆ ಬರೆದು ಕೊಟ್ಟು ಬೀದಿ ಪಾಲಾಗುವ ಸ್ಥಿತಿ ಕೃಷ್ಣ ಹಾಗೂ ಲಕ್ಷ್ಮಿ ದೇವಿಯವರಿಗೆ ಒದಗುತ್ತದೆ. ಈ ನಡುವೆ ಮಹಾನವಮಿ ಪೂಜೆಯ ಸಂದರ್ಭದಲ್ಲಿ ವೆಂಕಟಪ್ಪನು ಮನೆಯ ದಾನ ಪತ್ರವನ್ನು ದೇವಿಯ ಪೂಜೆಯ ಸಂದರ್ಭದಲ್ಲಿ ತಂದು ಕೃಷ್ಣಪ್ಪನವರಿಗೆ ಅರ್ಪಿಸುತ್ತಾನೆ. ಜಾತಿ, ಮಡಿ, ಮೈಲಿಗೆಯನ್ನು ಮೀರಿ ಕೃಷ್ಣಪ್ಪ ವೆಂಕಟಪ್ಪನನ್ನು ಅಪ್ಪಿಕೊಳ್ಳುತ್ತಾರೆ. ಕತೆಗಾರ್ತಿ ಕುಟುಂಬವನ್ನು ಬೆಸೆಯುವ ನಿಲುವನ್ನು ಮಂಡಿಸಿದರು ಹೆಣ್ಣು ಒಬ್ಬಳು ಕುಟುಂಬವನ್ನು ನಡೆಸುವ ಗಂಡನ ಎಲ್ಲಾ ವ್ಯವಹಾರವನ್ನು ಒಪ್ಪಿಕೊಂಡು ಅವನ ದಾನ, ಧರ್ಮದಂತಹ ಕಾರ್ಯದಿಂದ ಎಲ್ಲವನ್ನು ಕಳೆದುಕೊಂಡು ಕೃಷ್ಣಪ್ಪ ಮಾನಸಿಕವಾಗಿ ಕುಗ್ಗಿದಾಗ ಅವನ ಬೆನ್ನಿಗೆ ನಿಂತು ಧೈರ್ಯ ತುಂಬುವ ಹಾಗೂ ದೇವಿ ನಮ್ಮನ್ನು ಕೈಬಿಡುವುದಿಲ್ಲ ಎಂಬ ನಂಬಿಕೆಯಿಂದ ತನ್ನ ಗೌರವವನ್ನು ಕಾಪಿಟ್ಟುಕೊಳ್ಳುವ ಲಕ್ಷ್ಮೀದೇವಿಯ ನಡೆಯನ್ನು ಸ್ತ್ರೀಯೊಬ್ಬಳ ಗುಣಾತ್ಮಕವಾದ ಸ್ಥಳೀಯತೆ ಎಂದು ಕರೆಯಬಹುದು.

ಮೈಸೂರು ಭಾಗದ ಮೊದಲ ತಲೆಮಾರಿನ ಕತೆಗಾರರು ಸ್ತ್ರೀಯರ ಬದುಕನ್ನು ನಿರೂಪಿಸುವುದರ ಜೊತೆ ವಸಾಹತುಶಾಹಿಯ ಕಾಲಮಾನದಲ್ಲಿ ಸ್ತ್ರೀಯರ ಬದುಕಿನಲ್ಲಿ ಉಂಟಾದ ಪಲ್ಲಟ ಹಾಗೂ ಪರಂಪರೆಯೊಂದಿಗಿನ ಸಂಘರ್ಷವನ್ನು ಅನುಸಂಧಾನ ಮಾಡುವುದರ ಜೊತೆಗೆ ಪುರುಷ ಪ್ರಧಾನತೆಯ ಲೋಕಗ್ರಹಿಕೆಯನ್ನು ಮೀರುವ ಮೂಲಕ ತನ್ನ ಅಸ್ತಿತ್ವವನ್ನು ರೂಪಿಸುವ ನೆಲೆಗಳನ್ನು ಕತೆಗಳು ಕಾಪಿಟ್ಟುಕೊಳ್ಳುತ್ತದೆ. ಪುರುಷನ ಲೋಕ ಗ್ರಹಿಕೆಯನ್ನು ಪ್ರಶ್ನಿಸುವ ಹಾಗು ಅದನ್ನು ಮೀರಿ ಸ್ತ್ರೀಯರ ಅಸ್ಮಿತೆಯನ್ನು ನಿರೂಪಿಸುವುದನ್ನು ಕಾಣಬಹುದು. ಸ್ತ್ರೀಯೊಬ್ಬಳ ನಡೆ ನುಡಿ ಹಾಗೂ ಬದುಕಿನ ವಿನ್ಯಾಸವನ್ನು ಗುಣಾತ್ಮಕವಾಗಿಯೇ ಮಂಡಿಸುವುದರಿಂದ ಈ ಚಿಂತನೆಯನ್ನು ಸ್ತ್ರೀಗುಣಾತ್ಮಕ ಚಿಂತನೆ ಎಂದು ಕರೆಯಬಹುದು. ಭಾರತೀಯ ಸ್ತ್ರೀವಾದ ಚಿಂತನೆಗೆ ಈ ಕತೆಗಳು

ಪ್ರಧಾನ ನೆಲೆಗಳಾಗಿ ಒಂದು ಪರಂಪರೆಯನ್ನು ಹುಟ್ಟು ಹಾಕಿದ್ದನ್ನು ಈ ಭಾಗದ ಕತೆಗಳಲ್ಲಿ ಕಾಣಬಹುದು.

**೫.೩. ಮುಂಬೈ ಕರ್ನಾಟಕದ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ**

ಮುಂಬೈ ಕರ್ನಾಟಕವೆಂದು ಕರೆಯುವ ಪ್ರದೇಶಗಳು ವಿಜಯನಗರದ ಆಳ್ವಿಕೆಗೆ ಒಳಪಟ್ಟಿತ್ತು. ವಿಜಯನಗರದ ಪತನದ ನಂತರ ಈ ಪ್ರದೇಶವು ಪೇಶ್ವೆಗಳ ಆಳ್ವಿಕೆಗೆ ಒಳಗಾಯಿತು. ಈ ಕಾರಣದಿಂದ ಕನ್ನಡ ಪರಿಸರ ಮತ್ತು ಭಾಷೆಯು ಮರಾಠಿ ಪ್ರಭಾವಕ್ಕೆ ಒಳಗಾಯಿತ್ತಲ್ಲದೆ, ಕನ್ನಡ ಭಾಷೆ ಹಾಗೂ ಸಾಂಸ್ಕೃತಿಕ ಪ್ರಜ್ಞೆಯು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಸ್ಥಿತಿ ನಿರ್ಮಾಣವಾಯಿತು. ಯಾವಾಗ ಮರಾಠರು ದುರ್ಬಲವಾಗಿ ಆಂಗ್ಲ ಶಾಹಿತ್ವವು ಈ ಪ್ರದೇಶದಲ್ಲಿ ಪ್ರವೇಶ ಪಡೆದ ಮೇಲೆ ರಾಜಕೀಯವಾದ ಸಂಘರ್ಷ ಒಪ್ಪಂದ, ಆಡಳಿತಗಳು ಅನೇಕ ಸುಧಾರಣೆಯನ್ನು ಹುಟ್ಟು ಹಾಕಿತು. ವಸಾಹತುಶಾಹಿಯೊಂದಿಗೆ ಈ ಭಾಗಕ್ಕೆ ಆಗಮಿಸಿದ ಕ್ರಿಸ್ತ ಮಿಷನರಿಗಳು ಧರ್ಮ ಪ್ರಚಾರದ ಜೊತೆಗೆ ಪಾಶ್ಚಾತ್ಯ ಚಿಂತನ ಕ್ರಮವನ್ನು ಈ ಭಾಗದ ಜನರ ಮನಸ್ಸಿಗೆ ವರ್ಗಾಯಿಸಲು ಪ್ರಯತ್ನ ಪಟ್ಟರು. ಆಡಳಿತ ದೃಷ್ಟಿಯಿಂದ ಭಾರತೀಯ ಸಾಂಸ್ಕೃತಿಕ ಸತ್ವವನ್ನು ಅರಿಯುವ ಅಗತ್ಯವನ್ನು ಮನಗಂಡ ಆಂಗ್ಲ ವಿದ್ವಾಂಸರು ಮತ್ತು ಅಧಿಕಾರಿಗಳು ಈ ಭಾಗದ ಭಾಷೆ, ಪರಿಸರ, ಆಚರಣೆ, ಆಡಳಿತ ವ್ಯವಸ್ಥೆ ಇತ್ಯಾದಿ ಜೀವನ ವಿಧಾನದ ಪರಂಪರೆಯನ್ನು ಅಧ್ಯಯನ ಮಾಡುವ ಉದ್ದೇಶದಿಂದ ಕನ್ನಡ ಸಾಹಿತ್ಯ ಹಾಗೂ ಕನ್ನಡ ಜನರ ಚರಿತ್ರೆಯನ್ನು ಸಂಶೋಧನೆಗೆ ಒಳಪಡಿಸಿದರೂ ಡಬ್ಲ್ಯು. ಎ. ರಸೆಲ್ ಎಂಬ ಆಂಗ್ಲ ಅಧಿಕಾರಿಯ ಕ್ರಮದಿಂದ ಈ ಭಾಗದಲ್ಲಿ ಅನೇಕ ಶಾಲೆಗಳು ಅಸ್ತಿತ್ವವನ್ನು ಪಡೆದವು ಮತ್ತು ಕನ್ನಡದ ವ್ಯಾಕರಣದಂತಹ ಪಠ್ಯಗಳು ರಚನೆಯಾದವು. ಈ ಕಾಲಮಾನದಲ್ಲಿ ಕನ್ನಡ ಸಾಹಿತ್ಯ, ಭಾಷೆಯು ಉಸಿರಾಡುವಂತಹ ಪರಿಸರವು ರಚನೆಯಾಯಿತು.೧೮೯೦ ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಲಾಯಿತು. ಈ ಸಂಘವು ಕನ್ನಡ ಪರವಾದ ಅನೇಕ ಚಟುವಟಿಕೆಗಳನ್ನು ರೂಪಿಸಿತ್ತಲ್ಲದೆ, ಕನ್ನಡ ಪರಿಸರವನ್ನು ಮರುಕಟ್ಟುವ ಕೆಲಸವನ್ನು ಮಾಡಿತು.ಈ ಕಾಲಮಾನದಲ್ಲಿ ಮೈಸೂರು ಭಾಗದಲ್ಲಿ ಕನ್ನಡ ಸಾಹಿತ್ಯ ಕೃಷಿ ಅತಿ ಹೆಚ್ಚಿನ ರೀತಿಯಲ್ಲಿ ಬೆಳವಣಿಗೆಯನ್ನು ಸಾಧಿಸಿತು.ಈ ಬೆಳವಣಿಗೆಯನ್ನು ಗಮನಿಸಿದ ವಿದ್ಯಾವರ್ಧಕ ಸಂಘವು ಮೈಸೂರು ಭಾಗದ ಸಾಹಿತಿಗಳ ಜೊತೆಯಲ್ಲಿ ಸಂವಾದವನ್ನು ನಡೆಸಿತು. ಈ ಸಂವಾದವು ಸಾಹಿತ್ಯ ಚಿಂತನೆಯ ಕೊಡುಕೊಳ್ಳುವಿಕೆಯಲ್ಲಿ ಮಹತ್ವದ ಪಾತ್ರವಹಿಸಿತು.

ವಸಾಹತುಶಾಹಿಯ ಆಳ್ವಿಕೆಯ ಸಂದರ್ಭದಲ್ಲಿ ಮುಂಬೈ ಕರ್ನಾಟಕದ ಪ್ರದೇಶಗಳಲ್ಲಿ ಸಾಹಿತ್ಯಿಕ ಪರಿಸರ ನಿರ್ಮಾಣವಾಯಿತು ಹಾಗೂ ಅನೇಕ ಸಾಹಿತ್ಯ ಕೃತಿಗಳು ಪ್ರಕಟಗೊಂಡು ಕನ್ನಡದ ಪರವಾದ ಚಿಂತನೆ ಜೀವಕಾಣಲು ಆರಂಭವಾಯಿತು.

ಮರಾಠಿ ಭಾಷೆ ಮತ್ತು ಸಾಹಿತ್ಯಕ್ಕೆ ಪ್ರತಿರೋಧವಾಗಿ ಕನ್ನಡ ಸಾಹಿತ್ಯವು ಬೆಳೆದರೂ ಮರಾಠಿ ಸಾಹಿತ್ಯ ಕನ್ನಡದ ಮೇಲೆ ಬಹುಮಟ್ಟಿನ ಪ್ರಭಾವವನ್ನು ಬೀರಿತು. ಮರಾಠಿ ಪರಿಸರದಲ್ಲಿ ರೂಪುಗೊಂಡ ತಿಲಕರ ಸುಧಾರಣೆಯ ಚಿಂತನೆ ಮತ್ತು ಸ್ವಾತಂತ್ರ್ಯ ಹೋರಾಟದ ನೆಲೆಗಳು, ಗಣೇಶ ಉತ್ಸವದಂತಹ ಸಾರ್ವಜನಿಕ ಕಾರ್ಯಕ್ರಮಗಳು ಹುಬ್ಬಳ್ಳಿ ಮತ್ತು ಧಾರವಾಡಗಳಲ್ಲಿ ಹೆಚ್ಚಿನ ಪ್ರತಿಕ್ರಿಯೆಯನ್ನು ಉಂಟುಮಾಡಿತು. ಈ ಕಾಲಮಾನದಲ್ಲಿ ಸುಧಾರಣ ಚಳುವಳಿಯ ಧೋರಣೆಗಳು ಮುಂಬೈ ಹಾಗೂ ಪುಣೆ ಭಾಗದಿಂದ ಮುಂಬೈ ಕರ್ನಾಟಕವನ್ನು ಪ್ರವೇಶ ಮಾಡಿ ಈ ಭಾಗದ ಸಾಮಾಜಿಕ ಚಿಂತನೆಯಲ್ಲಿ ಹೊಸ ಆಯಾಮವನ್ನು ಹುಟ್ಟು ಹಾಕಿತು. ಮುಖ್ಯವಾಗಿ ಮುಂಬೈ ಕರ್ನಾಟಕ ಕನ್ನಡ ಸಾಹಿತ್ಯ ಪ್ರಜ್ಞೆಯು ರೂಪುಗೊಂಡಿದ್ದು ಮರಾಠ ಭಾಷೆ ಮತ್ತು ಸಾಹಿತ್ಯದ ಪ್ರಭಾವ ವಸಾಹತುಶಾಹಿಯ ಆಳ್ವಿಕೆಯ ಧೋರಣೆಯ ಒತ್ತಡ, ಭಾರತದ ಸ್ವಾತಂತ್ರ್ಯ ಚಳುವಳಿಯ ದಿಕ್ಕು ದೆಸೆಯಿಂದ ಹಾಗೂ ಸಾಮಾಜಿಕ ಧಾರ್ಮಿಕ ಸುಧಾರಣ ಚಳುವಳಿಯ ಕಾವುನಿಂದ ರೂಪುಗೊಂಡಿದ್ದ ಈ ಭಾಗದ ಸಾಹಿತ್ಯದ ವೈಶಿಷ್ಟ್ಯವಾಗಿದೆ.

ಕನ್ನಡದ ಮೊದಲ ತಲೆಮಾರಿನ ಕತೆಗಾರರು ಮರಾಠಿ ಸಾಂಸ್ಕೃತಿಕ ಪ್ರಭುತ್ವದಿಂದ ಬಿಡಿಸಿಕೊಂಡು ಕನ್ನಡದ ಮೀಮಾಂಸೆಯನ್ನು ಕಟ್ಟಲು ಪ್ರಯತ್ನಿಸಿದರಲ್ಲದೆ, ವಸಾಹತು ಶಾಹಿಯ ಧೋರಣೆಯನ್ನು ವಿರೋಧಿಸುವ ನೆಲೆಯಲ್ಲಿ ನಮ್ಮ ನೆಲದ ಸತ್ವವನ್ನು ರಾಷ್ಟ್ರೀಯ ಚಳುವಳಿಯ ಭಾಗವಾಗಿ ನಿರೂಪಣೆ ಮಾಡಲು ಆರಂಭಿಸಿದರು.ಈ ಭಾಗದ ಹೆಚ್ಚಿನ ಕತೆಗಾರರು ಸಾಮಾಜಿಕ-ಧಾರ್ಮಿಕ ಚಳುವಳಿಯ ಪ್ರಭಾವಕ್ಕೆ ಒಳಗಾಗಿ ವೈಚಾರಿಕತೆಯ ಸ್ವರೂಪವನ್ನು ತಮ್ಮ ಕತೆಗಳ ಭೂಮಿಕೆಯಾಗಿಸಿಕೊಂಡಿದ್ದನ್ನು ಕಾಣಬಹುದು. ಮುಂಬೈ ಕರ್ನಾಟಕದ ಕತೆಗಾರರಿಗೆ ವಸಾಹತುಶಾಹಿ ಪ್ರಭುತ್ವ ಧೋರಣೆಗೆ ಹಾಗೂ ಮರಾಠಿ ಭಾಷೆಯ ಪ್ರಭುತ್ವದ ಧೋರಣೆಗೆ ಕನ್ನಡದ ಸಾಂಸ್ಕೃತಿಕ ಸತ್ವವನ್ನು ಮುಖಾಮುಖಿಯಾಗಿಸುವ ಸಂದರ್ಭ ಅನಿವಾರ್ಯವಾಗಿದ್ದರಿಂದ ಕನ್ನಡ ಪ್ರದೇಶದ ಸ್ಥಳೀಯ ಸತ್ವವನ್ನು ಘನವಾಗಿ ಕತೆಯ ಮೂಲಕ ಅನುಸಂಧಾನ ಮಾಡಿದ ಪ್ರಮುಖ ಕತೆಗಾರರೆಂದರೆ ಕೆರೂರು ವಾಸುದೇವಾಚಾರ್ಯ, ದ.ರಾ.ಬೇಂದ್ರೆ, ಸರಸ್ವತಿ ದೇವಿಗೌಡರ, ಕೃಷ್ಣ ಕುಮಾರ ಸಾವಿತ್ರಮ್ಮ, ಟೇಂಗ್ಸೆ ಗೋವಿಂದಾಚಾರ್ಯ, ಮೇವುಂಡಿ ಮಲ್ಲಾರಿ ಶಾರದಾ ಜಡೆ ಮತ್ತು ಇತರರು.

ಈ ಕತೆಗಾರರ ಕತೆಗಳಲ್ಲಿ ಅನುಸಂಧಾನವಾದ ಸ್ಥಳೀಯತೆಯ ಸ್ವರೂಪವನ್ನು ಚರ್ಚಿಸುವುದಾದರೆ,

**೧. ವಸಾಹತುಶಾಹಿಗೆ ಪ್ರತಿಯಾದ ಸ್ಥಳೀಯತೆ**

ಮುಂಬೈ ಕರ್ನಾಟಕ ಭಾಗದಲ್ಲಿ ಪೇಶ್ವೆಯ ಆಳ್ವಿಕೆಯು ಪತನವಾದ ನಂತರದಲ್ಲಿ ವಸಾಹತುಶಾಹಿಯ ಪ್ರವೇಶವು ಶಿಕ್ಷಣ, ಕೈಗಾರಿಕೆ, ವ್ಯಾಪಾರ, ಕಾನೂನು ಇತ್ಯಾದಿ ನೆಲೆಗಳ ಮೂಲಕ ಈ ಭಾಗದಲ್ಲಿ ಪಾಶ್ಚಾತ್ಯ ಜೀವನ ಕ್ರಮಗಳನ್ನು ತೀವ್ರವಾಗಿ ಪರಿಚಯಿಸಿತು. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವು ಮುಂಬೈ ಕರ್ನಾಟಕದ ಜೀವನ ಸತ್ವವನ್ನು ಅಸ್ಥಿರಗೊಳಿಸಿದವು. ಇಂತಹ ಕಾಲಮಾನದಲ್ಲಿ ಕನ್ನಡ ಮೊದಲ ತಲೆಮಾರಿನ ಕತೆಗಾರರು ವಸಾಹತುಶಾಹಿಯ ಧೋರಣೆಗಳಿಗೆ ಜವಾಬ್ದಾರಿಯುತವಾಗಿ ಪ್ರತಿಕ್ರಿಯಿಸಿದರೂ, ಈ ಪ್ರತಿಕ್ರಿಯೆಯ ಪ್ರಧಾನ ಅಸ್ತ್ರ ಸ್ಥಳೀಯತೆಯೇ ಆಗಿದೆ. ಟೇಂಗ್ಸೆ ಗೋವಿಂದರಾವ್ ಅವರ ಗಂಗೆಯ ಗುತ್ತಿಗೆ ಕತೆಯು ವ್ಯಾಪಾರ ಕೇಂದ್ರಿತ ಸಮಾಜದಲ್ಲಿ ಲಗ್ನದ ಮೂಲಕ ಕುಟುಂಬವನ್ನು ಬೆಸೆಯುವ ಸಹಬಾಳ್ವೆ ಎಂಬ ನಮ್ಮ ನೆಲದ ಸತ್ವವನ್ನು ಕಾಪಾಡಿಕೊಳ್ಳುತ್ತದೆ.

ಗಂಗೆ ಹಾಗೂ ಅವಳ ತಂದೆ ಪರಂಪರೆಯಿಂದ ಬಂದ ಅಗಸರ ವೃತ್ತಿಯಿಂದ ಬದುಕನ್ನು ಕಟ್ಟಿಕೊಂಡು ಬದುಕಿನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾರೆ. ಇವರ ಸಂಬಂಧಿಗಳಾದ ಬೈರ ಹಾಗೂ ಆತನ ಅಣ್ಣ 'ಜುಬೀಲಿ ವಾಷಿಂಗ್ ಕಂಪನಿಯನ್ನು ಆರಂಭಿಸುವ ನೆಲೆಯಿಂದ ಗೌಡರ ಬಾವಿಯನ್ನು ತೊಳೆಯುತ್ತಿದ್ದ ಗೌಡರ ಬಟ್ಟೆ ಹಾಗೂ ಗೌಡರ ಬಾವಿಯೂ ಒಪ್ಪಂದದ ಮೂಲಕ ಬೈರನ ಪಾಲಾದಾಗ ಗಂಗೆಯ ಕುಟುಂಬವು ಸಂಕಷ್ಟಕ್ಕೆ ಒಳಗಾಗಿ ಬದುಕುವ ದಾರಿ ನಿಂತು ಹೋಯಿತು. ಈ ನಡುವೆ ಕತೆಗಾರರು ಬೈರ ಹಾಗೂ ಗಂಗೆಯನ್ನು ಲಗ್ನದ ಮೂಲಕ ಎರಡು ಕುಟುಂಬವನ್ನು ಬೆಸೆಯುವ ಜೊತೆಗೆ ಒಂದೇ ಬಾವಿಯನ್ನು ಎರಡು ಕುಟುಂಬಗಳು ಬಳಸುವಂತೆ, ಜೊತೆಗೆ ಬದುಕನ್ನು ಕಟ್ಟಿಕೊಳ್ಳುವಂತಹ ನಿಲುವನ್ನು ಮಂಡಿಸುತ್ತಾರೆ. ಈ ನಿಲುವನ್ನು ಸ್ಥಳೀಯತೆ ಎಂದು ಕರೆಯಬಹುದು.

ವಸಾಹುತುಶಾಹಿಯ ಬಂಡವಾಳ ಕೇಂದ್ರಿತ ಧೋರಣೆಯು ಸ್ಥಳೀಯ ಬದುಕಿನ ಸತ್ವವನ್ನು ನಾಶ ಮಾಡಿ ಬಂಡವಾಳ ಕೇಂದ್ರಿತ ಕಂಪನಿಗಳನ್ನು ಹುಟ್ಟು ಹಾಕಿತು. ಇದರ ಪರಿಣಾಮ ಗಂಗೆಯಂತ ಅನೇಕ ದುಡಿದು ಬದುಕುವ ಕುಟುಂಬಗಳು ತಮ್ಮ ವೃತ್ತಿಯನ್ನು ಹಾಗೂ ಉತ್ಪಾದಕ ವಸ್ತುವನ್ನು ಕಳೆದುಕೊಳ್ಳುವಂತಹ ಸ್ಥಿತಿ ನಿರ್ಮಾಣವಾದಾಗ ಸ್ವದೇಶಿ

ಚಳುವಳಿಗಳು ಸ್ಥಳೀಯವಾದ ಅಗಸ ವೃತ್ತಿಯನ್ನು ಕಾಪಿಟ್ಟುಕೊಳ್ಳುವ ತಾತ್ವಿಕತೆಯನ್ನು ಮಂಡಿಸುತ್ತದೆ.

ವಸಾಹತುಶಾಹಿತ್ವದ ಧೋರಣೆಯಿಂದ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಉಂಟಾದ ಪಲ್ಲಟಗಳಿಗೆ ನಮ್ಮ ಸಾಮಾಜಿಕ ಆರೋಗ್ಯವು ಬಹುಪಾಲು ಅಸ್ತಿತ್ವವನ್ನು ಕಳೆದುಕೊಂಡಿತು. ಈ ಸಂದರ್ಭದಲ್ಲಿ ರಚನೆಯಾದ ಮೊದಲ ತಲೆಮಾರಿನ ಕತೆಗಳು ಸ್ಥಳೀಯತೆಯ ಕೇಂದ್ರದಿಂದ ಅಸ್ಥಿರವಾದ ಸಮಾಜಕ್ಕೆ ಚಿಕಿತ್ಸೆಯನ್ನು ನೀಡುವ ಚಿಂತನೆಯನ್ನು ಮಾಡಿದರು. ವಸಾಹತುಶಾಹಿಯ ಪ್ರಭಾವ ಹಾಗೂ ಪ್ರೇರಣೆಗೆ ಭಾರತೀಯ ಕುಟುಂಬ ವ್ಯವಸ್ಥೆ, ಮಾನವ ಸಂಬಂಧ, ಹೆಣ್ಣು ಗಂಡಿನ ದಾಂಪತ್ಯ ಸಂಬಂಧಗಳಲ್ಲಿಯೇ ಅಸ್ಥಿರತೆಯನ್ನು ಉಂಟು ಮಾಡಿತು. ಈ ಅಸ್ಥಿರತೆಯನ್ನು ಗಮನಿಸಿದ ಕತೆಗಾರರು ಕುಟುಂಬವನ್ನು ಬೆಸೆಯುವ ಸ್ಥಳೀಯವಾದ ಆಶಯವನ್ನೆ ಕತೆಯ ಪ್ರಧಾನ ಭಾಗವಾಗಿ ಚರ್ಚೆ ಮಾಡುತ್ತಾರೆ.

ಟಿ.ಎಸ್. ಸಂಜೀವರಾವ್ ಅವರ ಸೀದ ಒಗ್ಗರಣೆ ಕತೆಯು ಕುಟುಂಬವನ್ನು ಬೆಸೆಯುವ ಹೆಣ್ಣು ಒಬ್ಬಳ ಮೌಲ್ಯಯುತವಾದ ನಡೆ, ಸಮಯ ಪ್ರಜ್ಞೆ, ಜೀವನವನ್ನು ಕಟ್ಟುವ ಮೀಮಾಂಸೆಯು ಸ್ಥಳೀಯತೆಯ ನೆಲೆಯಲ್ಲಿ ಅಭಿವ್ಯಕ್ತವಾಗುತ್ತದೆ. ವಸಾಹತುಶಾಹಿಯ ಧೋರಣೆಯ ಫಲವಾಗಿ ಹುಟ್ಟಿಕೊಂಡ ಕೈಗಾರಿಕೆಯಲ್ಲಿ ದುಡಿಯಲು ಹಳ್ಳಿಗಳಿಂದ ಜನರು ವಲಸೆ ಹೋದರು. ಹಾಗೂ ಕೈಗಾರಿಕಾ ಪ್ರದೇಶದಲ್ಲಿ ಹೊಸದಾದ ಬದುಕನ್ನು ಆರಂಭಿಸಿ ಅನೇಕರ ಜೀವನ ತುಡಿತಗಳನ್ನು ಈ ಕತೆಯು ಅನುಸಂಧಾನ ಮಾಡುತ್ತದೆ. ಮುಂಬೈನಲ್ಲಿ ಬಾಡಿಗೆ ಮನೆಮಾಡಿಕೊಂಡು ಬದುಕನ್ನು ಆರಂಭಿಸಿದ ಗೆಳೆಯರಾದ ಗೋಪಾಲಯ್ಯ, ನಾಣಿ, ಶಿವರಾಮರು ಅಡುಗೆಯ ಹಾಗೂ ಊಟದ ಸಮಸ್ಯೆಯಿಂದ ಕೊನೆಗೆ ತಮ್ಮಲ್ಲಿ ಹಿರಿಯರಾದ ಗೋಪಾಲಯ್ಯ ತಮ್ಮ ಹೆಂಡತಿಯಾದ ಲಲಿತಮ್ಮಳನ್ನು ಮನೆಗೆ ಕರೆದುಕೊಂಡು ಬರುವುದಾಗಿ ನಿರ್ಧರಿಸಿದ ಮೇಲೆ ಎಲ್ಲಾ ಗೆಳೆಯರಿಗೆ ಸಂತಸವಾಯಿತು ಮತ್ತು ಮನೆಯ ಕೆಲಸ-ಕಾರ್ಯಗಳ ವ್ಯವಸ್ಥಿತವಾಗಿ ನಡೆಯಲು ಆರಂಭವಾಯಿತು. ಲಲಿತಮ್ಮ ಗೋಪಾಲಯ್ಯನೊಂದಿಗೆ ಸಂಸಾರವನ್ನು ಆರಂಭಿಸಿದಲ್ಲದೆ. ಗೋಪಾಲಯ್ಯನ ಗೆಳೆಯರನ್ನು ಸೋದರರಂತೆ ಪ್ರೀತಿ ಮತ್ತು ಸಲುಗೆಯಿಂದ ನೋಡಿಕೊಂಡಳು. ಆದರೆ ಗೋಪಾಲಯ್ಯ ಗೆಳೆಯರಲ್ಲಿ ಒಬ್ಬನಾದ ಶಿವರಾಮಯ್ಯ ತನ್ನ ಯೌವನ ಹಾಗೂ ರಸಿಕತೆಯಿಂದ ಲಲಿತಳ ನಡೆಯನ್ನು ತಪ್ಪಾಗಿ ಅರ್ಥ ಮಾಡಿಕೊಂಡು ಪದೆ-ಪದೇ ಲಲಿತಳ ಕೋಣೆಗೆ ಹೋಗುವುದು, ರೇಗಿಸುವುದು, ರಸಿಕತನದ ಮಾತುಗಳನ್ನು ಆಡುವುದನ್ನು ದಿನದ ಮಾತಾಗಿಸಿಕೊಂಡ. ಒಂದು ದಿನ ಗೋಪಾಲಯ್ಯ ತಡವಾಗಿ

ಬರುವ ವಿಷಯ ತಿಳಿದು ಲಲಿತೆ ಒಬ್ಬಳೇ ಇದ್ದ ಅಡಿಗೆ ಕೋಣೆಗೆ ಹೋಗಿ ಕೆಲಸಮಯದ ನಂತರ ತಲೆತಗ್ಗಿಸಿಕೊಂಡು ಬಂದ ಶಿವರಾಮಯ್ಯ ಊರಿನಿಂದ ಕಾಗದ ಬಂದಿದೆ ಎಂದು ಆ ಮನೆಯಿಂದ ಹೊರಬೀಳುತ್ತಾನೆ.

ಕತೆಯಲ್ಲಿ ಲಲಿತಮ್ಮ ಸ್ನೇಹವನ್ನು ತಪ್ಪಾಗಿ ಅರ್ಥ ಮಾಡಿಕೊಂಡು ಅವಳ ಹಿಂದೆ ಬಿದ್ದಿದ್ದ ಶಿವರಾಮಯ್ಯನಿಗೆ ಲಲಿತಮ್ಮ ಬುದ್ಧಿ ಕಲಿಸಿದ ಬಗೆ, ಶಿವರಾಮಯ್ಯ ಏನು ಮಾಡಿದ ಎಂಬುವುದನ್ನು ಯಾರಿಗೂ ಹೇಳದೆ ತನ್ನ ಹಾಗೂ ತನ್ನ ಗಂಡನ ಸ್ನೇಹಿತರ ಗೌರವವನ್ನು ಕಾಪಾಡುತ್ತಾಳೆ. ಲಲಿತೆಯು ಸಂಸಾರವನ್ನು ಬೀದಿಗೆ ಬರದ ಹಾಗೆ ನಿಭಾಯಿಸುವ ಜಾಣ್ಮೆಯನ್ನು ಸ್ಥಳೀಯತೆ ರೂಪವೆಂದು ತಾತ್ವೀಕರಿಸಬಹುದು.

ಕುಟುಂಬವನ್ನು ಬೆಸೆಯುವ ನಿಲುವನ್ನು ನಿರೂಪಿಸುವ ಸರಸ್ವತಿದೇವಿ ಗೌಡರ 'ಭೂಮಿ ಬಿರಿಯಲಿಲ್ಲ' ಕತೆಯು ಲಲಿತಳ ಮೂಲಕ ಗಂಡನಿಂದ ಛಿದ್ರವಾದ ಕುಟುಂಬದ ಸ್ಥಿತಿಯನ್ನು ಪುನಃ ಬೆಸೆಯುವ ತಾತ್ವಿಕತೆಯನ್ನು ಸ್ಥಳೀಯತೆಯ ಧಾರೆಯಲ್ಲಿ ಚರ್ಚಿಸುತ್ತದೆ. ಲಲಿತ ಹಾಗೂ ವಿಶ್ವನಾಥ ದುಡಿದು ಗಳಿಸಿದ ಸಂಪತ್ತಿನಿಂದ ಸ್ವಂತವಾದ ಫ್ಯಾಕ್ಟರಿಯನ್ನು ತೆರೆಯುತ್ತಾರೆ. ವಿಶ್ವನಾಥ ಹೆಂಡತಿಯ ಮೇಲಿನ ಗಮನಕ್ಕಿಂತ ಕೆಟ್ಟ ಚಟಗಳು ಪ್ರಧಾನವಾಯಿತು. ಫ್ಯಾಕ್ಟರಿಯ ಕೆಲಸವೆಂದು ರಾತ್ರಿಮನೆಗೆ ಬರುವುದನ್ನೆ ಬಿಟ್ಟ ವಿಶ್ವನಾಥ ಅನೇಕ ವ್ಯಸನಗಳಿಗೆ ಒಳಗಾದನು. ಲಲಿತೆ ಗಂಡನನ್ನು ನಂಬಿಕೊಂಡು ಬದುಕು ನಡೆಸಿದಳು. ವಿಶ್ವನಾಥ ಗಳಿಸಿದ ಹಣವೆಲ್ಲ ಕಳೆದುಕೊಂಡ ಮೇಲೆ ಹೆಂಡತಿಯ ಆಭರಣವೆಲ್ಲ ಕದ್ದು ಮಾರಾಟ ಮಾಡಿದ ವಿಚಾರ ಹೆಂಡತಿಗೆ ತಿಳಿದಾಗ ಸುಳ್ಳು ಸುಳ್ಳು ನೆಪಹೇಳಿ ಜಾರಿಕೊಂಡ. ಆದರೆ ಕೆಲವು ದಿನಗಳಲ್ಲಿ ಲಲಿತಗೆ ವಿಶ್ವನಾಥನ ಕೆಟ್ಟ ಚಟಗಳು, ಅನೈತಿಕ ಸಂಬಂಧಗಳೆಲ್ಲ ತಿಳಿದಾಗ ವಿಶ್ವನಾಥ ಕುಸಿದು, ಜ್ವರಕ್ಕೆ ತುತ್ತಾದ. ಲಲಿತ ತನ್ನ ಗಂಡನ ತಪ್ಪುಗಳನೆಲ್ಲ ಮರೆತು ಉಪಚರಿಸುತ್ತಾಳೆ. ಇದೇ ಸಂದರ್ಭದಲ್ಲಿ ವಿಶ್ವನಾಥನಿಗೆ ಸಾಲನೀಡಿದ ವ್ಯಕ್ತಿ ಕೋರ್ಟಿನ ಮೂಲಕ ಫ್ಯಾಕ್ಟರಿಯನ್ನು ಜಪ್ತಿ ಮಾಡುತ್ತಾನೆಂದು ತಿಳಿದು ತನ್ನ ತವರು ಮನೆಯಿಂದ ಹಣ ತಂದು ಫ್ಯಾಕ್ಟರಿಯನ್ನು ಉಳಿಸಿಕೊಳ್ಳುತ್ತಾಳೆ ಹಾಗೂ ಗಂಡನನ್ನು ಉಪಚರಿಸಿ ಸ್ಥಿತಿವಂತನಾಗಿ ಮಾಡುತ್ತಾಳೆ.

ಈ ಕತೆಯಲ್ಲಿ ಅಭಿವ್ಯಕ್ತವಾದ ಲಲಿತೆಯ ಗುಣಾತ್ಮಕ ಮನಸ್ಸು ಹಾಗೂ ಗಂಡನ ತಪ್ಪುಗಳನ್ನು ಮರೆತು ಕುಟುಂಬವನ್ನು ರಕ್ಷಿಸುವ ಗುಣವನ್ನು ಸ್ಥಳೀಯತೆಯ ಸತ್ವವೆಂದು ಕರೆಯಬಹುದು.

ವಸಾಹತುಶಾಹಿಯ ಪ್ರಭಾವದಿಂದ ಮುಂಬೈ ಕರ್ನಾಟಕ ಭಾಗದ ಸಾಮಾಜಿಕ

ಸ್ಥಿತ್ಯಂತರಗಳಿಗೆ ಸಂಬಂಧಿಸಿದಂತೆ ಬೆಳಕು ಚೆಲ್ಲುವ, ಪಾಶ್ಚಾತ್ಯ ಜೀವನ ಕ್ರಮವನ್ನು ಅನುಕರಣೆ ಮಾಡುತ್ತಿರುವ ಭಾರತೀಯರ ಮನೋಭಾವವನ್ನು ಮಂಡಿಸುವ ಹಾಗೂ ಹಿಂದು ವೈದಿಕ ಸಂಪ್ರದಾಯ ವಿವಾಹ ವ್ಯವಸ್ಥೆಯ ಪರಿಸರವನ್ನು ಸ್ಥಳೀಯತೆಯ ನೆಲೆಯಲ್ಲಿ ಬೆಸೆಯುವ ಮೂಲಕ ಚರ್ಚಿಸುವ ಕತೆ ಕೆರೂರು ವಾಸುದೇವಾಚಾರ್ಯರ 'ತೊಳೆದ ಮುತ್ತು'.

ಪಾಶ್ಚಾತ್ಯ ಜೀವನ ವಿನ್ಯಾಸವನ್ನು ಸ್ಥಳೀಯ ಬದುಕಿನ ಸತ್ವದೊಂದಿಗೆ ಸಂಕರವಾಗಿಸುವ ಮೂಲಕ ಗಂಡು ಹೆಣ್ಣನ್ನು ಒಟ್ಟಿಗೆ ಬೆಸೆಯುವ ತಾತ್ವಿಕತೆಯನ್ನು ಹೊಂದಿರುವ ಕತೆಯು ವೈದಿಕ ವಿವಾಹ ವ್ಯವಸ್ಥೆಯನ್ನು ಮೀರುವ ಆಶಯವನ್ನು ಸುಧಾರಣೆಯ ನೆಲೆಯಲ್ಲಿ ಮಂಡಿಸುತ್ತದೆ. ಮಾಧವನ ಲಗ್ನವನ್ನು ವಿಚಾರವಾಗಿ ಮಾಧವನ ತಂದೆ ಸುಬ್ಬರಾಯರು ಗುಂಡಕ್ಕ ಎಂಬ ಕನ್ಯೆಯನ್ನು ನೋಡಿ ಮಾಧವನ ಲಗ್ನವನ್ನು ನಿರ್ಧರಿಸುತ್ತಾರೆ. ಮಾಧವ ಪಾಶ್ಚಾತ್ಯ ಶಿಕ್ಷಣ ಹಾಗೂ ಜೀವನ ವಿನ್ಯಾಸವನ್ನು ನೆಚ್ಚಿಕೊಂಡವನಾಗಿದ್ದರಿಂದ ತಂದೆಯ ನಿರ್ಧಾರವನ್ನು ನಿರಾಕರಿಸುತ್ತಾನೆ, ಆದರೆ ಒತ್ತಡಕ್ಕೆ ಮಣಿದು ಇಷ್ಟವಿಲ್ಲದಿದ್ದರೂ ಗುಂಡಕ್ಕನನ್ನು ಲಗ್ನವಾಗುತ್ತಾನೆ. ಲಗ್ನವಾದ ಮೇಲೆ ಮಾಧವ ತನ್ನ ಓದು, ಉದ್ಯೋಗವೆಂದು ನಗರ ಸೇರಿಕೊಂಡ ಮೇಲೆ ಗುಂಡಕ್ಕನನ್ನು ದೂರಮಾಡುತ್ತಾನಲ್ಲದೆ ಅವಳೊಂದಿಗೆ ಸೇರಿಕೊಳ್ಳಲು ನಿರಾಕರಿಸುತ್ತಾನೆ. ಈ ನಡುವೆ ಸುಧಾರಣಾವಾದಿಗಳ ಪ್ರಭಾವಕ್ಕೆ ಒಳಗಾಗಿ ಪಾಶ್ಚಾತ್ಯ ಜೀವನ ಕ್ರಮವನ್ನು ಅನುಕರಣೆ ಮಾಡುತ್ತಿದ್ದ ಸುಬ್ಬರಾಯರ ಸಂಬಂಧಿ ಶೇಷಗಿರಿ ನಾಯಕರು ಗುಂಡಕ್ಕನನ್ನು ಚಂದ್ರಭಾಗ ಎಂಬ ಹೆಸರಿನ ಮೂಲಕ ಪಾಶ್ಚಾತ್ಯ ಜೀವನ ಶೈಲಿಯ ಅನುಕರಣೆಯ ಹುಡುಗಿಯಾಗಿ ಮಾಧವನಿಗೆ ಪರಿಚಯಿಸುವ ಮೂಲಕ ಮಾಧವ ಹಾಗೂ ಗುಂಡಕ್ಕನನ್ನು ಒಂದುಗೂಡಿಸುತ್ತಾರೆ. ಕತೆಯಲ್ಲಿ ಗಂಡು-ಹೆಣ್ಣುಗಳನ್ನು ಒಟ್ಟುಗೂಡಿಸಿ ಸಂಸಾರವನ್ನು ಬೆಸೆಯಲು ಪಾಶ್ಚಾತ್ಯ ಜೀವನ ಮೀಮಾಂಸೆಯನ್ನು ನಮ್ಮ ಸ್ಥಳೀಯ ಜೀವನ ನಡೆಯೊಂದಿಗೆ ಸಂಕರವಾಗಿಸಿದನ್ನು ಗುರುತಿಸಬಹುದು. ಕತೆಯು ವೈದಿಕ ವಿವಾಹ ಸಂಪ್ರದಾಯವನ್ನು ಮೀರುವ ಹಾಗೂ ಆ ಕಾಲಮಾನದಲ್ಲಿ ಮುಂಬೈ ಕರ್ನಾಟಕದ ಮೇಲಾದ ಸುಧಾರಣವಾದದ ಪ್ರಭಾವವನ್ನು ಅತ್ಯಂತ ಸತ್ವಪೂರ್ಣವಾಗಿ ಮಂಡಿಸುವ ಜೊತೆಗೆ ಸ್ಥಳೀಯತೆಯ ನೆಲೆಯನ್ನು ನಿರೂಪಿಸುತ್ತದೆ.

ಕಮಲದಾನಿಯವರ 'ಬೆಂಡೋಲೆ' ಕತೆಯು ಗಂಡ ಹೆಂಡತಿ ಒಬ್ಬರನೊಬ್ಬರು ಅರ್ಥ ಮಾಡಿಕೊಂಡು ಬದುಕುವ ತಾತ್ವಿಕತೆಯನ್ನು ನಮ್ಮ ನೆಲದ ಮೀಮಾಂಸೆಯೊಂದಿಗೆ ನಿರೂಪಿಸುತ್ತದೆ. ವಸಾಹತುಶಾಹಿಯು ರೂಪಿಸಿದ ಕೋರ್ಟುಗಳಲ್ಲಿ ಕಾರ್ಯನಿರ್ವಹಿಸುವ

ವಕೀಲರು ತಮ್ಮ ಕೆಲಸ ಕಾರ್ಯಗಳಿಂದ ತಮ್ಮ ಸಂಸಾರದ ಕಡೆಗೆ ಗಮನ ನೀಡಲು ಸಾಧ್ಯವಾಗದ ಸ್ಥಿತಿಯನ್ನು ಅನುಸಂಧಾನ ಮಾಡುವ ಕತೆಯು ಆನಂದರಾಯನ ಮೂಲಕ ಅಭಿವ್ಯಕ್ತಿಸುತ್ತದೆ.

ಆನಂದರಾಯ ವಕೀಲನಾಗಿ ತನ್ನ ವ್ಯವಹಾರದಲ್ಲಿಯೇ ತಲ್ಲೀನನಾಗಿಯೇ ಇರುತ್ತಿದ್ದ, ಆನಂದರಾಯನ ಹೆಂಡತಿ ರಮಾಬಾಯಿ ತನ್ನ ಆಸೆಗಳಲ್ಲಿ ಒಂದಾದ ಬೆಂಡೋಲೆಯನ್ನು ಕೊಡಿಸಬೇಕೆಂದು ಕೇಳಿಕೊಂಡಿದ್ದಳು. ಆನಂದರಾಯ ಕೆಲಸದ ನಡುವೆ ಹೆಂಡತಿಯ ಆಸೆಯನ್ನು ಪೂರೈಸಲಾಗಲಿಲ್ಲ. ಆದರೆ ಮಳೆಗಾಲದ ಒಂದು ದಿನ ಬೆಂಡೋಲೆ ತರಲು ಅಂಗಡಿಗೆ ತೆರಳಿದ, ಈ ಸಂದರ್ಭದಲ್ಲಿ ರಮಾಬಾಯಿ ಗಂಡನ ಕೋರ್ಟಿನ ಕಾಗದ ಪತ್ರವನ್ನು ಕಂಡವಳೇ ಅವುಗಳನ್ನು ಕೈಗೆ ತೆಗೆದುಕೊಂಡು ನೋಡಿದಳು. ಅದರಲ್ಲಿದ್ದ ಸುಂದರವಾದ ಹೆಣ್ಣಿನ ಫೋಟೋ ನೋಡಿದವಳಿಗೆ ಬೇಸರ, ನೋವು, ಸಂಕಟ ಹಾಗೂ ಗಂಡನ ಬಗ್ಗೆ ಅನುಮಾನ ಹುಟ್ಟಿಕೊಂಡಿತು. ಆನಂದರಾಯ ಕೆಲಸ ಕೆಲಸವೆಂದು ಮನೆಯಿಂದ ಹೋಗುವುದು, ರಾತ್ರಿ ತಡವಾಗಿ ಬರುವುದು, ಬೈಯುವುದಕ್ಕೆಲ್ಲ ಕಾರಣವನ್ನು ಲೆಕ್ಕ ಹಾಕಿ ರಮಾಬಾಯಿ ನೊಂದಳು, ಆನಂದರಾಯ ಹೆಂಡತಿಗಾಗಿ ಬೆಂಡೋಲೆಯನ್ನು ಮಾಡಿಸಿ, ಅವಳ ಆನಂದವನ್ನು ಕಾಣಬೇಕೆಂದು ರಮಾಬಾಯಿಯನ್ನು ಕರೆದು 'ಬೆಂಡೋಲೆ ಮಾಡ್ಸಿ ತರಬೇಕಾದ್ರೂ ಇಷ್ಟು ತಡಾ ಆಯಿತು'. ಇಲ್ದಿದ್ರೆ ಲಗೂ ಬರ್ತಿದ್ದೆ' ಎಂದಾಗ ರಮಾಬಾಯಿ ಗಂಡನ ಮೇಲೆ ಕೋಪ ಅನುಮಾನದಿಂದ ಯಾರಿಗಾಗಿ ಬೆಂಡೋಲೆ ಮಾಡಿಸಿದ್ರಿ ಎಂದು ಸುಂದರವಾದ ಹೆಣ್ಣಿನ ಫೋಟೋ ಆನಂದರಾಯನ ಮುಖದ ಮುಂದೆ ಹಿಡಿದಾಗ ಆನಂದರಾಯ ಸಂಕಟದಿಂದ ಈ ಫೋಟೋ ನನ್ನ ಲಗ್ನಗಿಂತ ಮೊದಲು ಸತ್ತಳು ಎಂದೆನಲ್ಲ ನನ್ನ ತಂಗಿಯ ಫೋಟೋ, ನಿನ್ನೆ ಸಿಕ್ಕಿತು ಕಟ್ಟು ಹಾಕಿಸಬೇಕು ಅಂತ ತಂದು ಇಟ್ಟಿದ್ದೇನೆ ಎಂದಾಗ, ರಮಾಭಾಯಿ ತನ್ನ ತಪ್ಪುಗಳನ್ನು ಅರಿತುಕೊಂಡು ಗಂಡನ ಕಾಲಿಗೆ ಬಿದ್ದು ಕ್ಷಮೆ ಬೇಡುತ್ತಾಳೆ. ರಮಾಬಾಯಿಯ ಅನುಮಾನದಂತಹ ಮನಸು ತಿಳಿಯಾಗಿ ಒಬ್ಬರನೊಬ್ಬರು ಅಪ್ಪಿಕೊಳ್ಳುತ್ತಾರೆ. ಕತೆಯು ಗಂಡ ಹೆಂಡತಿ ಇಬ್ಬರು ಅನುಮಾನ ಪಡದೆ ಸರಿಯಾಗಿ ಅರ್ಥ ಮಾಡಿಕೊಂಡು ಬದುಕಬೇಕೆಂದು, ಕಂಡಿದನ್ನು ಕೇಳಿದನ್ನು ಪರಾಮರ್ಶಿಸಿ ನೋಡಬೇಕೆಂಬ ನಮ್ಮ ನೆಲದ ತಿಳುವಳಿಕೆಯನ್ನು ಗಂಡ ಹೆಂಡತಿಯನ್ನು ಬೆಸೆಯುವ ತಾತ್ವಿಕತೆಯಲ್ಲಿ ಮಂಡಿಸುತ್ತದೆ. ಈ ಅಭಿವ್ಯಕ್ತಿಯನ್ನೆ ಸ್ಥಳೀಯತೆ ಎಂದೂ ಕರೆಯಬಹುದು.

'ನವರತ್ನದ ಕಡಗ' ಎಂಬ ಶಾರದಾ ಜಡೆಯವರ ಕತೆಯು ಎರಡು ಕುಟುಂಬವನ್ನು

ಜಾತಿ, ಧರ್ಮ, ಲಿಂಗಭೇದವನ್ನು ಮೀರಿ ಬೆಸೆಯುವ ಸ್ಥಳೀಯ ಅಭಿವ್ಯಕ್ತಿಯನ್ನು ಅನುಸಂಧಾನ ಮಾಡುತ್ತದೆ. ರಾಯರ ಮನೆಯಲ್ಲಿ ಮಗನಂತೆ ಕೆಲಸ ಕಾರ್ಯಗಳನ್ನು ಮಾಡುತ್ತ ಎಲ್ಲರಿಗೂ ನಂಬಿಕೆಯ ರೂಪವಾಗಿದ್ದ ರಾಮಣ್ಣ, ರಾಯರ ಹೆಂಡತಿಯ ನವರತ್ನದ ಕಡಗ ಕಾಣಾದಾದಾಗ ರಾಮಣ್ಣನೇ ಅಪರಾಧಿಯಾಗುತ್ತಾನೆ. ರಾಯರು ರಾವಣನಿಗೆ "ರಾಮಣ್ಣಾ! ನಿಜ ಹೇಳಿಬಿಡು, ತಪ್ಪು ಮಾಡಿ, ಇಲ್ಲಾ ಅಂದರೆ ಸುಮ್ಮನೆ ಕೇಳಿಬಿಡುವುದಕ್ಕೆ ಆಗುತ್ತದೆಯೇ? ಅನ್ಯಾಯವಾಗಿ ಕೆಟ್ಟು ಹೋಗಬೇಡ. ಸುಮ್ಮನೆ ತಂದಿಟ್ಟು ಬಿಡು ತಿಳಿತೇ?" ಎಂದು ಹೇಳಿದಾಗ ರಾಮಣ್ಣ ತಾನು ಅಪರಾಧಿಯಲ್ಲ ಎಂದು ಬೇಡಿಕೊಂಡ ರಾಯರ ಹೆಂಡತಿಯ ನಂಬಲಿಲ್ಲ, ಹೆಂಡತಿಯ ಒತ್ತಾಯಕ್ಕೆ ಕೋರ್ಟಿನ ಮೂಲಕ ಶಿಕ್ಷೆ ವಿಧಿಸಿದರು, ರಾಮಣ್ಣ ಅಪರಾಧಿಯಾದ, ಅವನ ಹೆಂಡತಿ ಮಕ್ಕಳು ತಬ್ಬಲಿಯಾದರು. ರಾಯರು ರಾಮಣ್ಣ ಅಪರಾಧಿ ಎಂದೂ ಒಪ್ಪಿಕೊಳ್ಳಲಿಲ್ಲ. ಅವನ ಚಿಂತೆಯಲ್ಲೆ ರೋಗಕ್ಕೆ ತುತ್ತಾದರೂ, ಕೆಲವು ದಿನಗಳಲ್ಲಿ ಉಪ್ಪಿನಕಾಯಿಯ ಮರಿಗೆಗೆ ಕೈಹಾಕುವಾಗ ನವರತ್ನದ ಕಡಗ ಕಂಡ ರಾಯರ ಹೆಂಡತಿ ರಾಮಣ್ಣನಿಗಾದ ಶಿಕ್ಷೆಯನ್ನು ನೆನಪು ಮಾಡಿಕೊಂಡು ಮರುಗುತ್ತಾರೆ. ನಂತರ ರಾಮಣ್ಣನ ಮನೆಗೆ ಬಂದು ರಾಯರು ಮತ್ತು ಅವರ ಹೆಂಡತಿ ಕ್ಷಮೆ ಕೇಳುತ್ತಾರೆ. "ರಾಮಣ್ಣಾ! ಭಯಪಡಬೇಡ, ನಮ್ಮ ಮನೆಗೆ ಬಾ. ನೀನೇ ನಮ್ಮನೇ ದೇವರಪ್ಪಾ, ರಾಯರು ಸ್ವಲ್ಪವೂ ಅನುಮಾನವಿಟ್ಟಿರಲಿಲ್ಲ. ಇಂದಿಗೂ ಇಟ್ಟಿಲ್ಲ, ತಪ್ಪೆಲ್ಲಾ ನನ್ನದು. ನನ್ನ ಮಗೂ ಅಂತಾ ತಿಳಕೋತೀನಿ. ಬಾ! ರಾಮೂ!" ಎಂದು ಕರೆದಾಗ ರಾಮಣ್ಣ ಎಲ್ಲವನ್ನು ಮರೆತು ರಾಯರೊಂದಿಗೆ ಒಂದಾಗುತ್ತಾನೆ. ಕತೆಯಲ್ಲಿ ಅಭಿವ್ಯಕ್ತವಾಗುವ ರಾಯರ ನಡುವಳಿಕೆ, ರಾಮಣ್ಣನ ಪ್ರಾಮಾಣಿಕ ನಡೆ, ಅಪರಾಧಿಯಾಗಿ ರಾಮಣ್ಣ ಶಿಕ್ಷೆಯನ್ನು ಅನುಭವಿಸಿ ಬಂದರೂ ರಾಯರ ಮಾತಿಗೆ ಬೆಲೆಕೊಟ್ಟು ಪುನಃ ರಾಯರ ಮನೆಗೆ ಮಗನಾಗಿ ಸೇರಿಕೊಳ್ಳುವ ನಿಲುವುಗಳನ್ನು ಸ್ಥಳೀಯತೆ ಎಂದು ಕರೆಯಬಹುದು.

ಮುಂಬೈ ಕರ್ನಾಟಕ ಭಾಗದ ಅನೇಕ ಮೊದಲ ತಲೆಮಾರಿನ ಕತೆಗಳು ಸಂಬಂಧವನ್ನು ಗುಣಾತ್ಮಕವಾಗಿಯೇ ಬೆಸೆಯುವ ತಾತ್ವಿಕತೆಯನ್ನು ಹೊಂದಿವೆ. ವಸಾಹತುಶಾಹಿಯ ಧೋರಣೆಯಿಂದಾಗಿ ಸಾಮಾಜಿಕವಾಗಿ ಉಂಟಾದ ಬದಲಾವಣೆಯನ್ನೆ ಗ್ರಹಿಸುವ ಕತೆಗಳು ನಮ್ಮ ನೆಲದ ಸತ್ವವನ್ನು ವಸಾಹತುಶಾಹಿಯ ಪ್ರಜ್ಞೆಯಲ್ಲಿಟ್ಟು ಚರ್ಚಿಸುತ್ತದೆ. ಮುಖ್ಯವಾಗಿ ಕುಟುಂಬವನ್ನು ಬೆಸೆಯುವ ಗಂಡು ಹೆಣ್ಣುಗಳನ್ನು ಒಟ್ಟಿಗೆ ತರುವ ಆಶಯವನ್ನು ಗುರುತಿಸಬಹುದು. ವಸಾಹತುಶಾಹಿಯ ಪ್ರಜ್ಞೆ ಹಾಗೂ ಸುಧಾರಣಾ ಚಳುವಳಿಯ ಪ್ರಭಾವ

ಕತೆಗಳಲ್ಲಿ ಘನೀಕೃತಗೊಂಡಿರುವುದು ವಿಶೇಷವಾಗಿದೆ. ಸ್ಥಳೀಯತೆಯು ಈ ಭಾಗದ ಜೀವನ ಮೀಮಾಂಸೆಯನ್ನು ಪ್ರತಿನಿಧಿಸಿದರು, ವಸಾಹತುಶಾಹಿಯ ಗುಣಾತ್ಮಕ ಧೋರಣೆಯನ್ನು ಸಂಕರವಾಗಿಸಿಕೊಂಡು ನಿರೂಪಣೆಗೊಂಡಿರುವುದನ್ನು ಕಾಣಬಹುದು.

**೨. ಸ್ತ್ರೀ ಗುಣಾತ್ಮಕವಾದ ಸ್ಥಳೀಯತೆ**

ಮುಂಬೈ ಕರ್ನಾಟಕದ ಭಾಗಕ್ಕೆ ಉತ್ತರ ಭಾರತದ ಸುಧಾರಣ ಚಳುವಳಿಯ ಪ್ರಭಾವವು ಸ್ವಾತಂತ್ರ್ಯ ಹೋರಾಟದ ಭಾಗವಾಗಿ ಪರಿಚಯವಾಯಿತು. ವಸಾಹತುಶಾಹಿಯ ನೇರ ಆಳ್ವಿಕೆಯು ಒಳಪಟ್ಟಿದ್ದರಿಂದ ಇಂಗ್ಲಿಷ್ ಶಿಕ್ಷಣ ಮತ್ತು ಪಾಶ್ಚಾತ್ಯ ಸಾಹಿತ್ಯ, ಬೌದ್ಧಿಕ ಪ್ರಜ್ಞೆಯನ್ನು ಈ ಭಾಗದ ಜನರು ತನ್ನೊಳಗೆ ಇಳಿಸಿಕೊಂಡರು. ಇದರ ಪರಿಣಾಮವಾಗಿ ಒಂದು ಪ್ರಜ್ಞಾವಂತ ವರ್ಗವು ಹುಟ್ಟಿಕೊಂಡಿತು. ಈ ವರ್ಗವು ಭಾರತೀಯ ಜೀವನ ಮೀಮಾಂಸೆಯನ್ನು ಪಾಶ್ಚಾತ್ಯ ಪ್ರಜ್ಞೆಯೊಂದಿಗೆ ಸಂಕರವಾಗಿಸಿಕೊಂಡು ಗ್ರಹಿಸಲು ಆರಂಭಿಸಿತು. ಈ ಕಾಲಮಾನದಲ್ಲಿ ನಮ್ಮ ಧರ್ಮ ಹಾಗೂ ನಂಬಿಕೆಯಲ್ಲಿ ಸೇರಿಕೊಂಡಿದ್ದ ಮೂಢ ಆಚರಣೆಯನ್ನು ಪ್ರಶ್ನಿಸುವ ಜೊತೆ ಸ್ತ್ರೀ ಬದುಕಿನ ಪರಿಸರವನ್ನು ಚಿಕಿತ್ಸಾ ಮನೋಧರ್ಮದಿಂದ ನೋಡಿತು. ಸ್ತ್ರೀಯರ ಬದುಕಿನಲ್ಲಿ ಸೇರಿಕೊಂಡಿದ್ದ ಬಾಲ್ಯವಿವಾಹ, ಸತಿಪದ್ಧತಿ, ವಿಧವೆತನ, ವಿಧವಾ ವಿವಾಹ ನಿಷೇಧ, ಜಾತಿಪದ್ಧತಿ, ಮಡಿ ಮೈಲಿಗೆಯಂತಹ ಮೂಢ ಹಾಗೂ ಪುರುಷ ಕೇಂದ್ರಿತ ಆಲೋಚನೆಯನ್ನು ಪ್ರಶ್ನಿಸಿ, ಮಾನವೀಯ ನೆಲೆಯಲ್ಲಿ ಸ್ತ್ರೀ ಸಂವೇದನೆಯನ್ನು ಕಟ್ಟುವ ಕಾರ್ಯವನ್ನು ಮೊದಲ ತಲೆಮಾರಿನ ಕತೆಗಾರರು ತಮ್ಮ ಕತೆಗಳಲ್ಲಿ ಅನುಸಂಧಾನ ಮಾಡಿದರು. ಸ್ತ್ರೀ ಬದುಕಿನ ವಿನ್ಯಾಸದ ವಿವರವನ್ನು ಪುರುಷ ಲೋಕಕ್ಕೆ ಗುಣಾತ್ಮಕವಾಗಿ ಮಂಡಿಸುವ ಕತೆಗಳು ಸ್ಥಳೀಯತೆಯನ್ನು ಸ್ತ್ರೀ ಸಂವೇದನೆಯ ಮೂಸೆಯಲ್ಲಿ ಗ್ರಹಿಸುತ್ತದೆ.

ಕೆರೂರು ವಾಸುದೇವಾಚಾರ್ಯರಿಗೆ 'ಮಲ್ಲೆಸಿಯ ನೆಲ್ಲೆಯರು' ಕತೆಯು ಸುಧಾರಣವಾದದ ಧೋರಣೆಯನ್ನು ಕಾಪಿಟ್ಟುಕೊಳ್ಳುವ ಮೂಲಕ ಹೆಣ್ಣಿನ ಗುಣಾತ್ಮಕ ನಿಲುವುಗಳನ್ನೆ ಪ್ರಧಾನ ಆಶಯವಾಗಿ ಮಂಡಿಸುತ್ತದೆ. ಮಲ್ಲೆಸಿಯು ಪುರುಷ ಲೋಕದ ಮೀಮಾಂಸೆಯನ್ನು ಒಳಗೊಂಡಿದ್ದರೂ ಸಹಾ ಅನೇಕ ಹೆಣ್ಣುಗಳ ಮುಂದೆ ದಡ್ಡನಾಗಿಯೇ ಕಾಣಿಸುತ್ತಾನೆ. ಲಗ್ನವಾಗಲು ಕನ್ಯೆ ನೋಡಿಕೊಂಡು ಬರಲು ಹೊರಟ ಮಲ್ಲೆಸಿಗೆ ಸಿಗುವ ಕನ್ಯೆಗಳು ಮಲ್ಲೆಸಿಯನ್ನು ತನಗೆ ಬೇಕಾದ ಗಂಡನಾಗಿಸಿಕೊಳ್ಳುವ ಪ್ರಶ್ನೆಯನ್ನೆ ಹಾಕುತ್ತಾರೆ.

ಮಲ್ಲೆಸಿಯು ಇರಸಂಗಯ್ಯನವರ ಮಠದಲ್ಲಿ ಕಂಡ ಹುಡುಗಿಯನ್ನು ಲಗ್ನವಾಗುತ್ತಿಯ

ಎಂದಾಗ ಆ ಹುಡುಗಿಯು "ಮದುವೆಯಾದ ಬಳಿಕ ನಾನ ಏಳೆಂದು ಹೇಳಿದಾಗ ನೀವು ಏಳಬೇಕು. ಕೂಡೆಂದಾಗ ಕೂಡಬೇಕು, ಈ ಮಾತಿಗೆ ಒಪ್ಪಿಗೆಯೇ?" ಎನ್ನುತ್ತಾಳೆ.

ಸಂಗವ್ವತ್ತಿಯ ಮನೆಯಲ್ಲಿ ಮಲ್ಲೆಸಿಯ ತನ್ನ ಲಗ್ನದ ವಿಚಾರವೆತ್ತಿದಾಗ, ಸಂಗವ್ವತ್ತಿ ಲಗ್ನಕ್ಕೆನು ಕನ್ಯೆಯ ಬರವೇ ನಮ್ಮ ಮನೆಯಲ್ಲಿಯೇ ೧೮ ವರ್ಷವಾದ ನೀಲಗಂಗೆ ಇದ್ದಾಳೆ. ಲಗ್ನವಾಗುವಿಯಂತೆ ಎಂದಾಗ ನೀಲಗಂಗೆ ಮಲ್ಲೆಸಿಯನ್ನು ಕಂಡು, ಕಂಡವರನ್ನು ಲಗ್ನವಾಗಲು ಆಗುವುದಿಲ್ಲ. "ಇವ ಗಂಡನೇ! ಹೀಗೆ ತಂಬಾಕು ತಿಂದು ಪಿಚಿಪಿಚಿಯಾಗಿ ಉಗುಳುವ ಗಂಡನನ್ನು ಯಾರು ಮಾಡಿಕೊಂಡಾರು" ಎನ್ನುತ್ತಾಳೆ, ಕತೆಯು ಪುರುಷ ಗ್ರಹಿಕೆಯು ಹೆಣ್ಣನ್ನು ಲಗ್ನವಾಗುವಾಗ ಅವಳನ್ನು ಪರೀಕ್ಷಿಸಿ, ಗುಣಗಳನ್ನು ಅವಲೋಕಿಸಿ ನಿರ್ಧರಿಸುವ ಅಭಿವ್ಯಕ್ತಿಯ ಕ್ರಮವನ್ನು ಬದಲಿಸಿ ಹೆಣ್ಣು ಲಗ್ನವಾಗಲು ಬಂದ ಗಂಡಿನ ಗುಣವನ್ನು ಅವಲೋಕಿಸಿ ನಿರಾಕರಿಸುವ ಸ್ತ್ರೀ ಪರವಾದ ತಾತ್ವಿಕತೆಯನ್ನು ಮಂಡಿಸುತ್ತದೆ. ಗಂಡು ಕನ್ಯೆಯ ದೃಷ್ಟಿಯಲ್ಲಿ ದಡ್ಡನಂತೆಯೇ ಕಾಣುತ್ತಾನೆ.

ಮಲ್ಲೆಸಿಯನ್ನು ಸಮಾಜ ದಡ್ಡನೆಂದು ಅಪಹಾಸ್ಯ ಮಾಡುತ್ತಿರುವಾಗ ಅವನ ಪರಿಸರದಲ್ಲಿ ಇದ್ದ ಗಿರಿಬಾಲೆ ಎಂಬ ಹುಡುಗಿ ಮಲ್ಲೆಸಿಯ ದಡ್ಡತನವನ್ನು ಗುರುತಿಸಿ ಅವನನ್ನು ಬುದ್ಧಿವಂತನಾಗಿ ಪರಿವರ್ತಿಸಲು ಯೋಚಿಸುತ್ತಾಳೆ. ಮಲ್ಲೆಸಿಗೆ ಅಕ್ಷರ ಜ್ಞಾನವನ್ನು, ವ್ಯವಹಾರ ಜ್ಞಾನವನ್ನು, ಲೋಕ ಜ್ಞಾನವನ್ನು ಕಲಿಸುವ ಮೂಲಕ ಬುದ್ಧಿವಂತನಾಗಿ ಮಾಡಿ ನಂತರದಲ್ಲಿ ತಾನೇ ಲಗ್ನವಾಗುತ್ತಾಳೆ. ಮಲ್ಲೆಸಿ ಗೌಡರ ಮಂತ್ರಿಯಾಗಿ ಬದುಕನ್ನು ಆರಂಭಿಸುತ್ತಾನೆ.

ಕತೆಯು ಹೆಣ್ಣು ಒಬ್ಬಳ ಬದುಕನ್ನು ಕಟ್ಟುವ ಚಿಂತನೆಯನ್ನು ಗಿರಿಬಾಲೆಯ ಮೂಲಕ ಮಂಡಿಸುತ್ತದೆ. ಲೋಕವನ್ನು ತಿಳಿಯದ ಮಲ್ಲೆಸಿಯನ್ನು ಸಾಮಾಜೀಕರಣಕ್ಕೆ ಒಳಪಡಿಸಿ ಸರಿದಾರಿಗೆ ತರುವ ಮೂಲಕ ಬುದ್ಧಿವಂತನಾಗಿಸಿ ಲಗ್ನವಾಗುವ ತಾತ್ವಿಕತೆಯನ್ನು ಸ್ಥಳೀಯತೆ ಎಂದು ಕರೆಯಬಹುದು. ಈ ಕತೆಯಲ್ಲಿ ಸುಧಾರಣ ಚಳುವಳಿಯ ದಟ್ಟವಾದ ಪ್ರಭಾವವಿದೆ. ಪುರುಷ ಪ್ರಧಾನವಾದ ಸಮಾಜದಲ್ಲಿ ಹೆಣ್ಣು ಒಬ್ಬಳು ಗಂಡಿಗೆ ಜ್ಞಾನವನ್ನು ಕಲಿಸುವ ನಿಲುವು, ಲಗ್ನವಾಗಲು ಬಂದ ಗಂಡಿಗೆ ಕನ್ಯೆಯರು ಕೇಳುವ ಪ್ರಶ್ನೆ ಹಾಗೂ ನಿರಾಕರಣೆಗಳು ಮತ್ತು ಹೆಣ್ಣಿನ ಬದುಕಿನ ನಡೆಗಳನ್ನು ಗುಣಾತ್ಮಕವಾಗಿ ಅಭಿವ್ಯಕ್ತಿಸುವ ಬಗೆಯನ್ನೆ ಸ್ತ್ರೀ ಗುಣಾತ್ಮಕ ಸ್ಥಳೀಯತೆ ಎಂದು ಕತೆಯಲ್ಲಿ ಗುರುತಿಸಬಹುದು.

ಸ್ತ್ರೀ ಸ್ವಾತಂತ್ರ್ಯ ಸಮಾನತೆಯ ಧಾರೆಯಲ್ಲಿ ಸ್ತ್ರೀಯರ ಸಮಸ್ಯೆಯನ್ನು ಗುರುತಿಸುವ ಹಾಗೂ ಪರಂಪರೆಯ ನೆಲೆಯಲ್ಲಿ ರೂಪುಗೊಂಡ ಸ್ತ್ರೀ ಲೋಕದ ಗ್ರಹಿಕೆಯನ್ನು ಹುಸಿಗೊಳಿಸಿ ಅದನ್ನು ದಾಟುವ ತಾತ್ವಿಕತೆಯನ್ನು ಮಂಡಿಸುವ ಕತೆ ಸರಸ್ವತಿ ದೇವಿಗೌಡರ 'ವಾಗ್ದತ್ತ

ವಧು' ಈ ಕತೆಯು ಸ್ತ್ರೀಯೊಬ್ಬಳ ಅಸ್ತಿತ್ವವನ್ನು ಹಾಗು ಸಂವೇದನೆಯನ್ನು ಶೈಲಾಳ ಮೂಲಕ ಅಭಿವ್ಯಕ್ತಿಸುತ್ತದೆ. ಶೈಲಾ ಚಿಕ್ಕ ಮಗುವಾಗಿರುವಾಗಲೇ ಪ್ರಕಾಶನ ವಧುವೆಂದು ಹಿರಿಯರು ನಿರ್ಧರಿಸುತ್ತಾರೆ. ಶೈಲಾ ಹಾಗು ಪ್ರಕಾಶ ಗಂಡ ಹೆಂಡತಿಯಂತೆ ಆಡಿ-ಬೆಳೆಯುತ್ತಾರೆ. ಮುಂದೆ ಪ್ರಕಾಶ ವಿದ್ಯಾಭ್ಯಾಸಕ್ಕೆಂದು ವಿದೇಶಕ್ಕೆ ತೆರಳಿ ಅಲ್ಲಿಯೇ ವೈದ್ಯನಾಗುತ್ತಾನೆ. ಕೆಲವು ದಿನಗಳ ನಂತರದಲ್ಲಿ ಅಲ್ಲಿಯ ಹುಡುಗಿಯನ್ನೆ ಪ್ರೀತಿಸಿ ಲಗ್ನವಾಗುತ್ತಾನೆ. ಆದರೆ ಈ ಲಗ್ನದ ವಿಚಾರವನ್ನು ತನ್ನ ಮನೆಯವರಿಗೆ ಹೇಳದೆ ಮುಚ್ಚಿಡುತ್ತಾನೆ. ಮನೆಗೆ ಬಂದಾಗ ಪ್ರಕಾಶನ ಅಜ್ಜಿ ಶೈಲಾಳನ್ನು ಲಗ್ನವಾಗಬೇಕೆಂದು, ಅವಳು ನಿನ್ನ ವಾಗ್ದತ್ತ ವಧುವೆಂದು ನೆನಪು ಮಾಡುತ್ತಾಳೆ. ಪ್ರಕಾಶ ತಾನು ಲಗ್ನವಾಗಿರುವ ವಿಚಾರ ತಿಳಿಸಿದರೂ ಅಜ್ಜಿ ಒಪ್ಪಿಕೊಳ್ಳದೆ ಶೈಲಾಳನ್ನು ನಿನ್ನ ವಧುವೆಂದು ಹಿರಿಯರು ನಿರ್ಧರಿಸಿದ್ದಾರೆ. ಲಗ್ನವಾಗಲೇ ಬೇಕೆಂದು ಪಟ್ಟು ಹಿಡಿಯುತ್ತಾಳೆ. ಶೈಲಾ ಪ್ರಕಾಶನ ಲಗ್ನದ ಯಜಮಾನಿಕೆಯ ಮೀಮಾಂಸೆಯನ್ನು ಖಂಡಿಸಿ, ತನ್ನ ನಿಜವಾದ ಪ್ರೀತಿಯ ನೆಲೆಗಳನ್ನು ಪ್ರಕಾಶನ ಮುಂದಿಡುತ್ತ ತನ್ನ ಬದುಕನ್ನು ತಾನೇ ಕಟ್ಟಿ ಕೊಳ್ಳುತ್ತೇನೆ, ನಿನ್ನ ಹಂಗು ಬೇಡವೆಂದು ಹೊರಕ್ಕೆ ಬರುತ್ತಾಳೆ. ಕತೆಯಲ್ಲಿ ನಿರೂಪಣೆಗೊಳ್ಳುವ ಹೆಣ್ಣಿನ ವಾಗ್ದಾನವು ಹೆಣ್ಣಿನ ಜೀವನದ ಮೇಲೆ ಉಂಟು ಮಾಡುವ ಪರಿಣಾಮವನ್ನು ಪರಂಪರೆಯ ನೆಲೆಯಲ್ಲಿ ವಿವರಿಸುತ್ತದೆ. ಶೈಲಾ ಪುರುಷ ಲೋಕದ ವರ್ತನೆಯನ್ನು ಖಂಡಿಸುವ ಮೂಲಕ ತನ್ನ ಪ್ರೀತಿ, ನಂಬಿಕೆ, ಮತ್ತು ನಡೆಯನ್ನು ಉತ್ತಮವೆಂದು ಲೋಕದ ಮುಂದಿಡುವ ಮೂಲಕ ಸ್ವಂತ ಬದುಕನ್ನು ಕಟ್ಟಿಕೊಳ್ಳುವ ಕಡೆಗೆ ನಡೆಯುತ್ತಾಳೆ. ಈ ರೀತಿಯ ತಾತ್ವಿಕ ನಿಲುವುಗಳನ್ನು ಸ್ತ್ರೀ ಗುಣಾತ್ಮಕ ಸ್ಥಳೀಯತೆ ಎಂದು ಕರೆಯಬಹುದು.

ಮುಂಬೈ ಕರ್ನಾಟಕದ ಭಾಗದಲ್ಲಿ ಆಚರಣೆಯಲ್ಲಿ ಇದ್ದ ವೈದಿಕ ವಿವಾಹ ವ್ಯವಸ್ಥೆಯು ಹೆಣ್ಣಿನ ಸಂವೇದನೆಯನ್ನು ಹತೋಟಿಯಲ್ಲಿ ಇಟ್ಟುಕೊಂಡಿತ್ತು ಮತ್ತು ಮಮತೆಯ ನೆಲೆಯಲ್ಲಿ ಕಾಣುತ್ತಿತ್ತು. ಈ ಬಗೆಯ ಸಾಂಪ್ರದಾಯಿಕ ವಿವಾಹ ವ್ಯವಸ್ಥೆಯ ರೂಪುರೇಷೆಗಳನ್ನು ಚರ್ಚೆಗೆ ಒಳಪಡಿಸುವ ಮೂಲಕ ಹೆಣ್ಣಿನ ಅಭಿವ್ಯಕ್ತಿಯನ್ನು ಪುರುಷನಿಗೆ ಸಮಾನಾಗಿ ಗುರುತಿಸುವ ತಾತ್ವಿಕತೆಯನ್ನು ಮಂಡಿಸುವ ಕತೆ ಶಾರದಾ ಜಡೆಯವರ 'ಕನ್ಯಾರ್ಥಿ' ಕತೆಯು ವಿವಾಹದ ವಯಸ್ಸಿನ ಕ್ರಮವನ್ನು ಮೀರುವ ತತ್ವವನ್ನು ಗುರುತಿಸುತ್ತದೆ. ಶಾರದೆ ಹನ್ನೆರಡು ವರ್ಷ ಕಳೆದರು ಲಗ್ನವಾಗದೆ ಉಳಿದಿದ್ದಳು. ತಂದೆ ತಾಯಿ ಹಾಗೂ ಅಜ್ಜಿ ಲಗ್ನಕ್ಕಾಗಿ ಪ್ರಯತ್ನಿಸಿದರು. ಬಂದ ವರಗಳು ಶಾರದೆಯನ್ನು ಒಪ್ಪುತ್ತಿರಲಿಲ್ಲ. ಕೆಲವು ವರ್ಷಗಳು ಕಳೆದ ಮೇಲೆ ಸುಬ್ಬುರಾಯರು ತನ್ನ ಮಗನೊಂದಿಗೆ ಬಂದು ಶಾರದೆಯನ್ನು

ಎರಡನೇ ವಿವಾಹವಾಗಲು ಒಪ್ಪಿಕೊಂಡು ಹೋದರು. ಆದರೆ ಎರಡನೇ ವಿವಾಹವೆಂಬ ವಿಚಾರವನ್ನು ತಿಳಿದ ಶಾರದೆಯ ತಂದೆ ಲಗ್ನಕ್ಕೆ ಒಪ್ಪಿಗೆ ಸೂಚಿಸದೆ ಸುಮ್ಮನಾದರು ಕೆಲವು ವರ್ಷಗಳಾದ ಮೇಲೆ ಸುಬ್ಬುರಾಯನ ಮಗನೆ ಶಾರದೆಯನ್ನು ಹುಡುಕಿಕೊಂಡು ಬಂದು, ಲಗ್ನವಾದನು. ಸುಬ್ಬುರಾಯನು ಶಾರದೆಯನ್ನು ಕಂಡು 'ವಯಸ್ಸಿನ ಅಂತರವನ್ನು ತಿಳಿಯದೆ ಸೊಸೆಯಾಗುವವಳನ್ನು ಹೆಂಡತಿಯಾಗಿಸಲು ಯೋಚಿಸಿದ್ದೇ ತಪ್ಪಾಯಿತು. ಈಗ ಹೆಣ್ಣು ಗಂಡುಗಳ ವಯಸ್ಸು ಅರಿವಾಗಿದೆ ಎನ್ನುತ್ತಾನೆ. ಕತೆಯು ಬ್ರಾಹ್ಮಣ ಸಮುದಾಯದಲ್ಲಿದ್ದ ವಿವಾಹದ ಪರಂಪರೆಯನ್ನು ಸುಧಾರಣೆಯ ನೆಲೆಯಿಂದ ತಾತ್ವೀಕರಿಸುವ ಕತೆಯು ಹೆಣ್ಣಿನ ಮನೋಭಾವವನ್ನು ಗುಣಾತ್ಮಕವಾಗಿ ಚರ್ಚಿಸುತ್ತದೆ. ಈ ನಿಲುವುಗಳನ್ನು ಸ್ತ್ರೀ ಗುಣಾತ್ಮಕ ಚಿಂತನೆಯೆಂದು ಕರೆಯಬಹುದು.

ದಾ.ಬಾ. ಕುಲಕರ್ಣಿ ಅವರ 'ಕಪ್ಪು ಹುಡುಗೆ' ಕತೆಯು ಹೆಣ್ಣಿನ ಪರಂಪರೆ ಬದುಕನ್ನು ವಿಮರ್ಶೆ ಮಾಡುವ ಜೊತೆಗೆ ಸ್ತ್ರೀ ಅಸ್ಮಿತೆಯನ್ನು ನಿರೂಪಣೆ ಮಾಡುವ ಮೂಲಕ ಸ್ಥಳೀಯತೆಯನ್ನು ಅನುಸಂಧಾನ ಮಾಡುವ ಮೂಲಕ ಸ್ಥಳೀಯತೆಯನ್ನು ಅನುಸಂಧಾನ ಮಾಡುತ್ತದೆ. ಪುರುಷ ಗ್ರಹಿಕೆಯು ಹೆಣ್ಣು ವಯಸ್ಸಿಗೆ ಲಗ್ನವಾಗಬೇಕು.ಲಗ್ನವಾದ ಮೇಲೆ ಮಗುವನ್ನು ಪಡೆಯಬೇಕು ಹಾಗೂ ಮಗನಿಗೆ, ಗಂಡನಿಗೆ ತಾಯಿಯಾಗಿ, ಹೆಂಡತಿಯಾಗಿ ಬದುಕು ಕಾಣಬೇಕು ಎಂಬ ನಿಲುವುಗಳನ್ನು ದಾಟುವ ಮೂಲಕ ಹೆಣ್ಣಿನ ಅಸ್ಮಿತೆಯನ್ನು ಕಟ್ಟುವ ಕಡೆಗೆ ಕತೆ ಹೆಜ್ಜೆ ಹಾಕುತ್ತದೆ.

ಜಾನಕಿಯು ಸುಂದರರಾಯನ ತುಂಬು ಕುಟುಂಬದಲ್ಲಿ ಬೆಳೆದಳಲ್ಲದೆ, ತನ್ನ ತಂಗಿ, ತಾಯಿಯ ತಾಯಿತನದ ಸಂದರ್ಭವನ್ನು ನೋಡಿಕೊಂಡು ಬೆಳೆದಳು. ನಾಲ್ಕು ಐದು ಹೆರಿಗೆಯಲ್ಲಿ ತಂಗಿ ಅಕ್ಕನನ್ನು ಉಪಚರಿಸಿಕೊಂಡು ಓದು ಬರಹವನ್ನು ಮುಂದುವರಿಸಿ ಜಾನಕಿ ಲಗ್ನವಾಗದೆ ಉಳಿದಳು. ಜಾನಕಿಯ ಮೈ ಬಣ್ಣ ಕಪ್ಪು ಆಗಿದ್ದರಿಂದ ಯಾರು ಜಾನಕಿಯ ಕಡೆಗೆ ನೋಡಲಿಲ್ಲ, ಓದಬೇಕೆಂದು ಹಠ ಹಿಡಿದು ಪುಣೆಯಲ್ಲಿದ್ದ ಚಿಕ್ಕಪ್ಪನ ಮನೆಯಲ್ಲಿ ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಿದಳು. ತಂದೆಯು ಹುಡುಗನ ಹುಡುಕಿ ಲಗ್ನಮಾಡುತ್ತೇನೆಂದಾಗ 'ನಾನು ಹೆರಿಗೆಯ ಕಾರಖಾನೆಯಾಗಬೇಕೆ' ಎಂದು ಪ್ರಶ್ನಿಸಿ ಲಗ್ನವನ್ನು ನಿರಾಕರಿಸಿದಳು.

ವೈದ್ಯಶಾಸ್ತ್ರವನ್ನು ಓದಲು ಆರಂಭಿಸಿದ ಲಲಿತೆ ಹಿಂದಿರುಗಿ ನೋಡಲಿಲ್ಲ. ಓದಿ ವೈದ್ಯೆಯಾಗುವ ನಿಟ್ಟಿನಲ್ಲಿ ಎಲ್ಲ ರೀತಿಯ ಅಭ್ಯಾಸವನ್ನು ಆರಂಭಿಸಿದಳು. ವೈದ್ಯೆಯಾಗಿ ಪದವಿ ಪಡೆದ ಮೇಲೆ ಲಲಿತೆಯ ಚಿಂತನೆ ಹಾಗು ಸಂಶೋಧನೆ ಹೆಣ್ಣನ್ನು ಹೆರುವ

ಕಾರಖಾನೆಯಿಂದ ಮುಕ್ತಿಗೊಳಿಸಬೇಕು ಎನ್ನುವುದೇ ಆಗಿತ್ತು. ಲಲಿತೆ ಹೆಣ್ಣಿನ ಹೆರಿಗೆಯ ಕುರಿತಾಗಿ ಯೋಚಿಸುವ ಮೂಲಕ ಹೆಣ್ಣಿನ ಸಂತಾನ ನಿಯಂತ್ರಣದ ಶಸ್ತ್ರ ಚಿಕಿತ್ಸೆಯಂತೆ ಗಂಡಿಗೂ ಸಂತಾನ ನಿಯಂತ್ರಣದ ಶಸ್ತ್ರ ಚಿಕಿತ್ಸೆಯನ್ನು ಮಾಡುವ ಕುರಿತಾಗಿ ವೈದ್ಯರಲ್ಲಿ ಹಾಗೂ ತನ್ನ ತಾಯಿಯಲ್ಲಿ ಚರ್ಚಿಸುತ್ತಾಳೆ.

ಕತೆಯು ಹೆಣ್ಣಿನ ಬದುಕಿನಲ್ಲಿ ಸುಧಾರಣೆಯ ತಾತ್ವಿಕತೆಯನ್ನು ಮಂಡಿಸುತ್ತದೆ ಹಾಗೂ ಮಗುವನ್ನು ಹೆರುವ ಮತ್ತು ಸಂತಾನ ನಿಯಂತ್ರಣ ಮಾಡುವ ಹೊಣೆ ಗಂಡು ಹೆಣ್ಣುಗಳಿಗೆ ಸಮಾನಾಗಿದೆ ಎಂಬುವುದನ್ನು ಸ್ತ್ರೀ ಬದುಕಿನ ಗುಣಾತ್ಮಕ ಅಭಿವ್ಯಕ್ತಿಯಾಗಿ ನಿರೂಪಿಸುತ್ತದೆ.ಲಲಿತೆ ತನ್ನ ತಾಯಿ, ಅಕ್ಕ ತಂಗಿಯರು ನಾಲ್ಕು ಐದು ಹೆರುವಾಗ ಅನುಭವಿಸುವ ನೋವು, ಯಾತನೆಯನ್ನು ಗಮನಿಸಿ ಹೆಣ್ಣು ಹೆರುವ ಕಾರಖಾನೆಯಿಂದ ಹೊರಬರಬೇಕೆಂದು ನಿರ್ಧರಿಸಿ, ಓದಿ ವೈದ್ಯೆಯಾಗುತ್ತಾಳೆ. ಹಾಗೂ ಪುರುಷ ಸಂವೇದನೆಗೆ ಸಮಾನಾಗಿ ಸ್ತ್ರೀ ಸಂವೇದನೆಯನ್ನು ಪ್ರತಿಪಾದಿಸುತ್ತಾಳೆ. ಈ ಪ್ರತಿಪಾದನೆಯ ನಿಲುವುಗಳನ್ನೆ ಸ್ಥಳೀಯತೆಯ ನಿರೂಪಣೆಗಳೆಂದು ಕರೆಯಬಹುದು.

'ಅಕಳಂಕಿನಿ' ಎಂಬ ಕೃಷ್ಣ ಕೊಲ್ಹಾರ ಕುಲಕರ್ಣಿಯವರ ಕತೆಯು ಸ್ತ್ರೀಯೊಬ್ಬಳ ದಿಟ್ಟವಾದ ಧ್ವನಿಯನ್ನು ಪುರುಷ ಲೋಕಗ್ರಹಿಕೆಯ ಮುಂದಿಡುವ ಮೂಲಕ ತನ್ನ ಅಸ್ಮಿತೆಯನ್ನು ಕಾಪಾಡಿಕೊಳ್ಳುವ ತಾತ್ವಿಕತೆಯನ್ನು ಮಂಡಿಸುತ್ತದೆ. ವಿಜಯ ಮತ್ತು ಶ್ಯಾಮಾ ಪ್ರೀತಿಸುತ್ತಾರೆ. ಈ ಪ್ರೀತಿಯ ವಿಚಾರವನ್ನು ವಿಜಯಳ ತಂದೆಯ ಮೂಲಕ ತಿಳಿದುಕೊಂಡ ಶ್ಯಾಮನ ತಾಯಿ ಒಪ್ಪಿಗೆ ನೀಡಿಯೂ ಶ್ಯಾಮನನ್ನು ಕೇಳಬೇಕೆನ್ನುತ್ತಾಳೆ. ಕೆಲವು ದಿನಗಳು ಕಳೆದ ಮೇಲೆ ವಿಜಯಳ ಗುಣ ಸರಿಯಿಲ್ಲವೆಂದು, ರಾತ್ರಿ ಅನೇಕ ಹುಡುಗರು ಬಂದು ಹೋಗುತ್ತಾರೆಂದು ಊರಿನವರಿಂದ ತಿಳಿದ ಶ್ಯಾಮನ ತಾಯಿ ಶ್ಯಾಮನಿಗೆ ಪತ್ರಬರೆದು ಶ್ಯಾಮನೊಂದಿಗೆ ಚರ್ಚಿಸುತ್ತಾಳೆ. ಶ್ಯಾಮ ವಿಜಯ ಕಳಂಕಿನಿ ಎಂದು ತಿಳಿದು, ಅವಳು ಮಾಡಿದ ಮೋಸವನ್ನು ಕೇಳಬೇಕೆಂದು ವಿಜಯಳನ್ನು ಸಂಧಿಸುತ್ತಾನೆ. ಶ್ಯಾಮನ ಮಾತು ಕೇಳಿ ವಿಜಯಳಿಗೆ ನೋವಾದರೂ ಕುಗ್ಗದೆ ಅಂದು ರಾತ್ರಿ ನಡೆದ ಘಟನೆಯನ್ನು ಶ್ಯಾಮನ ಮುಂದಿಟ್ಟು ತಾನು ಪವಿತ್ರಳು ಎಂಬುವುದನ್ನು ನಿರೂಪಿಸುತ್ತಾಳೆ ಮತ್ತು ಶ್ಯಾಮನೊಂದಿಗೆ ಕೂಡಿಕೊಳ್ಳುತ್ತಾಳೆ. ಕತೆಯು ವಿಜಯಳ ಮೂಲಕ ಸ್ತ್ರೀ ಅಸ್ಮಿತೆಯನ್ನು ನಿರೂಪಿಸುತ್ತದೆ. ವಿಜಯ ತನ್ನ ಮೇಲೆ ಬಂದ ಆರೋಪಗಳನ್ನು ದಿಟ್ಟವಾಗಿ ನಿರಾಕರಿಸುವ ಮತ್ತು ವಾಸ್ತವವನ್ನು ಹೇಳುವ ಮೂಲಕ ತಾನು ಅಕಳಂಕಿನಿ ಎಂದು ಹೇಳುವ ಶಕ್ತಿಯನ್ನೆ ಸ್ಥಳೀಯತೆ ಎಂದು ಕರೆಯಬಹುದು.

ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಗಂಡುಗಳು ಇಬ್ಬರೂ ಕೂಡಿಕೊಂಡಿದ್ದರೂ ಸಾಮಾಜಿಕ ಅಭಿಪ್ರಾಯ ಹಾಗೂ ಕುಟುಂಬದ ನಿರ್ಧಾರದಲ್ಲಿ ಹೆಣ್ಣಿನ ಅಭಿವ್ಯಕ್ತಿಯನ್ನು ಗೌಣವಾಗಿಸಿದೆ. ಈ ಎಲ್ಲಾ ಸಂದರ್ಭದಲ್ಲಿ ಗಂಡಿನ ನಿಲುವುಗಳೇ ಪ್ರಧಾನವಾಗಿ ಗೋಚರವಾಗುತ್ತದೆ. ಆದರೆ ಹೆಣ್ಣಿನ ಅಭಿವ್ಯಕ್ತಿ ಹಾಗೂ ನಿರ್ಧಾರಕ್ಕೆ ಕುಟುಂಬದ ಸ್ಥಳವಿದೆ ಎಂಬ ನಿಲುವನ್ನು ಮಂಡಿಸುವ ಕತೆ, ಜಿ.ಎಸ್. ಕಮಲದಾನಿಯವರ 'ಮಾಲತಿಯ ಸಮಸ್ಯೆ'. ಈ ಕತೆಯು ಮಾಲತಿಯ ಮೂಲಕ ಸ್ತ್ರೀ ಪ್ರಧಾನವಾದ ಅಭಿವ್ಯಕ್ತಿಯನ್ನು ಮಂಡಿಸುತ್ತದೆ. ಮಾಲತಿ ತನಗೆ ಕೆಲಸಕ್ಕೆ ಬೇಕಾದ ಹೆಣ್ಣು ಒಬ್ಬಳನ್ನು ತನ್ನ ಗಂಡನ ಅನುಮತಿಯಿಲ್ಲದೆ ನೇಮಕ ಮಾಡಿಕೊಳ್ಳುತ್ತಾಳೆ. ನಂತರದಲ್ಲಿ ತನ್ನ ಗಂಡ ಬಿಂದುರಾಯನಿಗೆ ಹೇಳುತ್ತಾಳೆ ಕೆಲಸಕ್ಕೆ ಸೇರಿಕೊಂಡ ಪಾರ್ವತಿಯು ತರುಣಿಯಾಗಿದ್ದರಿಂದ ಬಿಂದುರಾಯ ಪಾರ್ವತಿಯ ಕಡೆಗೆ ಹೋಗಬಹುದೆಂದು ತನ್ನ ಹೆರಿಗೆಗಾಗಿ ತವರಿಗೆ ತೆರಳದೆ, ಮನೆಯಲ್ಲಿ ಇರುತ್ತೇನೆ ನನ್ನ ನೋಡಿಕೊಳ್ಳಲು ಪಾರ್ವತಿ ಇದ್ದಾಳೆಂದು ನಿರ್ಧರಿಸಿ ಗಂಡ ಬಿಂದುರಾಯನಿಗೆ ಹೇಳುತ್ತಾಳೆ. ಕತೆಯು ಸ್ತ್ರೀ ನಿರ್ಧಾರಗಳೇ ಪ್ರಧಾನವೆಂದು ನಿರೂಪಿಸುತ್ತದೆ ಹಾಗೂ ಮಾಲತಿಯ ನಿಲುವುಗಳಿಗೆ ಪುರುಷನಾದ ಬಿಂದುರಾಯ ಒಪ್ಪಿಕೊಂಡು ನಡೆಯುತ್ತಾನೆ. ಈ ರೀತಿಯ ಹೆಣ್ಣಿನ ಗುಣಾತ್ಮಕ ಅಭಿವ್ಯಕ್ತಿಯೇ ಸ್ಥಳೀಯತೆಯಾಗಿದೆ.

ಮುಂಬೈ ಕರ್ನಾಟಕ ಭಾಗದ ಮೊದಲ ತಲೆಮಾರಿನ ಕತೆಗಾರರು ವಸಾಹತುಶಾಹಿಯ ಧೋರಣೆಗೆ ಪ್ರತಿರೋಧ ಒಡ್ಡುವುದಕ್ಕಿಂತ ನಮ್ಮ ನೆಲದಲ್ಲಿ ಆ ಕಾಲಮಾನದಲ್ಲಿ ಇದ್ದಂತೆ ಮೌಢ್ಯ ಆಚಾರವನ್ನು ಪ್ರಭುತ್ವದ ಪರಂಪರೆ ಸಂಪ್ರದಾಯವನ್ನು ವೈಚಾರಿಕ ಪ್ರಜ್ಞೆಯಿಂದ ನೋಡುವ ಕಾರ್ಯವನ್ನು ಕತೆಗಳ ಮೂಲಕ ಮಾಡಿದರು ಉತ್ತರ ಭಾರತದ ಸುಧಾರಣ ಚಳುವಳಿಯ ಭಾಗವಾಗಿ ಬಂದ ಸ್ತ್ರೀ ವಿಮೋಚನ ಚಿಂತನೆಗಳು ಈ ಭಾಗದ ಕತೆಗಾರರನ್ನು ಪ್ರಭಾವಿಸಿತು. ಸ್ತ್ರೀ ಪರಂಪರೆಯ ಬದುಕಿನ ಚೌಕಟ್ಟನ್ನು ಮೀರಿ ಸ್ತ್ರೀ ಅಸ್ಮಿತೆಯನ್ನು ಹಾಗೂ ಸ್ತ್ರೀಯ ಗುಣಗಳನ್ನು ಪ್ರಧಾನವೆಂದು ಪುರುಷ ವ್ಯವಸ್ಥೆಯ ನೆಲೆಗೆ ಗುಣಾತ್ಮಕವಾಗಿ ಮಂಡಿಸಿದ ಕಥನ ತಾತ್ವಿಕತೆಯೇ ಸ್ತ್ರೀ ಗುಣಾತ್ಮ ಸ್ಥಳೀಯತೆಯಾಗಿದೆ.

**೩. ಪರಂಪರೆಯ ಸ್ಥಳೀಯತೆ**

ನಮ್ಮ ನೆಲದ ಪರಂಪರೆ ಹಾಗೂ ನಂಬಿಕೆಯನ್ನು ಕಾಪಿಟ್ಟುಕೊಳ್ಳುವ ಕಡೆಗೆ ಮುಂಬೈ ಕರ್ನಾಟಕದ ಕತೆಗಾರರು ಅನುಸಂಧಾನ ಮಾಡಲಿಲ್ಲ. ಬದಲಿಗೆ ವೈಚಾರಿಕ ಹಾಗೂ ಪಾಶ್ಚಾತ್ಯ ಸುಧಾರಣಾವಾದದ ದೃಷ್ಟಿಯಲ್ಲಿಯೇ ಗ್ರಹಿಸಿದರು, ಆದರೆ ಕೆಲವು

ಮೊದಲ ತಲೆಮಾರಿನ ಕತೆಗಾರರು ಪರಂಪರೆಯನ್ನು ಬದುಕಿನ ಮೂಲ ಆಶಯವಾಗಿ ತಾತ್ವೀಕರಿಸಿದರು. ವಸಾಹತುಶಾಹಿಯು ನೇರ ಆಳ್ವಿಕೆಗೆ ಒಳಗಾದ ಮುಂಬೈ ಕರ್ನಾಟಕ ಪ್ರದೇಶವು ಅನೇಕ ಪಾಶ್ಚಾತ್ಯ ಸಾಂಸ್ಕೃತಿಕ ಪ್ರವೇಶಕ್ಕೆ ತನ್ನನ್ನು ಒಡ್ಡಿಕೊಂಡಿತು. ಈ ನಡುವೆ ನಮ್ಮ ನೆಲದ ನಂಬಿಕೆ, ಆಚಾರ, ಜೀವನ ಮೌಲ್ಯಗಳು ತನ್ನ ಅಸ್ತಿತ್ವವನ್ನು ಕಳೆದುಕೊಂಡರೂ, ಕಳೆದುಕೊಂಡ ಪರಂಪರೆಯ ಅಭಿವ್ಯಕ್ತಿಯನ್ನು ಮರುಕಟ್ಟುವ ಕಡೆಗೆ ಹೆಚ್ಚಿನ ಕತೆಗಾರರು ದುಡಿಯಲಿಲ್ಲ. ಕಾರಣ ಈ ಪ್ರದೇಶದ ಕತೆಗಾರರ ಮೇಲೆ ಗಾಢವಾದ ಸಾಮಾಜಿಕ-ಧಾರ್ಮಿಕ ಚಳುವಳಿಯ ಪ್ರಭಾವವು ಪರಂಪರೆಯ ನಿಲುವುಗಳನ್ನು ಧರ್ಮ ದೇವರು ನಂಬಿಕೆಗಳನ್ನು ಸುಧಾರಣ ಮನೋಭಾವದಿಂದ ನೋಡುವುದನ್ನು ಕಲಿಸಿತು. ಹಾಗು ಪಾಶ್ಚಾತ್ಯ ಚಿಂತನ ಕ್ರಮವನ್ನು ಗುಣಾತ್ಮಕವಾದ ಅಭಿವ್ಯಕ್ತಿ ಎಂದು ಗ್ರಹಿಸಿದ್ದರಿಂದ ನಮ್ಮ ನೆಲದ ಪರಂಪರೆಯನ್ನು ವಸಾಹತುಶಾಹಿಯ ಧೋರಣೆಗೆ ಮುಖಾಮುಖಿಯಾಗಿಸಿ ಪರಂಪರೆಯನ್ನು ಮೌಲ್ಯಯುತವಾಗಿ ಕಟ್ಟುವ ಬದಲು, ಪರಂಪರೆಯ ಜೀವನ ಮೀಮಾಂಸೆಯನ್ನು ಸುಧಾರಣೆಯ ಬಿಂಬದಲ್ಲಿ ಅನುಸಂಧಾನ ಮಾಡಿದ ಕತೆಗಾರರೇ ಬಹುಪಾಲು. ಶಾರದಾ ಜಡೆಯಂತಹ ಕತೆಗಾರ್ತಿ ಪರಂಪರೆಯನ್ನು ಪ್ರಧಾನ ಅಭಿವ್ಯಕ್ತಿಯಾಗಿ 'ಥೇರಿನ ಸಾಲು' ಎಂಬ ಕತೆಯಲ್ಲಿ ಚರ್ಚಿಸುತ್ತಾರೆ. ಶಾರದಮ್ಮ ಹಾಗೂ ಕಮಲಮ್ಮ ಮೂರು ವರ್ಷಕ್ಕೊಮ್ಮೆ ನಡೆಯುವ ದೇವರ ಥೇರಿಗೆ ಹೋಗಬೇಕೆಂದು ನಿರ್ಧರಿಸುತ್ತಾರೆ ಹಾಗೂ ಹಿರಿಯರೊಂದಿಗೆ ಥೇರಿಗೆ ಹೋದರೆ ತಮ್ಮ ಇಷ್ಟದಂತೆ ಮಾತುಕತೆಯನ್ನು ನಡೆಸಲು ಸಾಧ್ಯವಿಲ್ಲೆಂದು ಮಾತನಾಡಿಕೊಂಡು ಅಜ್ಜಿಯನ್ನು ಬಾಯಿ ಮಾತಿಗೆ ಥೇರಿಗೆ ಕರೆಯುತ್ತಾರೆ. ಹಾಗೂ ಥೇರಿಗೆ ಹೋಗಬೇಕಾದರೆ ಎದುರಾಗುವ ಅಡೆ ತಡೆಗಳನ್ನು ಮುದುಕರ ನೆಲೆಯಿಂದ ಅಜ್ಜಿಗೆ ವಿವರಿಸಿ, ತಾವೇ ಇಬ್ಬರು ಯುವತಿಯರು ಥೇರಿಗೆ ಹೋಗಬೇಕೆಂದು ತಯಾರಿ ನಡೆಸುತ್ತಾರೆ. ಆದರೆ ಅಜ್ಜಿಯು ಥೇರಿಗೆ ಹೋಗಲು ಸಿದ್ಧರಾದಾಗ ಅಜ್ಜಿಯನ್ನು ಮನೆಯಲ್ಲಿಯೇ ಉಳಿಸಲು ಪ್ರಯತ್ನಪಟ್ಟರು. ಅಜ್ಜಿ 'ಹ್ಯಾಗೋ ಆ ಸ್ವಾಮಿನೇ ಕರ್‍ಕೊಂಡು ಹೋಗ್ತಾನೆ, ಕೈಲಾಗದ ಮುದುಕಿನ ತನ್ನ ಸೇವೆಗೆ ಕರೆಸಿಕೊಳ್ಳೋದು ಅವನಿಗೆ ಗೊತ್ತಿಲ್ವೇ?' ಎಂದು ಶಾರದಮ್ಮ ಕಮಲಮ್ಮಳ ಜೊತೆಯಲ್ಲಿ ದೇವರ ದರ್ಶನಕ್ಕೆ ಹೊರಟರು. ಕಮಲಮ್ಮ ಹಾಗೂ ಶಾರದಮ್ಮಗೆ ಅಜ್ಜಿಯನ್ನು ಕರೆದುಕೊಂಡು ಹೋಗುವುದು ಇಷ್ಟವಿರಲಿಲ್ಲ. ಕಾರಣ ಅಜ್ಜಿ ಪರಂಪರೆಯನ್ನು ಆಚಾರವನ್ನು ಇಟ್ಟುಕೊಂಡು ನಡೆಯುವವಳಾಗಿದ್ದಳು. ದಾರಿಯುದ್ದಕ್ಕೂ ಹೆಣ್ಣುಮಕ್ಕಳು ಮಾತನಾಡಬಾರದು, 'ಅಲ್ಲಿ-ಇಲ್ಲಿ ಎಂಜಲು ತುಳಿಯಬಾರದು, ಮೈ ತುಂಬ ಸೆರಗೆಳೆದುಕೊಳ್ಳಬೇಕು, ಗಟ್ಟಿಯಾಗಿ ನಗಬಾರದೆಂಬ

ಆಜ್ಞೆಯ ಮೂಲಕ ಹೆಜ್ಜೆ ಹಾಕತೊಡಗಿದರು. ಹಳ್ಳಿಯ ಹತ್ತಿರ ಬರುವುದರೊಳಗೆ ಪಟಪಟನೆ ಮಳೆ ಸುರಿಯಲಾರಂಭಿಸಿತು. ಅಜ್ಜಿ ಶಾಲು ದುಪ್ಪಟ್ಟು ಹಾಕಿಕೊಂಡು ಒಂದು ಮನೆಯ ಪಡಶಾಲೆಯಲ್ಲಿ ಕುಳಿತುಕೊಂಡಳು. ಕತ್ತಲಾಗುತ್ತ ಬಂದಿತ್ತು ಮುಂದೆ ನಡೆಯಲು ದಾರಿ ಕಾಣದಾಯಿತು. ಕಮಲಮ್ಮ ಶಾರದಮ್ಮಗೆ ಕಣ್ಣಲ್ಲಿ ನೀರೂರುತ್ತಿತ್ತು. ಉಪಾಯವಿಲ್ಲದೆ ಒಬ್ಬರ ಮುಖ ಮತ್ತೊಬ್ಬರು ನೋಡುತ್ತ ಕುಳಿತರು. ಅಜ್ಜಿ ಶಾಲು ದುಪ್ಪಟ್ಟ ಸರಿ ಮಾಡಿಕೊಂಡು ದೇವರ ಪದ ಹೇಳಲು ಆರಂಭಿಸಿದರು.

**ಮನೆ ದೇವತೆಯರಿರಾ ನಂದನ ದೇವತೆಯರಿರಾ**

**ದೆಸೆಯ ದೇವತೆಯರಿರಾ**

**ಶಿವನ ಮೈಮೆಯ ಕಾಣಬನ್ನಿರೇ ನೀವು ಬನ್ನಿರೇ**

ಎಂದು ಪದ ತೆಗೆದ ಕೂಡಲೇ ಅಜ್ಜಿಯ ಧ್ವನಿಗೆ ಪರಿಸರದ ಜನ ಕೂಡಲೇ ಸೇರತೊಡಗಿದರು. ಅಜ್ಜಿಯ ಹಾಡು ಮಧ್ಯರಾತ್ರಿಯವರೆಗೆ ಮುಂದುವರಿದಾಗ ಜನ ಅಜ್ಜಿಯ ಹಾಡಿಗೆ ತಲೆದೂಗಿದಲ್ಲದೆ, ಹಾಲು, ಹಣ್ಣು, ಫಲಾಹಾರವನ್ನು ತಂದು ಸತ್ಕರಿಸಿ ಉಳಿದುಕೊಳ್ಳುವ ವ್ಯವಸ್ಥೆ ಮಾಡಿ ಥೇರಿಗೆ ಅಜ್ಜಿಯನ್ನು ಗೌರವದಿಂದ ಕರೆದುಕೊಂಡು ಹೋಗುತ್ತಾರೆ.

ಕತೆಯು ಅಜ್ಜಿಯ ಪರಂಪರಾಗತವಾದ ನಡೆಯನ್ನು ಪ್ರಧಾನ ಧಾರೆಯಲ್ಲಿ ಮಂಡಿಸುವ ಮೂಲಕ ಪರಂಪರೆಯ ಸ್ಥಳೀಯತೆಯನ್ನು ಅನುಸಂಧಾನ ಮಾಡುತ್ತದೆ. ಕಮಲಮ್ಮ ಹಾಗೂ ಶಾರದಮ್ಮ ಅಜ್ಜಿಯನ್ನು ಥೇರಿಗೆ ಕರೆದುಕೊಂಡು ಹೋಗುವುದನ್ನು ನಿರಾಕರಿಸಿ, ದೂರಿಕರಿಸಿದರೂ ರಾತ್ರಿ ಅಜ್ಜಿಯ ಹಾಡು ಅವಳ ಭಕ್ತಿ ಹಾಗೂ ಅಜ್ಜಿಯ ನೆಲೆಯಿಂದ ಆದ ಪ್ರಯೋಜನವನ್ನು ಕಮಲಮ್ಮ ಹಾಗೂ ಶಾರದಮ್ಮ ಒಪ್ಪಿಕೊಳ್ಳುತ್ತಾರೆ. ಕತೆಯು ನಂಬಿಕೆ. ಆಚಾರವನ್ನು ಗುಣಾತ್ಮಕವಾಗಿ ಮಂಡಿಸಿರುವುದನ್ನು ಗುರುತಿಸಬಹುದು.

ಮೊದಲ ತಲೆಮಾರಿನ ಮುಂಬೈ ಕರ್ನಾಟಕ ಭಾಗದ ಕತೆಗಾರರು ಆ ಕಾಲಮಾನದ ಸಾಮಾಜಿಕ, ಆರ್ಥಿಕ ಧಾರ್ಮಿಕ ಸ್ಥಿತಿಗಳಿಂದ ಪ್ರತಿಕ್ರಿಯಿಸಿದ್ದಲ್ಲದೆ ಸಾಮಾಜಿಕ ಸುಧಾರಣೆಯನ್ನೆ ಕತೆಗಳ ಮೂಲಕ ಅಭಿವ್ಯಕ್ತಿಸಿದರು, ಪ್ರಮುಖವಾಗಿ ವಸಾಹತುಶಾಹಿಯ ಧೋರಣೆಗಳಿಗೆ ಪ್ರತಿಕ್ರಿಯೆ ಭಾಗವಾಗಿದ್ದ ಕತೆಗಳು ಸ್ಥಳೀಯತೆಯ ರೂಪವನ್ನು ಬೆಸೆಯುವ ನೆಲೆಯಲ್ಲಿ, ಅನುಸಂಧಾನಗೊಂಡಿದೆ. ಬಹುತೇಕ ಕತೆಗಳು ಸ್ತ್ರೀ ಸಂವೇದನೆಯ ಭಾಗವಾಗಿ ಪರಂಪರಾಗತವಾದ ಸ್ತ್ರೀ ಬದುಕಿನಲ್ಲಿ ಸುಧಾರಣೆಯನ್ನು ನಿರೂಪಿಸುವ ತಾತ್ವಿಕತೆಯನ್ನು ಮೂಲ ಸತ್ವವಾಗಿ ಹೊಂದಿರುವುದರಿಂದ ಈ ಅಭಿವ್ಯಕ್ತಿಯ ಕ್ರಮವನ್ನು ಸ್ತ್ರೀ ಗುಣಾತ್ಮಕ

ಸ್ಥಳೀಯತೆ ಎಂದು ಗುರುತಿಸಬಹುದು. ಒಟ್ಟಿನಲ್ಲಿ ಈ ಭಾಗದ ಕತೆಗಳು ಸುಧಾರಣವಾದದ ಉಪಉತ್ಪನ್ನದಂತೆ ಕಥಾ ಪರಂಪರೆಯನ್ನು ಹುಟ್ಟು ಹಾಕಿರುವುದು ಈ ಭಾಗದ ವಿಶೇಷವಾಗಿದೆ.

**೫.೪. ಕಲ್ಯಾಣ ಕರ್ನಾಟಕದ ಕತೆಗಳಲ್ಲಿ ಸ್ಥಳೀಯ ಪ್ರಜ್ಞೆಯ ಸ್ವರೂಪ**

ಹೈದರಾಬಾದ್ ಕರ್ನಾಟಕ ಪ್ರದೇಶವು ಕನ್ನಡ ಕಥಾ ಲೋಕಕ್ಕೆ ಅನನ್ಯವಾದ ಕೊಡುಗೆಯನ್ನು ನೀಡಿದೆ. ಸ್ವಾತಂತ್ರ್ಯ ಪೂರ್ವ ಅಂದರೆ ವಸಾಹತುಶಾಹಿಯ ಕಾಲಮಾನದಲ್ಲಿ ಈ ಭಾಗದಲ್ಲಿ ಕತೆಗಳ ರಚನೆಯ ಚರಿತ್ರೆ ಕಂಡು ಬರುವುದಿಲ್ಲ. ಕಾರಣ ವಿಜಯನಗರ ಸಾಮ್ರಾಜ್ಯದ ಪತನದ ತರುವಾಯ ಹೈದರಾಬಾದಿನ ನಿಜಾಮನ ಆಳ್ವಿಕೆಗೆ ಬಹುದೀರ್ಘಕಾಲ ಒಳಪಟ್ಟಿತ್ತು. ಈ ನಿಜಾಮನ ಆಳ್ವಿಕೆಯಲ್ಲಿ ಉರ್ದು ಸಾಹಿತ್ಯ, ಶಿಕ್ಷಣ ಹಾಗೂ ಭಾಷಾ ಸಾಂಸ್ಕೃತಿಕ ಪ್ರಜ್ಞೆಯಿಂದ ಕನ್ನಡ ಸಾಹಿತ್ಯ ಕ್ಷೇತ್ರ ಅಸ್ತಿತ್ವವನ್ನು ಕಳೆದುಕೊಂಡಿತ್ತು. ಈ ಸಂದರ್ಭದಲ್ಲಿ ಕನ್ನಡ ಭಾಷೆ ಹಾಗೂ ಅಕ್ಷರ ಜ್ಞಾನವನ್ನು ಕಲಿಸುವ ಕಾರ್ಯವನ್ನು ಮಠಗಳು ನಿಜಾಮನ ಪ್ರಭುತ್ವಕ್ಕೆ ಅರಿವಾಗದಂತೆ ಮಾಡಿದವು. ಈ ಕಾರ್ಯದಿಂದ ಕನ್ನಡ ಸಾಹಿತ್ಯ ಪ್ರಕಾರಗಳನ್ನು ಕಟ್ಟುವ ಹಾಗೂ ಭಾಷೆಯನ್ನು ಬಹುರೂಪಿಯಾಗಿ ಬಳಸುವ ಕಾರ್ಯ ನಡೆಯಲಿಲ್ಲ. ವಸಾಹತುಶಾಹಿ ಸಂದರ್ಭದಲ್ಲಿ ಕತೆಗಳ ರಚನೆಯ ಪರಿಸರ ಜನ್ಮತಾಳಲಿಲ್ಲ, ಸ್ವಾತಂತ್ರ್ಯ ಭಾರತದ ನಂತರದ ಕಾಲಮಾನದಲ್ಲಿ ರಚನೆಯಾದ ಅನೇಕ ಕತೆಗಳು ವಸಾಹತುಶಾಹಿಯ ಧೋರಣೆಯನ್ನು ಕೇಂದ್ರೀಕರಿಸಿದವಲ್ಲದೆ, ಸ್ವಾತಂತ್ರ್ಯ ಚಳುವಳಿ, ಸ್ವದೇಶಿ ಪ್ರಜ್ಞೆಯನ್ನು ಕತೆಯ ತಾತ್ವಿಕತೆಯಾಗಿ ಬಳಸಿಕೊಂಡಿದ್ದರಿಂದ ಈ ಪ್ರಬಂಧದಲ್ಲಿ ಸ್ವಾತಂತ್ರ್ಯ ಭಾರತದ ನಂತರದಲ್ಲಿ ರಚನೆಯಾದ ಈ ಭಾಗದ ಕತೆಗಳನ್ನು ಅಧ್ಯಯನಕ್ಕೆ ಒಳಪಡಿಸುವ ಮೂಲಕ ಸ್ಥಳೀಯತೆಯ ಅಭಿವ್ಯಕ್ತಿಯನ್ನು ಚರ್ಚಿಸಲಾಗಿದೆ. ಮುಖ್ಯವಾಗಿ ಶಾಂತರಸ, ಜಂಬಣ್ಣ ಅಮರಚಿಂತ, ಕುಂ. ವೀರಭದ್ರಪ್ಪ, ಅಮರೇಶ ನುಗಡೋಣಿ ಮುಂತಾದ ಕತೆಗಾರರನ್ನು ಹೆಸರಿಸಬಹುದು.

ಕಲ್ಯಾಣ ಕರ್ನಾಟಕ ಭಾಗದಲ್ಲಿ ವಸಾಹತುಶಾಹಿ ಸಂದರ್ಭದಲ್ಲಿ ಕತೆಗಳು ರಚನೆಯಾಗದಿದ್ದರೂ ನಂತರ ರಚನೆಯಾದ ಕತೆಗಳಲ್ಲಿನ ಪ್ರಜ್ಞೆ ಹಾಗೂ ಸತ್ವ ವಸಾಹತುಶಾಹಿಯ ಪ್ರಭಾವದ ಎರಕವೇ ಆಗಿದೆ. ಊಳಿಗಮಾನ್ಯ ಪದ್ಧತಿಯಂತೆ ಕಂಡು ಬರುವ ಜಮೀನ್ದಾರ ಮತ್ತು ರೈತವಾರಿ ಪದ್ಧತಿಯನ್ನು ವಸಾಹತುಶಾಹಿಯು ಕಂದಾಯವನ್ನು ಸಂಗ್ರಹಿಸುವ ನಿಲುವಿನಿಂದ ವಸಾಹತುವಿನಲ್ಲಿ ರೂಪಿಸಿತು. ಈ ಪರಿಸರವು ಯಜಮಾನಿಕೆ

ಎಂಬ ವ್ಯವಸ್ಥೆಯನ್ನು ಹುಟ್ಟು ಹಾಕಿತಲ್ಲದೆ ರೈತ, ದುಡಿಯುವ ವರ್ಗವನ್ನು ಅತ್ಯಂತ ಕ್ರೂರವಾಗಿ ನೋಡಿತು. ಸ್ವಾತಂತ್ರ್ಯ ಭಾರತದ ನಂತರದ ಕಾಲಮಾನದಲ್ಲಿ ವಸಾಹತುಶಾಹಿ ಕೇಂದ್ರಿತ ಶಿಕ್ಷಣವನ್ನು ಪಡೆದುಕೊಂಡ ಕೆಲವು ಜನರು ಆ ಪ್ರದೇಶದ ಪ್ರಭುತ್ವವನ್ನು ಅರ್ಥ ಮಾಡಿಕೊಂಡರಲ್ಲದೆ, ದುಡಿಯುವ ಜನರ ಹಸಿವು, ಸಂಕಟ, ನೋವು ಹಾಗೂ ಯಜಮಾನಿಕೆ ವ್ಯವಸ್ಥೆಯೊಂದಿಗಿನ ಸಂಬಂಧವನ್ನು ಜೀವಪರವಾದ ಸತ್ವದೊಂದಿಗೆ ಕತೆಗಳು ತಾತ್ವಿಕವಾಗಿ ಮಂಡಿಸುತ್ತದೆ. ದುಡಿಯವ ಜನರ ಜೀವನ ಮೀಮಾಂಸೆ, ಹಸಿವು, ಬಡತನ ಗಂಡು ಹೆಣ್ಣುಗಳ ಸಂಬಂಧ ಹಾಗೂ ಧಾರ್ಮಿಕ ಪರಂಪರೆ ಮತ್ತು ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯು ಸ್ಥಳೀಯ ಆಕೃತಿಯಲ್ಲಿ ಅನುಸಂಧಾನವಾಗಿರುವುದನ್ನು ಈ ಕತೆಗಳಲ್ಲಿ ಗುರುತಿಸಬಹುದು.

ಶಾಂತರಸ ಅವರ 'ಗೋದಾನ' ಕತೆಯು ಬ್ರಾಹ್ಮಣ ಸಮುದಾಯವು ತಮ್ಮ ವೈದಿಕ ಪ್ರಭುತ್ವದ ನೆಲೆಯಿಂದ ಸಾಮಾನ್ಯ ಜನರನ್ನು ಬಳಸಿಕೊಂಡ ಸಾಮಾಜಿಕ ಮತ್ತು ಆರ್ಥಿಕ ರೂಪವನ್ನು ಸ್ಥಳೀಯ ನೆಲೆಯಲ್ಲಿ ಅನುಸಂಧಾನಕ್ಕೆ ಒಳಪಡಿಸಿದೆ. ದುಡಿಯುವ ಸಮುದಾಯದ ಬದುಕಿನ ನೆಲೆಯನ್ನು ಬ್ರಾಹ್ಮಣರು ಜ್ಯೋತಿಷ್ಯ ತಂತ್ರದ ಮೂಲಕ ಅಸ್ಥಿರವಾಗಿಸಿದ ಪರಂಪರೆಯ ನಿಲುವುಗಳನ್ನು, ದುಡಿಯುವ ವರ್ಗವನ್ನು ಹಿಂಸೆ ಶೋಷಣೆ ಒಳಪಡಿಸಿದ ತಾತ್ವಿಕತೆಯನ್ನು ಕತೆಯ ಪರಿಸರವು ಅಭಿವ್ಯಕ್ತಿಸುತ್ತದೆ. ದುಡಿಯುವ ಬಡವನೊಬ್ಬ ದನವನ್ನು ಸಾಕುವ ಮೂಲಕ ಬದುಕು ಕಟ್ಟಿಕೊಳ್ಳುತ್ತಾನೆ. ಬ್ರಾಹ್ಮಣನೊಬ್ಬ ತನ್ನ ಮಕ್ಕಳಿಗೆ ಹಾಲು ಕುಡಿಸುವ ಉದ್ದೇಶದಿಂದ ಬಡವನ ದನವನ್ನು ತನ್ನದಾಗಿಸಿಕೊಳ್ಳುವ ನೆಲೆಯಿಂದ ಜ್ಯೋತಿಷ್ಯವನ್ನ ಬಳಸಿಕೊಂಡು ಬಡವನ ಬದುಕನ್ನು ಅಸ್ಥಿರವಾಗಿಸುತ್ತಾನೆ. ಬ್ರಾಹ್ಮಣ ದನವನ್ನು ಪಡೆಯುವ ಉದ್ದೇಶದಿಂದ, ಬಡವನ ಮಗ ಸತ್ತು ಹೋದ ವಿಚಾರ ತಿಳಿದು ಬ್ರಾಹ್ಮಣ ಜ್ಯೋತಿಷ್ಯದ ನಿಲುವುಗಳಿಂದ ಮಗಸತ್ತ ಕಾಲ ಸರಿಯಿಲ್ಲ ಹಾಗೂ ಮನೆಯಲ್ಲಿ ಮೂರು ಹೆಣಗಳು ಬೀಳುತ್ತವೆ ಮತ್ತು ಆರು ತಿಂಗಳು ಮನೆಯನ್ನು ಬಿಡಬೇಕೆಂದು ಹೇಳುವ ಮೂಲಕ ಬಡವನ ಮನಸಿನಲ್ಲಿ ಭಯವನ್ನು ಹುಟ್ಟಿಸುತ್ತಾನೆ. ಬಡವ ದಿಕ್ಕು ತೋಚದೆ ದೋಷಕ್ಕೆ ಪರಿಹಾರವೇನೆಂದು ಬ್ರಾಹ್ಮಣನನ್ನೇ ಕೇಳುತ್ತಾನೆ. ಈ ನಡುವೆ ದನವನ್ನು ಪಡೆಯಬೇಕೆಂದು ಯೋಚಿಸಿದ ಬ್ರಾಹ್ಮಣ ಬಡವನಿಗೆ ಈ ಸಂಕಟದಿಂದ ಪರಿಹಾರವಾಗಬೇಕೆಂದರೆ ದನವನ್ನು ಬ್ರಾಹ್ಮಣನಿಗೆ ದಾನವಾಗಿ ನೀಡಬೇಕೆಂದು ಜ್ಯೋತಿಷ್ಯದ ಮೂಲಕ ಹೇಳುತ್ತಾನೆ. ಬಡವ ತನ್ನ ಬದುಕು ಮತ್ತು ಮನೆಗಿಂತ ದನ ದೊಡ್ಡದಲ್ಲವೆಂದು ತಿಳಿದು ದನವನ್ನು ಬ್ರಾಹ್ಮಣನಿಗೆ ದಾನವಾಗಿ ನೀಡುತ್ತಾನೆ.

ಕತೆಯು ದುಡಿಯುವ ಕೆಳಸಮುದಾಯವನ್ನು ಜ್ಯೋತಿಷ್ಯವೆಂಬ ತಂತ್ರದ ಮೂಲಕ ಹೇಗೆ ಶೋಷಣೆಗೆ ಒಳಪಡಿಸಲಾಗುತಿತ್ತು ಎಂಬುವುದರ ಜೊತೆಗೆ ಬಡವನೊಬ್ಬ ತನ್ನ ಅಸ್ಮಿತೆಯನ್ನು ಕಳೆದುಕೊಳ್ಳುವ ಬಗೆಯನ್ನು ಸ್ಥಳೀಯತೆಯ ಸ್ವರೂಪವಾಗಿ ನಿರೂಪಿಸುತ್ತದೆ.

ಬಡತನದ ಸಂವೇದನೆಯನ್ನು ಪ್ರಧಾನವಾಗಿ ಚರ್ಚಿಸುವ ಕತೆಯೇ ಕುಂ ವೀರಭದ್ರಪ್ಪನವರ 'ಠೊಣ್ಣಿ', 'ಕಿವುಡ ನಾಯಿಯಾದ ಕತೆ'. ದಲಿತ ಸಮುದಾಯದ ಹಸಿವು, ಬಡತನ, ಜೀತ ಹಾಗೂ ಮೇಲುವರ್ಗದಿಂದಾಗುವ ಶೋಷಣೆಗಳನ್ನು ಗುರುತಿಸುವ ಜೊತೆಗೆ ದುಡಿದು ಬದುಕುವ ದಲಿತ ಸಮುದಾಯದ ಹಸಿವಿನ ತಾತ್ವಿಕತೆಯನ್ನು ಸ್ಥಳೀಯತೆಯ ಪರಿಸರದಲ್ಲಿ ನಿರೂಪಿಸುತ್ತದೆ. ಠೊಣ್ಣಿಯು ತನ್ನ ಒಡೆಯನ ಮನೆಯ ಬಸವಣ್ಣ(ಎತ್ತು) ಸಾಯವುದನ್ನು ತಿಳಿದು ಖುಷಿಪಡುತ್ತಾನೆ. ಎತ್ತಿನ ಸಾವು ತನ್ನ ಹಾಗು ತನ್ನ ಕುಟುಂಬದ ಹಸಿವನ್ನು ನೀಗಿಸುವ ಮೂಲಕ ಕೆಲವು ದಿನಗಳು ಬದುಕಬಹುದೆಂದು ನಂಬಿಕೆ ಹೊಂದುತ್ತಾನೆ. ಕಿವುಡ ಅಂಗಡಿ ಅಜ್ಜಪ್ಪನ ಮೊಮ್ಮಗಳು ಸತ್ತ ಸುದ್ದಿ ತಿಳಿದು ಖುಷಿ ಪಡುತ್ತಾನೆ. ಹಾಗೂ ಅಜಪ್ಪನ ಮೊಮ್ಮಗಳ ಹೆಣವನ್ನು ಹೊಂಡ ತೆಗೆದು ಹೂಳುವ ಮೂಲಕ ಬರುವ ಹಣದಿಂದ ತಾನು ಹಾಗೂ ತನ್ನ ಕುಟುಂಬ ಹಸಿವಿನಿಂದ ಬಿಡುಗಡೆ ಹೊಂದಬಹುದೆಂದು ಯೋಚಿಸುತ್ತಾನೆ. ಈ ಎರಡು ಪಾತ್ರಗಳು ಹಸಿವನ್ನೆ ಪ್ರಧಾನ ಗ್ರಹಿಕೆಗಳಾಗಿ ಅನುಸಂಧಾನ ಮಾಡುತ್ತದೆ.

ಠೊಣ್ಣಿ ಬೇಡಿದರು ಗೌಡರು ಬಸವಣ್ಣನನ್ನು ಕೊಡದೆ ಮಣ್ಣಿನಲ್ಲಿ ಹೂಳುತ್ತಾರೆ. ಠೊಣ್ಣಿ ತನ್ನ ಹಸಿವನ್ನು ನೀಗಿಸುವುದು ಅನಿವಾರ್ಯವಾಗಿ ಮಣ್ಣಿನಲ್ಲಿ ಮುಚ್ಚಿರುವ ಎತ್ತನ್ನು ಮಣ್ಣಿನಿಂದ ಹೊರತೆಗೆದು ಮಾಂಸವನ್ನು ಚರ್ಮವನ್ನು ಮನೆಗೆ ಕೊಂಡು ಹೋಗಿ ಹಸಿವನ್ನು ಕಡಿಮೆ ಮಾಡಿಕೊಳ್ಳುತ್ತಾನೆ. ಆದರೆ ಪೋಲಿಸರ ಹಾಗೂ ಗೌಡರ ಮುಂದೆ ಅಪರಾಧಿಯಾಗುತ್ತಾನೆ.

ಕಿವುಡ ಅಜ್ಜಪ್ಪನ ಮೊಮ್ಮಗಳ ಶವ ಸಂಸ್ಕಾರಕ್ಕೆ ಹೊಂಡ ತೆಗೆದು ೮ ರೂಪಾಯಿ ಪಡೆದುಕೊಳ್ಳುತ್ತಾನೆ. ಹಾಗೂ ಅತ್ಯಂತ ಖುಷಿಯಿಂದ ಆ ಹಣದಿಂದ ತಾನು ತನ್ನ ಮಕ್ಕಳು ಹೆಂಡತಿ ಉಣ್ಣುವ ಕನಸು ಕಾಣುತ್ತಾನೆ. ಆದರೆ ಕಿವುಡಗಳಿಸಿದ ಹಣವನ್ನು ಸಾಬಿಯು ಕಸಿದುಕೊಳ್ಳುತ್ತಾನೆ. ಈ ನಡುವೆ ಕಿವುಡನಿಗೆ ಬದುಕುವ ದಾರಿ ಕಾಣದೆ ಪುನಃ ಮಸಣಕ್ಕೆ ತೆರಳಿ ಅಜ್ಜಪ್ಪನ ಮಗಳ ಹೆಣ ಮುಚ್ಚಿದ ಜಾಗವನ್ನು ಪುನಃ ಅಗೆದು ಎರಡು ಕಾಯಿಯನ್ನು ತೆಗೆದುಕೊಂಡು ಬರುತ್ತಾನೆ.

ಎರಡು ಕತೆಯಲ್ಲೂ ಹಸಿವಿನ ಅಭಿವ್ಯಕ್ತಿಯನ್ನೆ ಪ್ರಧಾನವಾಗಿ ಚರ್ಚಿಸುತ್ತದೆ. ದಲಿತ

ಸಮುದಾಯದ ಬದುಕು ಹಾಗೂ ಅವರ ಲೋಕದೃಷ್ಟಿಯನ್ನು ಊಳಿಗಮಾನ್ಯ ವ್ಯವಸ್ಥೆಯ ಪರಿಧಿಯೊಳಗಿನಿಂದ ಮಾನವ ಸಂಬಂಧ ದಲಿತ ಸಮುದಾಯದ ಹಸಿವು ದುಡಿಮೆ ಬಡತನ ಹಾಗೂ ಜೀವನ ಮೀಮಾಂಸೆಯನ್ನು ಸ್ಥಳೀಯತೆಯ ನೆಲೆಗಳೆಂದು ನಿರೂಪಿಸಬಹುದು.

ಕೊಟ್ಟಲಗಿ ರಾಮಚಂದ್ರ ಅವರ 'ಮುತ್ತೈದೆಯ ಮಾನಸ' ಕತೆಯು ಆ ನೆಲದ ಪರಂಪರೆಯನ್ನು ಲಗ್ನದ ಅಭಿವ್ಯಕ್ತಿಯ ಕ್ರಮಗಳಲ್ಲಿ ನಿರೂಪಿಸುತ್ತದೆ. ವೈದಿಕ ಸಮುದಾಯದ ಆಚರಣೆಗಳನ್ನು ಕೇಂದ್ರೀಕರಿಸುವ ಕತೆಯು ವಸಾಹತುಶಾಹಿಯ ಸಂದರ್ಭಕ್ಕೆ ಪರಂಪರೆಯ ನೆಲೆಯಲ್ಲಿ ಮೀರುವ ಮತ್ತು ಸಂಕರಗೊಳ್ಳುವ ತಾತ್ವಿಕತೆಗೆ ಹೆಜ್ಜೆ ಹಾಕದೆ ಇರುವ ಪರಂಪರೆಯನ್ನು ಕಾಪಿಟ್ಟುಕೊಂಡು ಹೋಗುವ ಕತೆ ಶಿವರಾಮ ಮತ್ತು ಸುಧಾಳ ಲಗ್ನವಾಗುವ ಹಿಂದೆ ಹಿರಿಯ ಜೀವಗಳು ಜಾತಕ ನೋಡುವ ಮೂಲಕ ಸಂಪ್ರದಾಯಬದ್ಧವಾಗಿ ಹೆಣ್ಣು ಗಂಡನ್ನು ಒಂದು ಮಾಡುವ ಒಟ್ಟು ಸಾಮಾಜಿಕ ಜೀವನ ಮೀಮಾಂಸೆ ಸ್ಥಳೀಯತೆಯ ನೆಲೆಯಲ್ಲಿಯೇ  ನಿರೂಪಣೆಗೊಳ್ಳುತ್ತದೆ.

'ಪಂತಮಾಸ್ತರ ಮುಂಬೈಗೆ ಹೋಗುತ್ತಾರೆ' ಎಂಬ ಕತೆಯು ಮಾಸ್ತರ ಆದರ್ಶ, ಮಕ್ಕಳನ್ನು ಬೆಳೆಸುವ ಕ್ರಮ, ದುಡಿಮೆಯಲ್ಲಿದ್ದ ಅವರ ಶ್ರದ್ಧೆಗಳ ಆಶಯವನ್ನು ನಂಬಿಕೆ ಹೊಂದಿದೆ. ಸರ್ಕಾರಿ ಶಾಲೆಯ ಮಾಸ್ತರರಾದ ಪಂತರು ಏಳನೇಯ ತರಗತಿಯಲ್ಲಿ ಎಲ್ಲ ಮಕ್ಕಳನ್ನು ತೇರ್ಗಡೆ ಮಾಡುವ ಮೂಲಕ ಹೆಸರು ಗಳಿಸಿದ್ದರು. ಪಂತರ ಶ್ರಮ, ಕಲಿಸುವ ನೆಲೆ ಹಾಗೂ ಮಕ್ಕಳೊಂದಿಗೆ ಅವರಿಗಿದ್ದ ಸಂಬಂಧವು ಆ ಕಾಲಮಾನದ ಶಿಕ್ಷಣ ಪದ್ಧತಿಯ ಅಭಿವ್ಯಕ್ತಿಯನ್ನು ಅನುಸಂಧಾನ ಮಾಡುತ್ತದೆ. ಪಂತರು ತನ್ನ ಮಗನನ್ನು ಅತ್ಯಂತ ಪ್ರೀತಿಯಿಂದ ಹಾಗು ಶಿಸ್ತಿನಿಂದ ಬೆಳೆಸುತ್ತಾರೆ. ಮುಂದೆ ಮುಂಬೈಯಲ್ಲಿ ಉದ್ಯೋಗ ಪಡೆದ ಮೇಲೆ ಪಂತರನ್ನು ತನ್ನ ಮನೆಗೆ ಆಹ್ವಾನಿಸುತ್ತಾನೆ. ಮುಂಬೈಗೆ ತೆರಳಿದರೆ ಮಕ್ಕಳಿಗೆ ಪಾಠ ತಪ್ಪಿ ಹೋಗುತ್ತದೆ ಎಂಬ ಕಾಳಜಿಯಿಂದ ಮಗನ ಆಹ್ವಾನವನ್ನು ತಿರಸ್ಕಾರದಿಂದ ಕಂಡರು. ಊರಿನ ಗೌಡರ ಒತ್ತಡಕ್ಕೆ ಮಣಿದು ಮುಂಬೈಗೆ ತೆರಳಿದ ಪಂತರು ಮಗನ ಮನೆಯನ್ನು ತಲುಪಿದ ಮೇಲೆ ಮುಂಬೈಯ ಜೀವನ ವಿಧಾನವನ್ನು ನೋಡಿ ಅದರೊಂದಿಗೆ ಹೆಜ್ಜೆ ಹಾಕುವ ಮೂಲಕ ಖುಷಿ ಪಡುವ ಕಡೆಗೆ ಆಲೋಚನೆ ಮಾಡಿದರೂ ಸಹಾ ತನ್ನ ಶಾಲೆ ಹಾಗೂ ಅಲ್ಲಿಯ ಮಕ್ಕಳ ಓದಿನ ವಿಚಾರವಾಗಿ ಚಿಂತಿಸಿ ಪಂತರು ಮೂರೇ ದಿನ ಮುಂಬೈಯಲ್ಲಿ ಉಳಿದು ತಕ್ಷಣ ತನ್ನ ಊರಿಗೆ ಹಿಂದಿರುಗುತ್ತಾರೆ. ಹತ್ತು ದಿನ ಮಗನ ಮನೆಯಲ್ಲಿ ಇರಬೇಕೆಂದು ಹೋದ ಪಂತರಿಗೆ ಮಕ್ಕಳ, ಪಾಠ

ನೆನಪಾಗಿ ಮಗ ಸಂಸಾರ ಹಾಗೂ ಖಾಸಗಿ ಜೀವನಕ್ಕಿಂತ ಮಾಸ್ತರ ವೃತ್ತಿಯೇ ಪ್ರಮುಖವೆಂದು ಬಗೆದು ಮರಳಿ ಶಾಲೆಯನ್ನು ಆರಂಭಿಸಿ ಮಕ್ಕಳನ್ನು ತೇರ್ಗಡೆಯಾಗಿಸುವ ಪಂತರ ಮನೋಧರ್ಮ ಸ್ಥಳೀಯತೆಯೇ ಆಗಿದೆ.

ಅಮರೇಶ ನುಗಡೋಣಿ ಅವರ 'ಸವಾರಿ' ಕತೆಯು ವಸಾಹತುಶಾಹಿಯ ಧೋರಣೆಯ ಮುಂದುವರಿದ ಬಂಡವಾಳ ಶಾಹಿತ್ವದ ಸೆಲೆಗಳು ಸ್ಥಳೀಯ ಜನರನ್ನು ಆಕ್ರಮಿಸಿ ಅವರ ಜೀವನ ಪರಂಪರೆಯನ್ನು ದಿಕ್ಕೆಡಿಸುವ ತಾತ್ವಿಕತೆಯನ್ನು ಹೊಂದಿರುವ ಜೊತೆಗೆ ಸ್ಥಳೀಯ ಜೀವನ ಕ್ರಮವನ್ನು ಸ್ಥಳೀಯತೆಯ ಬಿಂದುವಿನಲ್ಲಿ ಅನುಸಂಧಾನ ಮಾಡುವ ಕ್ರಮವಿದೆ. ಸಾಮಾನ್ಯ ಜನರ ಕಷ್ಟ ನೋವು ನಲಿವು ಕಾಮ ಪ್ರೇಮ ಸಾವು ನೋವುಗಳನ್ನು ಬಂಧವಾಗಿಸುವ ಕತೆ ಈ ನೆಲದ ಜೀವನ ನಂಬಿಕೆಯನ್ನು ಗುಣಾತ್ಮಕವಾಗಿ ಮಂಡಿಸುತ್ತದೆ.

ವಜ್ರಪ್ಪನ ಹೆಣವನ್ನು ಸಂಸ್ಕಾರ ಮಾಡಲು ಗುಂಡಿ ತೆಗೆಯುವ ಕಾಯಕದ ಮೀಮಾಂಸೆ, ನಂಬಿಕೆ, ಊರಿನಲ್ಲಿ ಯಾರೇ ಸತ್ತರು ಅವನಿಗೆ ಬೀಳುವ ಕನಸು ಬಡತನವಿದ್ದರು ಅವನನ್ನು ಜೀವಂತವಾಗಿಸುತ್ತದೆ. ವಜ್ರಪ್ಪನ ಹೆಂಡತಿ ರುದ್ರವ್ವ ಗಂಡನ ಮೇಲೆ ನಂಬಿಕೆ ಇಟ್ಟು ಅವಳು ದುಡಿದು ಅನ್ನದಾರಿ ರೂಪಿಸುತ್ತಾಳೆ. ಊರಿಗೆ ಆಗಮಿಸುವ ಸುಡುಗಾಡು ಸಿದ್ಧ ಅವನ ಬಗೆಗಿನ ನಂಬಿಕೆ ಆರಾಧನೆ ವಜ್ರಪ್ಪ ಹಾಗೂ ರುದ್ರವ್ವ ಸುಡುಗಾಡು ಸಿದ್ಧರೊಂದಿಗೆ ಹೊಂದಿದ್ದ ಸಂಬಂಧ ದುಡಿಯುವ ಜನರೊಳಗಿದ್ದ ಅಧ್ಯಾತ್ಮ ಚಿಂತನೆ, ಜೀವನ ಸತ್ವಗಳು ಗಾಢವಾಗಿಯೇ ಕತೆಯೊಳಗೆ ಹೆಪ್ಪುಗಟ್ಟಿವೆ. ವಜ್ರಪ್ಪ ತಾನು ಕಂಡ ಕನಸು ವಾಸ್ತವದಲ್ಲಿ ಪವಾಡ ರೀತಿಯಲ್ಲಿ ನಿಜವಾಗಿ ಅವನ ಬದುಕನ್ನು ನಡೆಸುವುದು. ಆ ನೆಲದ ಸ್ಥಳೀಯ ಸತ್ವವೇ ಆಗಿದೆ. ಈ ಸತ್ವವು ಬಂಡವಾಳಶಾಹಿಯ ಪ್ರಭುತ್ವಕ್ಕೆ ಒಳಗಾದ ಮೇಲೆ ತನ್ನ ಅಸ್ತಿತ್ವವನ್ನು ಕಳೆದುಕೊಂಡ ಮೇಲೆ ವ್ಯವಹಾರಿಕ ಚಿಂತನೆಯೇ ಪ್ರಧಾನ ಆಶಯವಾದ ತಾತ್ವಿಕ ನೆಲೆಯನ್ನು ಕತೆ ಅನುಸಂಧಾನ ಮಾಡುತ್ತದೆ. ಊರಗೌಡ, ಕಂಪನಿ, ಬಂಡವಾಳ ಹಾಗೂ ವ್ಯವಹಾರ ಬದುಕಿನ ಬಗೆ ಆಸಕ್ತಿ ವಹಿಸಿದ ಮೇಲೆ ಹಿರೇಗೌಡನ ಸಾವುವನ್ನು ಊರಿನ ಜನರಿಂದ ಮುಚ್ಚಿಡುವ ಕೆಲಸ ಮಾಡುತ್ತಾನೆ. ತಾನು ಬದುಕಿದ ಹಾಗೂ ಅನ್ನ ಕೊಟ್ಟಿದ್ದ ಭೂಮಿಯನ್ನು ಹಣದ ನಿಲುವಿನಲ್ಲಿಯೇ ಗ್ರಹಿಸುವ ಮೂಲಕ ಬದುಕಿನ ಮೌಲ್ಯಗಳನ್ನು ಬರಿದು ಮಾಡಿಕೊಳ್ಳುವ ನಿಲುವುಗಳನ್ನು ಗೌಡರ ಮೂಲಕ ಕಾಣಬಹುದು.

'ತಮಂಧದ ಕೇಡು' ಕತೆಯು ಈ ಪ್ರದೇಶದ ಜೀವನ ಸತ್ವವನ್ನು ಯಜಮಾನಿಕೆಯ

ವ್ಯವಸ್ಥೆಯ ದುಡಿಯುವ ಸಮುದಾಯವನ್ನು ಗ್ರಹಿಸುವ ನೆಲೆಯನ್ನು ಸ್ಥಳೀಯ ಸತ್ವದ ಮೂಲಕ ಘನೀಕರಿಸುತ್ತದೆ. ದುಡಿಯುವ ಸಮುದಾಯವು ತನ್ನ ಒಡೆಯನಿಗೆ ತನ್ನ ತನು ಮನವನ್ನು ಅರ್ಪಿಸಿ ಜೀತದಾಳುವಾಗಿ ಬದುಕು ಸಾಗಿಸುವ ಕಾಲಮಾನದಲ್ಲಿ ವಸಾಹತುಶಾಹಿಯ ಶಿಕ್ಷಣದ ನಿಲುವುಗಳು ದುಡಿಯುವ ವರ್ಗದ ಪ್ರಜ್ಞೆಯ ಭಾಗವಾಗಿ ಪ್ರವೇಶಗೊಂಡರೂ ಪ್ರಭುತ್ವ ಶಕ್ತಿಯ ಎದುರು ಕುಸಿದುಬೀಳುವ ಸಾಮಾಜಿಕ ಬದುಕಿನ ವೈಚಾರಿಕತೆಯ ಕೇಂದ್ರವಾಗಿ ಅನುಸಂಧಾನವಾಗುತ್ತದೆ. ದುರುಗ ಹಾಗು ಚಂದವ್ವ ಶಾಂತಗೌಡನ ದುಡಿಯುವ ಆಳುಗಳಾಗಿ ಜೀವನ ನಡೆಸುತ್ತಿದ್ದರೂ ದುರುಗ ಶಾಂತಗೌಡನಿಗೆ ಅತ್ಯಂತ ಹತ್ತಿರವಾದ ವ್ಯಕ್ತಿಯಾಗಿ ಆದರ್ಶ ಜೀತದ ಆಳಾಗಿ ಕಾಣುತ್ತಾನೆ. ತನ್ನ ಹೆಂಡತಿ ಚಂದವ್ವನನ್ನು ಗೌಡ ಬಳಸಿಕೊಳ್ಳುತ್ತಿದ್ದ ಅರಿವಿದ್ದರೂ ಅರಿಯದಂತೆ ಸಹಿಸಿಕೊಂಡಿದ್ದ. ಚಂದವ್ವನು ಶಾಂತಗೌಡನ ಸಂಬಂಧವನ್ನು ಪ್ರತಿಭಟನೆಯಿಲ್ಲದೆ ಒಪ್ಪಿಕೊಂಡಿದ್ದಳು. ದುರುಗನ ಮಗ ಚೆನ್ನ ಗೌಡರ ಕೃಪೆಯಿಂದ ಅಕ್ಷರ ಕಲಿತು ಊರಮಗನಾಗಿ ಬೆಳೆದ ಮೇಲೆ ಜೀವ ವ್ಯವಸ್ಥೆಯ ಸ್ಪರ್ಶವನ್ನು ನಿರಾಕರಿಸಲು ಆರಂಭಿಸುತ್ತಾನೆ. "ಶಾಂತಗೌಡನಿಗಾಗಿ ನನ್ನ ಅಪ್ಪ ಅವ್ವ ದುಡಿದು ಜೀವ ಸವೆಸಿದ್ದಾರೆ ಹಾಗೂ ಮಾರಿಕೊಂಡಿದ್ದಾರೆ. ಇದಕ್ಕೆ ಬೆಲೆಕಟ್ಟಲು ಹಾಗೂ ಋಣ ತೀರಿಸಲು ಗೌಡನಿಗೆ ಸಾಧ್ಯವಿಲ್ಲವೆಂದು" ಹೇಳುತ್ತಾನೆ.

ಶಾಂತಗೌಡ ಯಜಮಾನಿಕೆಯ ವ್ಯವಸ್ಥೆಯ ಆಳು ಹಾಗೂ ಒಡೆಯನ ನಡುವಿನ ಸಂಬಂಧವನ್ನು ದುರುಗ ಮತ್ತು ಶಾಂತಗೌಡನ ಮೂಲಕ ನಿರೂಪಿಸುವ ಕತೆ, ಶಾಂತಗೌಡ ತನಗೆ ಏನೇ ಬೇಕಾದರೂ, ಎಲ್ಲಿಗೆ ಹೋಗಬೇಕಾದರೂ 'ದುರುಗ' ಎಂದು ಕರೆಯುತ್ತಾನೆ. ದುರುಗನಿಗೆ ಗೌಡನ ಕರೆ ದೇವವಾಣಿಯಂತೆ ಭಾಸವಾಗುತ್ತದೆ.ಊರಿನ ಜನರು ದುರುಗ ಗೌಡನ ಬಂಟ ಹಾಗೂ ಗೌಡನಿಗೆ ಎಡಗೈ ಇದ್ದ ಹಾಗೆ ಎಂದು ಭಾವಿಸುತ್ತಾರೆ. ಶಾಂತಗೌಡನ ತಂಗಿಯ ಮನೆಯಲ್ಲಿದ್ದ ನಾಗಮ್ಮ ದುರುಗನನ್ನು ಕಂಡು "ನೀನು ಈ ಮನೆಯ ಆಳು ಆಗಿರುವುದೇ ನಮ್ಮ ಪುಣ್ಯ ಎನ್ನುತ್ತಾಳೆ. ದುರುಗನಿಗೆ ಶಾಂತಗೌಡ ತನ್ನ ಹೆಂಡತಿ ಚಂದವ್ವನನ್ನು ಲೈಂಗಿಕವಾಗಿ ಬಳಸಿಕೊಂಡರೂ ತನ್ನ ಗುಡಿಸಿಲ ಮುಂದಿದ್ದ ಮರವನ್ನು ಕಡಿದು ಸಲಕರಣೆಯಾಗಿ ಮಾಡಿಕೊಂಡರೂ ಚಿಂತೆ ಹುಟ್ಟಲಿಲ್ಲ. ಆದರೆ ಮಗ ಚೆನ್ನ ಶಾಂತಗೌಡರ ಮಗಳಾದ ಅಕ್ಕಮಹಾದೇವಿಯನ್ನು ಪ್ರೀತಿಸಿ ಲಗ್ನವಾಗುತ್ತೇನೆಂದು ನಿಂತದ್ದು ದುರುಗನನ್ನು ಕುಗ್ಗಿಸಿತು. ದುರುಗ ಚೆನ್ನನ ಕರೆದು ಬುದ್ದಿ ಹೇಳಿದ ಗೌಡರ ಮನೆತನದ ವಿಷಯಕ್ಕೆ ಹೋಗುವುದು ತರವಲ್ಲ ಎಂಬುದರ ಜೊತೆಗೆ ಅಕ್ಕ ಮಹಾದೇವಿಯನ್ನು ಮರೆತುಬಿಡು ಎಂದು ಕೇಳಿಕೊಂಡ. ಆದರೆ ಚೆನ್ನನ ಮನಸಿನಲ್ಲಿ ಆಧುನಿಕ ಶಿಕ್ಷಣದ

ಸಮಾನತೆಯ ಪ್ರಜ್ಞೆ ಹಾಗೂ ಪ್ರೀತಿಯ ಬಗೆಗಿನ ಬಹುತ್ವದ ಆಲೋಚನೆ ಅಕ್ಕ ಮಹಾದೇವಿಯನ್ನು ಲಗ್ನವಾಗಿಯೇ ಆಗುತ್ತೇನೆಂಬ ನಿಲುವುನಿಂದ ಹೊರಬರಲು ಸಾಧ್ಯವಾಗಲಿಲ್ಲ. ದುರುಗ ತನ್ನ ಮಗನಿಂದ ತನ್ನ ಒಡೆಯನಿಗೆ ನೋವಾಯಿತ್ತಲ್ಲವೆಂದು ನೊಂದುಕೊಳ್ಳುತ್ತಾನೆ ಹಾಗೂ ಮಗನಿಗೆ ತನಗೆ ತಿಳಿದಂತೆ ಬುದ್ದಿ ಹೇಳುತ್ತಾನೆ.

'ಯಪ್ಪ, ನೀನೇ ಅಂತಿದ್ದಲ್ಲ, ಹಣೆಬರದಾಗ ಬರೆದದ್ದು ತಪ್ಪಿಸಾಕ ಬ್ರಹ್ಮ ಬಂದ್ರೂ ಸಾದ್ದಿಲ್ಲ ಅಂತ' ಅಂದ ಮಗ

ಅಂದ್ರೇ? ದುರುಗನಿಗೆ ಸಿಟ್ಟು ಬಂತು.

'ಏನಾಗಬೇಕು ಆದಾತಾದ' ಚೆನ್ನ ಅಂದದ್ದೇ ತಡ

"ಇದೇನು ಬಸವ್ವಣ್ಣಪ್ಪನ ಕಾಲ ಏನಲೇ? ಚಪ್ಲಿ ಹೊಲಿವ ಕೈಯಿಗೆ ಲಿಂಗ ಬರದ್ಯಾ! ಅಂತ ಚೀರಿಬಿಟ್ಟ. ಚೆನ್ನ ಸುಮ್ಮನಾದ.

ಚೆನ್ನನ ಪ್ರೀತಿಯ ವಿಚಾರ ಅಂದರೆ ಕೆಳವರ್ಗದವರು ಮೇಲುವರ್ಗದವರನ್ನು ಪ್ರೇಮಿಸುವುದು ದುರುಗನ ಮನಸ್ಸಿಗೆ ಸರಿ ಕಾಣುವುದಿಲ್ಲ. ತನ್ನ ಒಡೆಯನ ಮಗಳನ್ನು ಪ್ರೀತಿಸಿದ್ದು ಚಿಂತೆಗೀಡು ಮಾಡಿತ್ತು. ಬಸವಣ್ಣನ ಕಾಲದಲ್ಲಿ ಉಂಟಾದ ವರ್ಣಸಂಕರವಾದ ವಿವಾಹವು ಯಶಸ್ಸು ಕಾಣದೆ ದಂಗೆಯಾಗಿ ರೂಪುಗೊಂಡಿತು. ಈಗ ೨೧ನೇ ಶತಮಾನದಲ್ಲಿ ವಸಾಹತುಶಾಹಿತ್ವ ನಡುವೇ ಭಾರತೀಯ ಜಾತಿಕೇಂದ್ರಿತ ಯಜಮಾನಿಕ ವ್ಯವಸ್ಥೆಯು ಅತ್ಯಂತ ಬಲಾಢ್ಯವಾಗಿದೆ ಎಂಬ ನಿಲುವನ್ನು ಚೆನ್ನನ ಮೂಲಕ ಕತೆಗಾರರೂ ಮಂಡಿಸುತ್ತಾರೆ. ಮೇಲುವರ್ಗದವರೊಂದಿಗೆ ಕೆಳವರ್ಗದವರ ಸಂಬಂಧವನ್ನು ಸಮಾಜ ಒಪ್ಪಿರುವ ನೆಲೆಯಲ್ಲಿ ಶಾಂತಗೌಡ ಹಾಗೂ ಚಂದವ್ವನ ಸಂಬಂಧವಿದ್ದಂತೆ ಕೆಲವರ್ಗದ ಚೆನ್ನ ಮೇಲುವರ್ಗದ ಅಕ್ಕ ಮಹಾದೇವಿಯೊಂದಿಗೆ ಸಂಬಂಧವನ್ನು ನಿರೂಪಿಸುವ ಜೊತೆಗೆ ಚೆನ್ನನ ಪ್ರೀತಿಯ ಸಂಬಂಧವನ್ನು ಒಪ್ಪಿಕೊಳ್ಳಲಾದ ಸಮಾಜದ ಮಡಿವಂತಿಕೆಯ ಪ್ರಜ್ಞೆಯನ್ನು ತಾತ್ವಿಕವಾಗಿ ವಿಮರ್ಶೆಗೆ ಗುರಿಮಾಡುವ ಮೂಲಕ ದಲಿತ ಸಮುದಾಯದ ಸಂವೇದನೆಯನ್ನು ಸ್ಥಳೀಯತೆ ಎಂದು ಕರೆಯಬಹುದು.

'ನೀರು ತಂದವರು' ಕತೆಯು ಸ್ಥಳೀಯತೆಯ ಸತ್ವವನ್ನು ಊರು ಹಾಗೂ ಕೇರಿಯವರನ್ನು ಒಟ್ಟಿಗೆ ತರುವ ತಾತ್ವಿಕತೆಯನ್ನು ಅನುಸಂಧಾನ ಮಾಡುತ್ತದೆ. ಈ ಭಾಗದ ಜಾತಿ ಕೇಂದ್ರಿತ ಸಾಮಾಜಿಕ ವ್ಯವಸ್ಥೆಯನ್ನು ಮರುಕಟ್ಟುವ ಕಾರ್ಯವನ್ನು ಕತೆಗಾರರು ಮಾಡುತ್ತಾರೆ. ಕೇರಿಯವರಿಗೆ ಕೊಳವೆ ಬಾವಿಯ ಮೋಟಾರು ಹಾಳಾಗಿ ಕೇರಿಯವರಿಗೆ ಊರಿನ ಮೇಲು ವರ್ಗದವರು ಅವರ ಬಾವಿಯಿಂದ ನೀರುಕೊಡದೆ

ಜಾತಿ ಕೇಂದ್ರಿತ ನಿಯಮವನ್ನು ಕಾಪಾಡಿಕೊಳ್ಳುತ್ತಾರೆ. ಕೇರಿಯ ಕೆಲವು ಶಿಕ್ಷಣವಂತ ಯುವಕರು, ವಸಾಹುತು ಕೇಂದ್ರಿತ ಸಮಾನತೆಯನ್ನು ತಮ್ಮ ಬದುಕಿನ ಸಂವೇದನೆಯನ್ನು ಅರ್ಥಮಾಡಿಕೊಳ್ಳುವ ಜೊತೆಗೆ ಯಜಮಾನಿಕೆಯ ಶೋಷಣೆಯನ್ನು ಅರ್ಥಮಾಡಿಕೊಂಡು ಯಜಮಾನಿಕೆಯಿಂದ ಬಿಡಿಸಿಕೊಳ್ಳುವ ಕಡೆಗೆ ನಡೆಯುತ್ತಾರೆ. ಊರವರ ಬಾವಿಯ ಮೋಟಾರು ಕೆಟ್ಟ ನಂತರ ಕೇರಿಯ ವಿದ್ಯಾವಂತ ಮಂದಿ ಊರಿಗೆ ನೀರು ಕೊಡಬಾರದೆಂದು ನಿರ್ಧಾರ ಮಾಡುತ್ತಾರಲ್ಲದೆ, ಊರಿನವರ ಕೇರಿಗೆ ಮಾಡಿದ ಅನ್ಯಾಯವನ್ನು ಈ ಸಂದರ್ಭದಲ್ಲಿ ತೀರಿಸಬೇಕು. ಕೇರಿಯ ಅನೇಕ ಯುವಕರು ಒಂದಾಗುವುದರ ಜೊತೆ ಊರು ಕೇರಿಯ ಸಂಘರ್ಷಕ್ಕೆ ಸಜ್ಜಾಗುತ್ತದೆ.

ಹಿರೀಬುಡ್ಡ, ಸುಂಕಮ್ಮನಂತಹ ಕೇರಿಯ ಹಿರಿ ಜೀವಗಳಿಗೆ ಕೇರಿ ಊರಿನ ನಡುವಿನ ಸಂಘರ್ಷ ಸರಿಕಾಣಲಿಲ್ಲ. ಸಂಘರ್ಷ ಉಂಟಾದರೆ ಕೇರಿಯ ಅನೇಕ ಮಹಿಳೆಯರು ಮಕ್ಕಳು ಸಾವಿಗೀಡಾಗುತ್ತಾರೆ. ಊರಿನ ಮೇಲುಜಾತಿಯವರು ದಲಿತರ ಮೇಲೆ ಉಂಟುಮಾಡಿದ ಶೋಷಣೆ, ಹಿಂಸೆಯನ್ನು ಅವರಿಗೆ ಅರ್ಥ ಮಾಡಿಸುವ ದಾರಿ ಹುಡುಕಬೇಕು ಎಂದು ಆಲೋಚಿಸಿ ಲಿಂಗಾಯಿತ ಮೇಷ್ಟ್ರು ಆದ ರುದ್ರಪ್ಪನ ಕಂಡು ಕೇರಿಯ ಹಿರಿಯರು ಚರ್ಚಿಸುತ್ತಾರೆ.

ರುದ್ರಪ್ಪ ಕೇರಿ ಊರಿನ ಸಂಘರ್ಷವನ್ನು ವಿರೋಧಿಸುವ ಜೊತೆಗೆ ಕೇರಿ ಮತ್ತು ಊರಿನ ಸಂಬಂಧವನ್ನು ಒಂದು ಮಾಡಬೇಕೆಂದು ಆಶಿಸುತ್ತಾನೆ. ಕೇರಿಯ ಮುಖಂಡರಿಗೆ ರುದ್ರಪ್ಪ ಶರಣ ತತ್ವವನ್ನು ಮಾನವ ಪ್ರೀತಿಯನ್ನು ಪ್ರತಿಪಾದಿಸುತ್ತಾನೆ.

ನಾವು ಪ್ರೀತಿಯನ್ನು ಮೆರೀಬೇಕು, ಮಲ ತಿನ್ನಿಸಿದವುರ ಕೈಗೆ ಅನ್ನ ನೀಡಬೇಕು, ಉಚ್ಚೆ ಕುಡಿಸಿದ ಕೈಯಿಗೆ ನೀರು ಕೊಡಬೇಕು. ಬೆತ್ತಲೆ ಮಾಡಿದವರಿಗೆ ಬಟ್ಟೆ ತೊಡಿಸಬೇಕು, ಅವಾಗ ಅವುರಿಗೆ ನಾಚಿಕೆ ಬರ್ತಾದೇನು ನೋಡಬೇಕು" ಎನ್ನುತ್ತಾನೆ. ಈ ಮಾತನ್ನು ಒಪ್ಪಿಕೊಂಡ ಕೇರಿಯ ಮಂದಿ ಊರಿಗೆ ನೀರು ಕೊಡಲು ನಿರ್ಧರಿಸುತ್ತಾರೆ. ಬೆಳಕು ಊರನ್ನು ತುಂಬುವ ಮೊದಲೆ ಕೇರಿಯ ಮಂದಿ ಮಕ್ಕಳು ಸೇರಿ ಊರಿಗೆ ನೀರು ಹಂಚುತ್ತಾರೆ. ಕತೆಯ ತಾತ್ವಿಕ ನಿಲುವು ಮಾನವ ಪ್ರೀತಿ ಹಾಗೂ ಜಾತಿ ಧರ್ಮ ಪ್ರದೇಶವನ್ನು ದಾಟಿದ ಸಂಬಂಧವನ್ನು ಬೆಸೆಯುವುದು.

ಕಲ್ಯಾಣ ಕನಾಟಕ ಭಾಗದ ಕತೆಗಾರರ ಕತೆಗಳು ವಸಾಹತುಶಾಹಿಯ ಪ್ರೇರಣೆಯನ್ನು ಕೇಂದ್ರವಾಗಿಸಿಕೊಂಡು ರಚನೆಯಾದಂತೆ ಕಾಣುತ್ತದೆ. ಆಧುನಿಕ ಶಿಕ್ಷಣ ಪ್ರಭಾವ ಮತ್ತು ಆಧುನಿಕ ಬೆಳವಣಿಗೆ ಕಲ್ಯಾಣ ಕರ್ನಾಟಕವು ಪ್ರವೇಶ ಪಡೆದ ಮೇಲೆ ಅನೇಕ ಭೌತಿಕ

ಮತ್ತು ಸಾಂಸ್ಕೃತಿಕ ಬದಲಾವಣೆಯನ್ನು ಪಡೆದುಕೊಂಡಿದ್ದನ್ನು ಗ್ರಹಿಸಿದ ಕಲ್ಯಾಣ ಕರ್ನಾಟಕ ಭಾಗದ ಕತೆಗಾರರು ತಮ್ಮ ಪ್ರದೇಶ ನೈಜ ಬದುಕಿನ ಸತ್ವವನ್ನು ಸ್ಥಳೀಯತೆಯ ನೆಲೆಯಲ್ಲಿ ಅನುಸಂಧಾನ ಮಾಡುತ್ತಾರೆ. ಈ ಭಾಗದಲ್ಲಿ ಜೀವಂತವಾಗಿರುವ ಯಜಮಾನಿಕೆ ಪ್ರಭುತ್ವವನ್ನು ಅದರ ಜೊತೆಗಿನ ದುಡಿಯುವ ವರ್ಗಗಳ ಸಂಬಂಧವನ್ನು ಸೂಕ್ಷ್ಮವಾಗಿ ಗುರುತಿಸುವ ಕತೆಗಾರರು ಮಾನವೀಯ ಮೌಲ್ಯವನ್ನು ಮರುಕಟ್ಟುವ ಕೆಲಸವನ್ನು ಮಾಡುತ್ತಾರೆ. ದುಡಿಯುವ ದಲಿತ ವರ್ಗದ ಜೀವನ ಮೀಮಾಂಸೆಯನ್ನು ಶೋಧಿಸುವ ಕಾರ್ಯವನ್ನು ಕತೆಗಳು ನಿರ್ವಹಿಸುತ್ತವೆ.

ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣಕ್ಕೆ ಒಳಗಾದ ಈ ಭಾಗದ ಜೀವನ ಮೀಮಾಂಸೆಯು ತನ್ನ ಮೂಲ ಸತ್ವವನ್ನು ಕಳೆದುಕೊಂಡು ಬರೀದಾಗುತ್ತಿರುವುದನ್ನು ಗ್ರಹಿಸಿರುವ ಕತೆಗಾರರು ಆಧುನಿಕ ನಗರೀಕರಣ ಹಾಗೂ ಅಭಿವೃದ್ಧಿವೆಂಬ ಬಂಡವಾಳ ಶಾಹಿತ್ವವನ್ನು ನಿರಾಕರಿಸುವ ಜೊತೆಗೆ ಸ್ಥಳೀಯ ಜೀವನ ಮೀಮಾಂಸೆಯನ್ನು, ಪರಿಸರವನ್ನು, ಸಾಂಸ್ಕೃತಿಕ ನೆಲೆಗಳನ್ನು, ಸತ್ವಪೂರ್ಣವಾಗಿ ಕಟ್ಟಲು ಕತೆಯೆಂಬ ಮಾದರಿಯನ್ನು ಬಳಸಿಕೊಂಡು ಯಶಸ್ವಿಯಾಗಿದ್ದನ್ನು ಗುರುತಿಸಬಹುದು. ಈ ಭಾಗದ ಕತೆಗಾರ ಕತೆಗಳ ಮೂಲಸತ್ವ ಸ್ಥಳೀಯತೆಯೇ ಆಗಿದ್ದು, ಸ್ಥಳೀಯತೆಯನ್ನು ಮರುಕಟ್ಟುವ ಹಾಗೂ ಆಧುನಿಕ ಪರಿಸರದ ಮುಂದಿಡುವ ಕೆಲಸವನ್ನು ಅನೇಕ ಕತೆಗಳು ಮಾಡುತ್ತವೆ.

ಅಧ್ಯಾಯ - ೬

# ಮೊದಲ ತಲೆಮಾರಿನ ಕತೆಗಳಲ್ಲಿ ಸ್ಥಳೀಯತೆ ಮತ್ತು ಪಾತ್ರ ಚಿತ್ರಣ

ಹತ್ತೊಂಭತ್ತನೆಯ ಶತಮಾನದ ಅಂತಿಮ ಕಾಲ ಹಾಗೂ ಆ ಶತಮಾನದ ಮೊದಲ ದಶಕಗಳಲ್ಲಿ ವಸಾಹತೀಕರಣ, ವಿಜ್ಞಾನ, ಶಿಕ್ಷಣ, ಕೈಗಾರಿಕೆ, ಸ್ಥಳೀಯ ಸಾಂಸ್ಕೃತಿಕ ಪ್ರಜ್ಞೆ, ಸಾಮಾಜಿಕ ಪಲ್ಲಟದಿಂದ ಹುಟ್ಟಿಕೊಂಡ ತಲ್ಲಣ, ಪ್ರಬಲ ರಾಜಕೀಯ ಶಕ್ತಿಯ ಸಂಘರ್ಷಗಳಿಂದ ಉಂಟಾಗಿರುವ ಸಾಂಸ್ಕೃತಿಕ ಕಂಪನಗಳಿಂದ ಸೃಜನಶೀಲವಾದ ಕತೆಗಳು ಜೀವಪಡೆಯುವುದರ ಜೊತೆಗೆ ಕನ್ನಡ ಕತೆಗಳಿಗೆ ಒಂದು ಪರಂಪರೆಯನ್ನು ಹುಟ್ಟುಹಾಕಿದವು. ಮೊದಲ ತಲೆಮಾರಿನ ಕತೆಗಾರರು ತಮ್ಮ ಸಮಕಾಲೀನ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ವಿದ್ಯಮಾನಗಳಿಂದ ತಮ್ಮ ಸ್ಥಳೀಯ ಸತ್ವ ಮತ್ತು ಆಶಯವನ್ನು ಕತೆಯ ಮೂಲಕ ಶೋಧಿಸಿದರು. ಕತೆಗಾರರು ಸ್ಥಳೀಯತೆಯನ್ನು ಮಂಡಿಸಲು, ಹಳೆಯ ಜೀವನ ಮೌಲ್ಯ ಮತ್ತು ಹೊಸದಾದ ಆಧುನಿಕ ಜೀವನ ವಿನ್ಯಾಸದ ಸಂಘರ್ಷವನ್ನು ನಿರೂಪಿಸಲು ತಮ್ಮದೇ ಆದ ಸ್ಥಳೀಯ ಸತ್ವ ಮತ್ತು ಸ್ವರೂಪವಿರುವ ಪಾತ್ರಗಳನ್ನು ಕತೆಯಲ್ಲಿ ತಂದರು. ನಾನು ಈ ಅಧ್ಯಯನದಲ್ಲಿ ಕತೆಗಳಲ್ಲಿ ನಿರೂಪಣೆಗೊಂಡಿರುವ ಪಾತ್ರಗಳನ್ನು ಸ್ಥಳೀಯ ಪಾತ್ರ ಮತ್ತು ಆಧುನಿಕ ಪಾತ್ರಗಳೆಂದು ಗುರುತಿಸಿ ಚರ್ಚಿಸಿದ್ದೇನೆ.

ಸ್ಥಳೀಯ ಪಾತ್ರವೆಂದು ಕತೆಯೊಳಗಿನ ಪಾತ್ರವನ್ನು ಚರ್ಚಿಸುವಾಗ ನಮ್ಮ ನಂಬಿಕೆಯನ್ನು ಪ್ರತಿನಿಧಿಸುವ ನಮ್ಮ ನೆಲದ ಸತ್ವದೊಂದಿಗೆ ಆಚಾರ-ವಿಚಾರವನ್ನು ಗುಣಾತ್ಮಕವಾಗಿ ಮೈಗೂಡಿಸಿಕೊಂಡಿರುವ ಮತ್ತು ಪಾಶ್ಚಾತ್ಯ ಜೀವನ ಕ್ರಮದ ಸೋಗಿಗೆ ಹೋಗದೆ ನಮ್ಮ ಭಾರತೀಯ ಪರಂಪರೆಯ ಜೀವನ ಮೌಲ್ಯವನ್ನು ತನ್ನ ಅಸ್ತಿತ್ವದ ಭಾಗವಾಗಿಸಿಕೊಂಡಿರುವ ಪಾತ್ರಗಳನ್ನು ಸ್ಥಳೀಯ ಪಾತ್ರಗಳೆಂದು ಗುರುತಿಸಿ ಚರ್ಚಿಸಲಾಗಿದೆ

ಹಾಗೆಯೇ ವಸಾಹತುಶಾಹಿಯ ಪ್ರಭಾವ ಮತ್ತು ಪ್ರೇರಣೆಗೆ ಒಳಗಾಗಿ ರೂಪಗೊಂಡಿರುವ ಪಾತ್ರಗಳನ್ನು ಆಧುನಿಕ ಮಾದರಿಯ ಪಾತ್ರಗಳೆಂದು ಚರ್ಚಿಸುವ ಜೊತೆಗೆ ಸ್ಥಳೀಯ ಪಾತ್ರ ಮತ್ತು ಆಧುನಿಕ ಪಾತ್ರದ ನಡುವಿನ ಹೊಂದಾಣಿಕೆ, ಕೊಡುಕೊಳ್ಳುವಿಕೆ, ಸಂಘರ್ಷ ಹಾಗೂ ಪ್ರತ್ಯೇಕ ಅಸ್ತಿತ್ವದ ಪ್ರಶ್ನೆಗಳನ್ನು ಶೋಧಿಸಿ, ಚರ್ಚಿಸಲಾಗಿದೆ. ಗ್ರಾಮ ಸಮುದಾಯದಲ್ಲಿ ನಡೆಯುವ ಜೀವನ ವಿನ್ಯಾಸವನ್ನು ಹೇಳುವ ಜೊತೆಗೆ ಸುಧಾರಣೆಯ ಪ್ರಜ್ಞೆಯನ್ನು ಕಾಪಿಟ್ಟುಕೊಳ್ಳುವ 'ಮಲ್ಲೇಸಿಯ ನಲ್ಲೆಯರು" ಎಂಬ ಕೆರೂರು ವಾಸುದೇವಾಚಾರ್ಯರ ಕತೆಯಲ್ಲಿನ 'ಮಲ್ಲೇಶಿ' ಎಂಬ ಪಾತ್ರವು ಸ್ಥಳೀಯ ಸತ್ವವನ್ನು ಅತ್ಯಂತ ಸೂಕ್ಷ್ಮವಾಗಿ ಮೈಗೂಡಿಸಿಕೊಂಡಿದೆ. ಕತೆಯುದ್ದಕ್ಕೂ ಮಲ್ಲೇಶಿಯು ಮುಗ್ಧ ಮತ್ತು ಬಾಹ್ಯ ಜಗತ್ತಿನ ವ್ಯವಹಾರಕ್ಕೆ ತನ್ನನ್ನು ತೆರೆದುಕೊಳ್ಳದ ಭಾರತೀಯ ನೆಲದ ಸತ್ವವನ್ನು ಹೊಂದಿರುವ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ದೇಸಾಯಿಯವರ ಕೆಲಸದ ಆಳಾಗಿರುವ ಮಲ್ಲೇಶಿಯು ಸೀದಾ-ಸಾದ-ಮುಗ್ದನಾಗಿ. ಮೋಸ, ಸುಳ್ಳು, ವ್ಯಾವಹಾರಿಕ ಜಗತ್ತಿನ ಜೀವನ ವಿನ್ಯಾಸವನ್ನು ಅರಿಯುದೆ ಯಾರು ಏನನ್ನೇ ಹೇಳಿದರೂ ಅದನ್ನು ನಂಬುವ ಮೂಲ ಸ್ವಭಾವದವನಾಗಿರುವನು.

ಮಲ್ಲೇಶಿ ತಾನು ಲಗ್ನವಾಗುವ ಕನ್ಯೆಯನ್ನು ಗೊತ್ತು ಮಾಡಿಕೊಳ್ಳಲು ಊರೂರು ತಿರುಗಿ ಮೂರು ಜನ ಕನ್ಯೆಯರನ್ನು ಎದುರುಗೊಂಡು ಮಾತನಾಡುತ್ತಾನೆ. ಮೂರು ಮಂದಿ ಕನ್ಯೆಯರು ಮಲ್ಲೇಶಿಯನ್ನು ಪೆದ್ದನೆಂದು ಗ್ರಹಿಸಿಕೊಂಡು ತಮಾಷೆ ವಸ್ತುವಾಗಿ ನೋಡುತ್ತಾರೆ ಮತ್ತು ತಮಾಷೆಯ ಭಾಗವಾಗಿಯೇ ಮಾತನಾಡಿಸಿ ಖುಷಿಪಡುತ್ತಾರೆ. ಈ ನಡುವೆ ಮಲ್ಲೇಶಿಯು ಕನ್ಯೆಯರ ಮಾತುಗಳನ್ನು ನಂಬುತ್ತಾನೆ ಮತ್ತು ಆ ಕನ್ಯೆಯರೆಲ್ಲ ತನ್ನ ಹೆಂಡತಿಯರಾಗುತ್ತಾರೆ ಎಂದೂ ನಿರ್ಧರಿಸುತ್ತಾನೆ. ಮಲ್ಲೇಶಿಯ ನಿರ್ಧಾರ, ಅವರ ಮಾತು ಚಲನವಲನಗಳು ಮುಗ್ದವಾದ, ಬಾಹ್ಯ ಪ್ರಪಂಚಕ್ಕೆ ಪ್ರವೇಶ ಪಡೆಯದೆ ಇರುವ ಪಾತ್ರವಾಗಿ ಕತೆಗಾರರು ಸ್ಥಳೀಯ ಜೀವನ ಮೀಮಾಂಸೆಯನ್ನು ಹುಡುಕಲು ಪ್ರಯತ್ನಿಸುತ್ತಾರೆ.

ಕೊರಡ್ಕಲ್ ಶ್ರೀನಿವಾಸರಾವ್ ಅವರ ಧನಿಯರ ಸತ್ಯನಾರಾಯಣ ಕತೆಯನ್ನು ನಡೆಸುವ ತೌಡ, ಬೂದ, ತುಕ್ರಿ ಮತ್ತು ದೈಯಿ ಪಾತ್ರಗಳು ನಮ್ಮ ನೆಲದ ದುಡಿಯುವ ಸತ್ವವನ್ನು ಹೊಂದಿಕೊಂಡಂತೆ ನಿರೂಪಿತಗೊಂಡಿದೆ. ನಮ್ಮೊಳಗೆ ಇರುವ ಯಜಮಾನಿಕೆಯ ರಾಜಕೀಯದ ಒಳಗಡೆ ದುಡಿಯುವ ಬಡತನದ ಬದುಕನ್ನು ಕಟ್ಟಿಕೊಂಡು ಹಸಿವು, ಶೋಷಣೆಯನ್ನು ನುಂಗಿಕೊಂಡು ಜೀವನವನ್ನು ನಡೆಸುವ ಸ್ಥಳೀಯ ಪಾತ್ರಗಳಾಗಿವೆ. ಬೂದ-ತುಕ್ರಿಯರು ತನ್ನ ಅಜ್ಜಿಮನೆಗೆ ತೆರಳಿದಾಗ ಅಜ್ಜಿಯು ತನ್ನ ಮೊಮ್ಮಕ್ಕಳಿಗೆಂದು

ರಸಬಾಳೆಯನ್ನು ಅಡಗಿಸಿಟ್ಟು ಕೊಡುವುದು. ಬೂದ-ತುಕ್ರಿಯರು ಮನೆಗೆ ಹೊರಡುವಾಗ ಬಾಳೆಯ ಕಂದನ್ನು ಅಜ್ಜಿಯಿಂದ ಬೇಡಿ ಕಾಡಿ ಪಡೆದುಕೊಂಡು ಅಣ್ಣ-ತಂಗಿ ಇಬ್ಬರು ಕಷ್ಟಪಟ್ಟು ಹೊತ್ತು ಮನೆಗೆ ತಂದ ಮೇಲೆ ತಂದೆಯಾದ ತೌಡನನ್ನು ಬೇಡಿ ಬಾಳೆ ಕಂದನ್ನು ನೆಡುವುದು. ನಂತರ ದಿನದಲ್ಲಿ ನೀರುಹಾಕಿ ಬಾಳೆಯ ಬೆಳವಣಿಗೆಯನ್ನು ನೋಡುವುದು ನಮ್ಮ ಗ್ರಾಮೀಣ ಪ್ರದೇಶದ ಬದುಕಿನ ಭಾಗವಾಗಿದೆ. ತೌಡನ ಧನಿಗಳಾದ ನಾಗಪ್ಪಯ್ಯ ಗೇಣಿಯ ವಿಚಾರದಲ್ಲಿ ತೌಡನನ್ನು ಗದರಿಸುವ ಕ್ರಮ ಹಾಗೂ ಬಾಳೆಗೊನೆಯನ್ನು ಕಂಡು ಸತ್ಯನಾರಾಯಣ ದೇವರ ಹೆಸರಿನಲ್ಲಿ ಕಸಿದುಕೊಳ್ಳುವ ಯಜಮಾನಿಕೆಯ ಧೋರಣೆಗಳು. ನಾಗಪ್ಪಯ್ಯನ ಮೂಲಕ ಪ್ರತಿನಿಧಿತವಾಗುತ್ತದೆ. ಯಜಮಾನಿಕೆಯ ವ್ಯವಸ್ಥೆಯ ಒಳಗಡೆ ದುಡಿಯುವ ವರ್ಗಗಳ ಸಂಕಟವು ತೌಡನ ಮೂಲಕ ವ್ಯಕ್ತವಾಗುತ್ತದೆ. ತನ್ನ ಧನಿ ನಾಗಪ್ಪಯ್ಯ ಬಾಳೆಗೊನೆಯನ್ನು ಪೂಜೆಗೆ ತರಹೇಳಿದಾಗ ತೌಡನಿಗೆ ಧರ್ಮಸಂಕಟದ ಸ್ಥಿತಿ ಎದುರಾಗುತ್ತದೆ. ಧನಿ ಹೇಳಿದ ಮಾತಿಗೆ ಒಪ್ಪಿಕೊಂಡು ಹೋಗುವ ಎಂದರೆ ತನ್ನ ಮಕ್ಕಳು ನೀರುಹಾಕಿ ಪಾಲನೆ ಮಾಡಿ. ಬೆಳೆಸಿದ ಬಾಳೆಹಣ್ಣಿಗಾಗಿ ಆಸೆಗಣ್ಣಿಂದಿರುವುದರಿಂದ ತೌಡ ಧನಿಯೊಂದಿಗೆ ಕಡೆಯ ನಜ್ಜುಗುಜ್ಜಾದ ಒಂದು ಚಿಪ್ಪು ಬಾಳೆಹಣ್ಣನ್ನು ಬೇಡುವ ಬಗೆ ಸ್ಥಳೀಯವಾದ ಬದುಕಿನ ಕ್ರಮವಾಗಿದೆ. ಈ ನಿಲುವಿನಿಂದ ತೌಡ-ಬೂದ, ತುಕ್ರಿಯ ಪಾತ್ರಗಳನ್ನು ಸ್ಥಳೀಯ ಪಾತ್ರವೆಂದು ಚರ್ಚಿಸಬಹುದು.

ಪಂಜೆಯವರ 'ಕಮಲಪುರದ ಹೊಟ್ಲಿನಲ್ಲಿ' ಎಂಬ ಕತೆಯಲ್ಲಿ ನಿರೂಪಿತಗೊಳ್ಳುವ ಅಯ್ಯಂಗಾರರು ಮತ್ತು ಗುಂಡಾಚಾರ್ರು ಎಂಬ ಎರಡು ಪಾತ್ರಗಳು ಆಧುನಿಕ ಸೋಗನ್ನು ಮೈಗೂಡಿಸಿಕೊಂಡಿವೆ. ವಸಾಹತುಶಾಹಿಯ ವ್ಯವಹಾರ ಚಟುವಟಿಕೆಗಳನ್ನು ಪ್ರಧಾನವಾಗಿ ಗಮನವಾಗಿಸಿಕೊಂಡು ನಿರೂಪಿತವಾಗಿರುವ ಈ ಕತೆಯೊಳಗೆ ಅಯ್ಯಂಗಾರು ತನ್ನ ಹೊಟ್ಲಿನಲ್ಲಿ ವ್ಯವಹಾರವನ್ನು ಹೆಚ್ಚುಗೊಳಿಸಿ ಲಾಭಾಂಶವನ್ನು ಗಳಿಸುವ ಉದ್ದೇಶದಿಂದ ಹೋಟ್ಲಿಗೆ ಬಂದ ಗಿರಾಕಿಗಳನ್ನು ತನ್ನತ್ತ ಸೆಳೆಯುವ ಮತ್ತು ತನ್ನ ಹೋಟ್ಲಿನ ಪದಾರ್ಥಗಳನ್ನು ಮಾರಾಟ ಮಾಡುವ ಸಲುವಾಗಿ ಅನೇಕ ಕತೆಗಳನ್ನು ಜಾಹಿರಾತಿನಂತೆ ಹೇಳುವ ಮೂಲಕ ವ್ಯಾಪಾರ ತಂತ್ರವನ್ನು ಬಳಸಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ಪೊನ್ನಸ್ವಾಮಿ ಅಯ್ಯಂಗಾರನು ತನ್ನ ಗೆಳೆಯನಾದ ಗುಂಡಾಚಾರ್ರನ್ನು ತನ್ನ ಸುಳ್ಳಿನ ಮಾತುಗಳಿಗೆ ಬೆಂಬಲ ನೀಡುವ ಭಾಗವಾಗಿ ಬಳಸಿಕೊಳ್ಳುತ್ತಾನೆ. ಪೊನ್ನಸ್ವಾಮಿಯ ಮಾತುಕತೆ, ವ್ಯಾಪಾರದ ತಂತ್ರಗಳು, ಗಿರಾಕಿಗಳಿಂದ ಹಣ ವಸೂಲಿ ಮಾಡುವ ತಂತ್ರ ಇತ್ಯಾದಿಗಳನ್ನು ಗುರುತಿಸಿಕೊಂಡು ಆಧುನಿಕನೆಲೆಯ ಪಾತ್ರವೆಂದು ಕರೆಯಬಹುದು.

ಸ್ಥಳೀಯ ಪಾತ್ರ ಮತ್ತು ಆಧುನಿಕ ಪಾತ್ರಗಳನ್ನು ಮುಖಾಮುಖಿಯಾಗಿಸುವ ಜೊತೆಗೆ ನಮ್ಮ ಸ್ಥಳೀಯ ನಂಬಿಕೆಯನ್ನು ಗುಣಾತ್ಮಕವಾಗಿ ನಿರೂಪಿಸುವ ಕತೆ 'ಅಂಧಶ್ರದ್ಧೆ' ಸಿ.ಎನ್. ಜಯಲಕ್ಷ್ಮೀ ದೇವಿಯರದ್ದು. ಕತೆಗಾರ್ತಿಯು ಸೋಮು ಪಾತ್ರದ ಮೂಲಕ ವಸಾಹತುಶಾಹಿಯ ಪ್ರಜ್ಞೆ ಮತ್ತು ವೈಚಾರಿಕ ಮನೋಭಾವವನ್ನು ಸೂಕ್ಷ್ಮವಾಗಿ ಮಂಡಿಸುತ್ತಾರೆ. ಶಿವನ ಮಾವನ ಪಾತ್ರವು ಭಾರತೀಯ ನಂಬಿಕೆಯ ಭಾಗವಾಗಿಯೇ ಕತೆಯುದ್ದಕ್ಕೂ ನಿರೂಪಿತಗೊಳ್ಳುತ್ತದೆ. ಶಿವನ ಮಾವನು ಮೌಢ್ಯವಾಗಿ ವರ್ತಿಸದೆ ಭಾರತೀಯ ನಂಬಿಕೆಯನ್ನು ಪ್ರತಿಪಾದಿಸುತ್ತ ನಡೆಯುತ್ತಾನೆ. ತಿರುಪತಿ ತಿಮ್ಮಪ್ಪ ಭಕ್ತರಿಗೆ ಸಹಾಯ ಮಾಡಿದ ಬಗೆಯನ್ನು ಹೇಳುತ್ತ ನಮ್ಮ ಪರಂಪರೆಯ ಗೆಲುವಿನ ಭಾಗವಾಗಿ ನಿಲ್ಲುತ್ತಾನೆ. ಈ ಕತೆಯಲ್ಲಿ ಶಿವ ಮಾವನನ್ನು ಸ್ಥಳೀಯ ಪಾತ್ರವಾಗಿ ಮತ್ತು ಸೋಮನನ್ನು ಆಧುನಿಕ ಪಾತ್ರವಾಗಿ ಗುರುತಿಸಬಹುದು.

ಬಾಗಲೋಡಿ ದೇವರಾಯರ 'ಘಟಭಾಂಡೇಶ್ವರ' ಕತೆಯು ಭಾರತೀಯ ಪರಂಪರೆಯ ಭಾಗವಾಗಿ ನಿರೂಪಿತಗೊಂಡರೂ ಸೂಕ್ಷ್ಮವಾಗಿ ಭಾರತೀಯ ರಾಜವಂಶದ ಪರಂಪರೆಯ ನಿಯಮಗಳನ್ನು ಮುರಿಯುವ ಮೂಲಕ ಯಾರಿಗೆ ಶಕ್ತಿ-ಕೌಶಲ್ಯಗಳಿರುತ್ತದೆಯೇ ಅವರು ರಾಜನಾಗಬಹುದು, ಬ್ರಾಹ್ಮಣನಾಗಬಹುದು, ಕ್ಷತ್ರಿಯನಾಗಬಹುದು ಎಂಬ ತಾತ್ವಿಕತೆಯನ್ನು ಮಂಡಿಸುತ್ತದೆ. ಕತೆಯಲ್ಲಿ ನಿರೂಪಿತಗೊಂಡಿರುವ ಚಂದ್ರಪ್ಪ ಕುಂಬಾರನ ಪಾತ್ರವು ಸ್ಥಳೀಯತೆಯ ಸ್ಪರ್ಶದ ನೆಲೆಯಲ್ಲಿಯೇ ಗುರುತಿಸಬಹುದಾಗಿದೆ, ಚಂದ್ರಪ್ಪ ಕುಂಬಾರ ಊರಿನ ಗುರಿಕಾರನಾಗಿದ್ದು ತನ್ನ ಪ್ರಾಮಾಣಿಕತೆ ಮತ್ತು ವೃತ್ತಿಗಳಿಂದ ಸರ್ವಗೌರವವನ್ನು ಪಡೆದಿದ್ದ. ಬಲ್ಲಾಳರಿಗೂ, ಮುಲ್ಕಿಯ ಸಾಮಂತರಿಗೂ, ಅಜಿಲರಿಗೂ ಮತ್ತು ಬೈರವ ಅರಸರಿಗೆ ಮಡಿಕೆ, ಹಂಡೆಗಳನ್ನು ರೂಪಿಸಿ, ನೀಡುವನಾಗಿದ್ದ. ಚಂದ್ರಪ್ಪ ಕುಂಬಾರನ ವೃತ್ತಿಯನ್ನು ಮೆಚ್ಚಿ ಅರಸರು ಕೈಗೆ ಚಿನ್ನದ ಬಳೆಯನ್ನು ನೀಡಿದ್ದರು. ಚಂದ್ರಪ್ಪನಿಗೆ ತನ್ನ ಕುಲಕಸಬನ್ನು ಉಳಿಸಿಕೊಂಡು ಹೋಗಬೇಕು ತನ್ನ ಜಾತಿ, ವೃತ್ತಿ ಪರಂಪರೆಯ ಜೊತೆಯಲ್ಲೆ ಬದುಕಬೇಕೆಂಬ ನಿಲವು. ಆದರೆ ತನ್ನ ಮಗ 'ಐತು' ಬ್ರಾಹ್ಮಣರ ಹುಡುಗರ ಜೊತೆ ಸೇರಿಕೊಂಡು ಅಕ್ಷರ ಮತ್ತು ಬಿಲ್ಲು-ಬಾಣಗಳ ಅಭ್ಯಾಸವನ್ನು ಕಲಿಯುವುದು ಚಂದ್ರಪ್ಪನಿಗೆ ಒಪ್ಪುವುದಿಲ್ಲ. ಧರಣೇಂದ್ರನೆಂಬ ಬ್ರಾಹ್ಮಣನು ವೈಚಾರಿಕತೆಯ ಆಲೋಚನೆಗಳನ್ನು ಚಂದ್ರಪ್ಪನಿಗೆ ಹೇಳಿದರೂ ಚಂದ್ರಪ್ಪ ತನ್ನ ಮಗನ ಭವಿಷ್ಯವನ್ನು ತನ್ನ ಕುಲವೃತ್ತಿಯ ಪರಂಪರೆಯೊಳಗೆ ನೋಡಲು ಬಯಸುತ್ತಾನೆ. ಚಂದ್ರಪ್ಪ ಕುಂಬಾರನ ಪಾತ್ರವನ್ನು ನಾವು ಸ್ಥಳೀಯತೆ ಸತ್ವದ ಪಾತ್ರವೆಂದು ಕರೆಯಬಹುದು. ಈ ಕತೆಯಲ್ಲಿ ಕತೆಗಾರರು ಧರಣೇಂದ್ರನೆಂಬ ಆಧುನಿಕ

ಮಾದರಿಯ ಪಾತ್ರವನ್ನು ರೂಪಿಸಿದ್ದಾರೆ. ಧರಣೇಂದ್ರ ಒಬ್ಬ ಬ್ರಾಹ್ಮಣನಾದರೂ ತನ್ನ ವೈದಿಕ ಪ್ರಭುತ್ವ ಪರಂಪರೆಯ ನಿಲುವುಗಳನ್ನು ಪ್ರತಿರೋಧಿಸುತ್ತ ಸಮಾನತೆಯ ಪರಿಕಲ್ಪನೆಯನ್ನು, ಸಾಮರ್ಥ್ಯದ ನಿಲುವಿನ ಜ್ಞಾನದ ಅಭಿವ್ಯಕ್ತಿಯನ್ನು ಪ್ರತಿನಿಧಿಸುತ್ತಾನೆ. ಧರಣೇಂದ್ರನಲ್ಲಿ ವ್ಯಕ್ತವಾಗುವ ಜಾತಿ ನಗಣ್ಯ ನಿಲುವು, ಸಮಾನತೆಯ ತತ್ವ, ಎಲ್ಲಾ ವರ್ಗ-ವರ್ಣದವರು ಅಕ್ಷರ ಕಲಿಯಬಹುದೆಂಬ ಮಾತುಗಳು ವಸಾಹತುಶಾಹಿಯ ಪ್ರೇರಣೆಯ ಭಾಗವಾಗಿದೆ. ಹೀಗಾಗಿ ಧರಣೇಂದ್ರನನ್ನು ಆಧುನಿಕ ಪಾತ್ರವೆಂದು ಗುರುತಿಸಬಹುದು.

ಅಶ್ವತ್ಥರ 'ದೊಂಬರದಾಸ' ಕತೆಯು ಸ್ಥಳೀಯ ಪರಂಪರೆಯನ್ನು ಉಳಿಸಿಕೊಳ್ಳುವ ತಾತ್ವಿಕತೆಯನ್ನು ಹೊಂದಿರುವ ಕತೆಯಾಗಿ ಕಂಡುಬರುತ್ತದೆ. ಈ ಕತೆಯಲ್ಲಿ ಬರುವ ದೊಂಬರದಾಸನೆಂಬ ಪಾತ್ರವು ಸ್ಥಳೀಯವಾದ, ಮುಗ್ಧತೆಯ ಪ್ರತೀಕವಾದ, ತನ್ನ ಪರಂಪರೆಯ ವೃತ್ತಿಯಿಂದ ಮೋಕ್ಷವನ್ನು ಕಾಣುತ್ತದೆ. ಕತೆಗಾರರು ದೊಂಬನ ಮೂಲಕ ಸ್ಥಳೀಯತೆಯನ್ನು ಅಭಿವ್ಯಕ್ತಿಸುತ್ತಾರೆ. ಈ ಅಭಿವ್ಯಕ್ತಿಯಲ್ಲಿ ದೊಂಡನು ತನ್ನ ತನದ ಅಸ್ಮಿತೆಯನ್ನು ಬಿಟ್ಟು ಬೇರೆ ಯಾವ ಪ್ರಭಾವ ಮತ್ತು ಪ್ರೇರಣೆಗೆ ತನ್ನನ್ನು ತೆರೆದುಕೊಳ್ಳುವುದಿಲ್ಲ. ದೊಂಬರದಾಸನು ತನ್ನ ವೃತ್ತಿಯಾದ ದೊಂಬರಾಟದ ಮೂಲಕ ಜೀವನ ನಡೆಸುತ್ತಾನೆ, ಕುಣಿತ, ಹಗ್ಗ ಮೇಲಿನ ನಡಿಗೆ, ಶರೀರದ ಭಿನ್ನ-ಭಿನ್ನ ಬಗೆಯ ಕಸರತ್ತುಗಳು ದೊಂಬರದಾಸನಿಗೆ ಹೆಸರನ್ನು, ಹೊಟ್ಟೆಗೆ ಆಹಾರವನ್ನು ಒದಗಿಸಿತ್ತು. ದೊಂಬರದಾಸನು ದುರ್ಗಾದೇವಿಯ ಭಕ್ತನು ಆಗಿದ್ದರಿಂದ ಒಬ್ಬ ಜಂಗಮನ ಪರಿಚಯದಿಂದ ದುರ್ಗಾದೇವಿಯ ಮಠಕ್ಕೆ ಸೇರಿಕೊಂಡು ದೀಕ್ಷೆಪಡೆದು ದೊಂಬರದಾಸಿಮಯ್ಯನಾದ. ದೀಕ್ಷೆಪಡೆದ ಮೇಲೆ ಮಠದಲ್ಲಿ ಇತರ ಜಂಗಮರು ದೇವಿಯ ಮಂತ್ರ ಪಠಿಸುವುದು, ಹಾಡು ಬರೆಯುವುದು, ಚಿತ್ರಬಿಡಿಸುವುದು ದೇವಿಯ ಮೂರ್ತಿ ನಿರ್ಮಿಸಿ ದೇವಿಯನ್ನು ಆರಾಧಿಸುತ್ತಿದ್ದರು. ದೊಂಬನಿಗೆ ಈ ಯಾವ ಕೆಲಸವು ತಿಳಿಯದೆ, ಕೊರಗಿದ ಮತ್ತು ಯಾವುದನ್ನು ಕಲಿಯಲು ಹೋಗದ ಕೊನೆಗೆ ತನ್ನ ವೃತ್ತಿಯ ಭಾಗವಾದ ದೊಂಬರಾಟದ ಭಂಗಿಯನ್ನೆ ದೇವಿಯ ಮುಂದೆ ಪ್ರದರ್ಶಿಸಿ ಭಕ್ತಿಯಿಂದ ಕೈಮುಗಿಯುತ್ತಿದ್ದ. ದೇವಿಯು ದೊಂಬನ ಭಕ್ತಿಗೆ ಒಲಿದು ಪ್ರತ್ಯಕ್ಷಗೊಳ್ಳುತ್ತಾಳೆ. ಈ ಕತೆಯುದ್ದಕ್ಕೂ ದೊಂಬ ಮೂಲ ಬದುಕಿನ ನೆಲೆಯಲ್ಲಿಯೇ ಮುಂದೆ ಸಾಗುತ್ತಾನೆ. ಹಾಗಾಗಿ ದೊಂಬನನ್ನು ಸ್ಥಳೀಯ ಪಾತ್ರವೆಂದು ಗುರುತಿಸಬಹುದು.

ಎಚ್.ವಿ. ಸಾವಿತ್ರಮ್ಮ ಅವರ 'ಗುರಿ ಮುಟ್ಟಿದಾಗ' ಎಂಬ ಕತೆ ಭಾರತೀಯ ಕುಟುಂಬ ವ್ಯವಸ್ಥೆಯು ವಸಾಹತುಶಾಹಿ ಪ್ರಭಾವಕ್ಕೆ ಒಳಪಟ್ಟ ಮೇಲೆ ಕುಟುಂಬದ

ರಚನೆ, ಆಶಯ, ಸಂಬಂಧಗಳಲ್ಲಿ ಬದಲಾವಣೆಗಳು ಹುಟ್ಟಿಕೊಂಡಿತು, ಕುಟುಂಬ ವಿಭಜನೆ ಮತ್ತು ಸಂಬಂಧ ಪ್ರಧಾನವಾದ ಕುಟುಂಬದಲ್ಲಿ ಏಕಾಂಗಿತನ, ವ್ಯವಹಾರ ಪ್ರಾಧಾನ್ಯತೆಗಳು ಜೀವಪಡೆದವು ಎಂಬ ತಾತ್ವಿಕತೆಯನ್ನು ಚರ್ಚಿಸುತ್ತದೆ. ಈ ಕತೆಯಲ್ಲಿ ಅಭಿವ್ಯಕ್ತಗೊಂಡಿರುವ 'ಚಂದ್ರ' ಎಂಬ ಪಾತ್ರವು ಆಧುನಿಕತೆಯ ಸ್ಪರ್ಶಕ್ಕೆ ತೆರೆದುಕೊಂಡ ಪಾತ್ರವಾಗಿದೆ. ಚಂದ್ರನು ಆಧುನಿಕ ಶಿಕ್ಷಣವನ್ನು ಪಡೆದುಕೊಂಡು ಇಂಜಿನಿಯರ್ ಆದ ಮೇಲೆ ಮದುವೆ ಮಾಡಿಕೊಂಡ. ಬಳಿಕ ತನ್ನ ತಂದೆ-ತಾಯಿ ತಂಗಿಯನ್ನು ನಿರ್ಲಕ್ಷಿಸಿದ, ವ್ಯವಹಾರವೇ ಪ್ರಧಾನವಾಯಿತು ಚಂದ್ರುವಿನ ತಂದೆ ಸೊಸೆ ಮತ್ತು ಮಗನ ವರ್ತನೆಯನ್ನು ಕಂಡು ಮಗನ ಸಂಬಂಧ ಹಾಗೂ ಕೂಳು ಬೇಡವೆಂದು ಮನೆ ಬಿಟ್ಟು ತೆರಳಿದ. ಚಂದ್ರು ತಂದೆ ಮನೆಬಿಟ್ಟು ಹೋದದ್ದನ್ನು ಪ್ರಧಾನವಾಗಿ ಯೋಚಿಸದೆ, ಹೋಗಿದ್ದೆ ಒಳ್ಳೆಯದ್ದಾಯಿತೆಂದು ಭಾವಿಸುತ್ತಾನೆ, ತನ್ನ ತಾಯಿ ಲಲಿತೆಯು ಬುದ್ಧಿಮಾಂದೆ ಮಗಳೊಂದಿಗೆ ಕೊರಗುತ್ತ ದಿನ ಕಳೆಯುತ್ತಿರುವಾಗ ಚಂದ್ರ ಬುದ್ಧಿಮಾಂಧೆ ತಂಗಿಯನ್ನು ಕ್ರಿಶ್ಚಿಯನ್ ಆಶ್ರಮಕ್ಕೆ ಸೇರಿಸಬೇಕೆಂದು ಒತ್ತಾಯ ಮಾಡಿ ಸರಸಳನ್ನು ಆಶ್ರಮಕ್ಕೆ ಸೇರಿಸಿದ, ಸೇರಿಸಿದ ಆರೇ ದಿನದಲ್ಲಿ ಸರಸ ಮರಣ ಹೊಂದಿದಳು. ಮಗುವಿನ ಸಾವಿನ ದುಃಖ, ಗಂಡ ಮನೆಬಿಟ್ಟು ಹೋದ ನೋವಿನಿಂದ ಲಲಿತೆ ನೊಂದು ಜೀವಬಿಟ್ಟಳು, ಚಂದ್ರ ಹೆಂಡತಿಯೊಂದಿಗೆ ಸಂಸಾರಕ್ಕೆ ತೊಡಗಿದನು. ಆದರೆ ಮಕ್ಕಳನ್ನು ಪಡೆಯಲಿ, ತನ್ನ ಸಮಯವೆಲ್ಲ ಹಣ ಸಂಪಾದಿಸುವುದರಲ್ಲಿಯೇ ಕಳೆದನು. ಕೊನೆಗೆ ದೊಡ್ಡ ಬಂಗಲೆಯನ್ನು ನಿರ್ಮಿಸಿ, ತನ್ನದೆ ಸುಂದರವಾದ ಕೋಣೆಯನ್ನು ಸುಂದರವಾದ ಭೌತವಸ್ತುಗಳಿಂದ ರೂಪಿಸಿ ನಾನು ಎಲ್ಲವನ್ನು ಸಾಧಿಸಿದೆ ಎಂದುಕೊಂಡ. ಕತೆಗಾರ್ತಿಯು ಆಧುನಿಕತೆಯ ಭೌತಿಕ ಚಿಂತನೆಯನ್ನು ಚಂದ್ರುವಿನ ಮೂಲಕ ಅಭಿವ್ಯಕ್ತಿಸುವ ಜೊತೆಗೆ ಆಧುನಿಕ ಕುಟುಂಬ ಪರಿಸರವು ವ್ಯಕ್ತಿಯನ್ನು ಕ್ರೂರನಾಗಿ, ಏಕಾಂಗಿಯಾಗಿ ಮಾಡುತ್ತದೆ ಎಂಬ ತಾತ್ವಿಕತೆಯನ್ನು ಮಂಡಿಸುತ್ತಾರೆ. 'ಚಂದ್ರ' ಕತೆಯಲ್ಲಿ ಆಧುನಿಕ ಪ್ರಭಾವಕ್ಕೆ ಒಳಗಾದ ಪಾತ್ರವಾಗಿ ಕಂಡುಬರುತ್ತಾನೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 'ಇಬ್ಬರು ಹೆಂಡಿರು' ಎಂಬ ಕತೆಯು ಕೃಷಿ ಪರಂಪರೆಯ ಒಳಗಿನ ಕೌಟುಂಬಿಕ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಚರ್ಚೆಗೆ ಒಳಪಡಿಸುತ್ತದೆ. ಈ ಕತೆಯಲ್ಲಿ ಬರುವ 'ಪಿಲ್ಲಯ್ಯ' ಎಂಬ ಪಾತ್ರವು ಸ್ಥಳೀಯ ಬದುಕಿನ ಸತ್ವವನ್ನು ಹೊಂದಿಕೊಂಡ ಪಾತ್ರವಾಗಿದೆ. ಕೃಷಿಯನ್ನೆ ಬದುಕು ಮಾಡಿಕೊಂಡು ನೆಮ್ಮದಿಯಲ್ಲಿ ಜೀವನ ಸಾಗಿಸುತ್ತಿದ್ದ. ಪಿಲ್ಲಯ್ಯ ಭಾಗ್ಯಮ್ಮನನ್ನು ಲಗ್ನವಾದ ಮೇಲೆ ತನ್ನ ೪ ಗುಂಟೆ ಜಮೀನಿನಲ್ಲಿ ವೀಳ್ಯದೆಲೆಯನ್ನು ಬೆಳೆಯುವ ಮೂಲಕ ವ್ಯವಸ್ಥಿತವಾದ ಕುಟುಂಬವನ್ನು

ರೂಪಿಸಿಕೊಂಡು. ಕಾಲ ಕಳೆದಂತೆ ಜಮೀನು ವಿಸ್ತಾರಗೊಂಡಿತು. ಆದರೆ ಮಕ್ಕಳನ್ನು ಪಡೆಯುವಲ್ಲಿ ವಿಫಲವಾದ, ಭಾಗ್ಯಮ್ಮ ದತ್ತು ಮಕ್ಕಳಾಗಿ ಸಂಬಂಧಿಕರ ಮಕ್ಕಳನ್ನು ಪಡೆಯುವ ಎಂದು ಎಷ್ಟೇ ಹೇಳಿಕೊಂಡರೂ ಪಿಲ್ಲಯ್ಯ ಕೇಳದೆ ತನ್ನ ೪೪ ನೇ ವಯಸ್ಸಿಗೆ ಮತ್ತೊಂದು ಕನ್ಯೆಯನ್ನು ಹುಡುಕಿ ಲಗ್ನವಾದ, ಇಬ್ಬರು ಹೆಂಡಿರ ಗಂಡನಾದ ಪಿಲ್ಲಯ್ಯನಿಗೆ ಹೆಂಡತಿಯರನ್ನು ಸುಧಾರಿಸಲು ಸಾಧ್ಯವಾಗಲಿಲ್ಲ. ಇಬ್ಬರು ಹೆಂಡತಿಯರು ಹೊಂದಿಕೊಳ್ಳದೆ ಜಗಳಕ್ಕೆ ನಿಂತರು, ಹೊಡೆದಾಟ, ಬೈಗಳು ದಿನದ ಮಾತಾಯಿತು. ಸಂಸಾರದ ನೆಮ್ಮದಿ ಹಾಳಾಗಿ ಪಿಲ್ಲಯ್ಯ ಕುಟುಂಬವನ್ನು ತನ್ನ ತೋಟವನ್ನು ನಿರ್ವಹಿಸಲಾಗದೆ ಕೈಚೆಲ್ಲಿ ಅನಾಥ ಸ್ಥಿತಿಗೆ ಬಂದನು. ಈ ಕತೆಯಲ್ಲಿ ಪಿಲ್ಲಯ್ಯನ ಗುಣ, ಅವನ ಕೃಷಿ ಸಂಬಂಧಿ ಬದುಕು, ಗಿಡ–ಮರಗಳನ್ನು ಅವನು ಕಾಣುವ ಬಗೆ. ಎಲ್ಲ ಸ್ಥಳೀಯವೇ ಆಗಿದೆ. ಇಬ್ಬರು ಹೆಂಡತಿಯರನ್ನು ತನ್ನ ನಿಯಂತ್ರಣದಲ್ಲಿ ಇಡಲಾಗದೆ, ಇಬ್ಬರ ಜಗಳವನ್ನು ನಿಲ್ಲಿಸಲಾಗದ ಅಸಹಾಯಕ ಸ್ಥಿತಿ ಹಾಗೂ ಪಿಲ್ಲಯ್ಯನ ಮುಗ್ಧತೆಯನ್ನು ಸ್ಥಳೀಯತೆಯ ಸತ್ವವೆಂದು ಗ್ರಹಿಸಬಹುದು.

ಶಾಂತರಸರ 'ಗೋದಾನ' ಕತೆಯು ಹಳ್ಳಿಯ ಸಾಮಾಜಿಕ ಪರಿಸ್ಥಿತಿಯನ್ನು ಬ್ರಾಹ್ಮಣಶಾಹಿತ್ವದ ಬಗೆಯನ್ನು ನಿರೂಪಿಸುತ್ತದೆ. ಕತೆಯಲ್ಲಿ ರೂಪ ಪಡೆದಿರುವ ಗಂಗ್ಯಾ ಪಾತ್ರವು ಸ್ಥಳೀಯ ಬದುಕಿನ ಪಾತ್ರವಾಗಿ ಕಾಣಿಸುತ್ತದೆ. ಗಂಗ್ಯಾ ಕೆಳವರ್ಗದ ವ್ಯಕ್ತಿಯಾದರೂ ಒಂದು ಹಸುವಿನೊಂದಿಗೆ ತನ್ನ ಬದುಕನ್ನು ನಿರ್ವಹಿಸುತ್ತಿದ್ದ. ಬ್ರಾಹ್ಮಣನೊಬ್ಬ ಗಂಗ್ಯಾ ಮತ್ತು ಆತನ ಹಸುವನ್ನು ನೋಡಿ ಹಸುವನ್ನು ತನ್ನದಾಗಿಸಿಕೊಳ್ಳುವ ಕಡೆಗೆ ಯೋಜಿಸುತ್ತಾನೆ. ಗಂಗ್ಯಾ ಬ್ರಾಹ್ಮಣನನ್ನು ತನ್ನ ದೊಡ್ಡ ಮಗ ಹನುಮ ಜ್ವರದಿಂದಿರುವ ವಿಷಯವನ್ನು ಪ್ರಸ್ತಾಪಿಸಿ, ಯಂತ್ರ ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತಾನೆ. ಬ್ರಾಹ್ಮಣ ಹದಿನೈದು ರೂಪಾಯಿ ಗಂಗ್ಯಾನಿಂದ ಪಡೆದು ನೀರು ಮಂತ್ರಿಸಿ, ಮದ್ದು ನೀಡುತ್ತಾನೆ. ಆದರೆ ಗಂಗ್ಯಾನ ಮಗ ಹನುಮ ಎರಡು ವಾರದಲ್ಲಿಯೇ ಮರಣ ಹೊಂದುತ್ತಾನೆ. ಮರಣ ಹೊಂದಿದ ವಿಷಯ ತಿಳಿದು ಬ್ರಾಹ್ಮಣ ಗಂಗ್ಯಾನಲ್ಲಿ ಇರುವ ಹಸುವನ್ನು ಪಡೆಯುವ ಕಾರಣದಿಂದ ಹನುಮ ಸತ್ತ ಗಳಿಗೆ ಸರಿಯಿಲ್ಲ, ಮೂರು ಹಸು ಹಾಗೂ ಒಬ್ಬ ಮನುಷ್ಯನ ಸಾವು ಸಂಭವಿಸಬಹುದು ಎಂದು ಶಾಸ್ತ್ರ ಹೇಳಿ ಗಂಗ್ಯಾನಲ್ಲಿ ಭಯ ಹುಟ್ಟಿಸಿ, ಆಕಳನ್ನು ನೀಡಿದರೆ ಎಲ್ಲಾ ಕಂಟಕಗಳು ಪರಿಹಾರವಾಗುತ್ತದೆ ಎಂದು ಹೇಳಿ ಗಂಗ್ಯಾನಿಂದ ಬ್ರಾಹ್ಮಣ ಹಸುವನ್ನು ಪಡೆದುಕೊಳ್ಳುತ್ತಾನೆ. ಗಂಗ್ಯಾ ಕತೆಯುದ್ದಕ್ಕೂ ಮುಗ್ಧನಾಗಿ, ಬ್ರಾಹ್ಮಣನು ಹೇಳಿದನ್ನು ನಂಬುವ ಮತ್ತು ತನ್ನ ಸಂಪತ್ತನ್ನ ಕಳೆದುಕೊಳ್ಳುವ ಕಡೆಗೆ ನಡೆಯುತ್ತಾನೆ.

ಹಾಗಾಗಿ ಗಂಗ್ಯಾನನ್ನು ಸ್ಥಳೀಯ ಪಾತ್ರವೆಂದು ಕರೆಯಬಹುದು.

ಎಚ್.ವಿ. ಸಾವಿತ್ರಮ್ಮ ಅವರ 'ಪಶ್ಚಾತ್ತಾಪ' ಕತೆಯು ಕುಟುಂಬ ಒಂದರ ಗಂಡ-ಹೆಂಡತಿಯ ಹೊಂದಿಕೆ, ಸಂಬಂಧದ ಬಗೆಯನ್ನು ಚರ್ಚಿಸುತ್ತದೆ. ಶಾರದೆ ಎನ್ನುವ ಪಾತ್ರವು ಇಲ್ಲಿ ಸ್ಥಳೀಯ ಪಾತ್ರವಾಗಿ ತೋರುತ್ತದೆ. ಭಾರತೀಯ ಬ್ರಾಹ್ಮಣ ಪರಂಪರೆಯ ರೀತಿಯಲ್ಲಿ ಶಾರದೆ ನಡೆಯುತ್ತಾಳೆ. ಆಚಾರ, ನಿಯಮ, ಮಡಿ-ಮೈಲಿಗೆ ವ್ರತ ಪೂಜೆ ಇತ್ಯಾದಿಗಳು ಶಾರದೆಯ ನಿತ್ಯದ ಬದುಕಾಗಿತ್ತು. ಸುಬ್ಬುವನ್ನು ಲಗ್ನವಾದ ಮೇಲೂ ತನ್ನ ಬದುಕಿನ ರೀತಿಯನ್ನು ಹಾಗೇ ಮುಂದುವರಿಸಿಕೊಂಡು ಬರುತ್ತಾಳೆ. ಈ ರೀತಿಯ ಬದುಕಿನ ಮುಂದುವರಿಕೆಯೇ ಸುಬ್ಬುವಿಗೆ ಸರಿತೋರುವುದಿಲ್ಲ. ಸುಬ್ಬ ಶಾರದೆಯನ್ನು ಬಿಟ್ಟು ಬೇರೆ ಹುಡುಗಿಯನ್ನು ಲಗ್ನವಾಗುತ್ತಾನೆ. ಶಾರದೆ ದೇವರ ಧ್ಯಾನದಲ್ಲಿಯೇ ಬದುಕು ಕಾಣುತ್ತಾಳೆ. ಈ ಕತೆಯಲ್ಲಿ ಕತೆಗಾರ್ತಿ ಶಾರದೆಯನ್ನು ಸ್ಥಳೀಯ ಬದುಕಿನ ಪ್ರತಿನಿಧಿಯಾಗಿ, ಸುಬ್ಬುವನ್ನು ಆಧುನಿಕ ಮಾದರಿಯ ಪಾತ್ರವಾಗಿ ಮುಖಾಮುಖಿಯಾಗಿಸುತ್ತಾರೆ. ಕತೆಯ ಅಂತ್ಯದಲ್ಲಿ ಶಾರದೆ ಮತ್ತು ಸುಬ್ಬು ಏಕಾಂಗಿಯಾಗಿಯೇ ಉಳಿಸುತ್ತಾರೆ. ಕತೆಯು ತಾತ್ವಿಕವಾಗಿ ವಸಾಹತುಶಾಹಿ ಸಂಸ್ಕೃತಿಯ ಪ್ರಜ್ಞೆ, ಸ್ಥಳೀಯ ಸಂಸ್ಕೃತಿ ಜೀವನದೊಂದಿಗೆ ಸಂಕರಗೊಳ್ಳುವುದಿಲ್ಲ. ಸಂಕರಗೊಂಡರೂ ಸ್ಥಳೀಯ ನಂಬಿಕೆ ಮತ್ತು ಜೀವನದ ಆದರ್ಶಗಳು ಅಸ್ತಿತ್ವವನ್ನು ಕಳೆದುಕೊಳ್ಳುತ್ತವೆ ಎಂಬ ನಿಲುವನ್ನು ತಾಳುತ್ತದೆ. ಸುಬ್ಬು ತನ್ನ ಹೆಂಡತಿ ಆಧುನಿಕ ಪ್ರಜ್ಞೆ ಹೊಂದಿರಬೇಕು, ಎಂದು ಬಯಸುವುದರ ಜೊತೆಗೆ ಶಾರದೆಯ ಆಧ್ಯಾತ್ಮಿಕ ನೆಲೆಯ ಜೀವನ ಶೈಲಿಯನ್ನು ನಿರಾಕರಿಸುತ್ತಾನೆ. ತನ್ನ ಸ್ನೇಹಿತನ ಮನೆಗೆ ಬಂದಿದ್ದ ವಿಧವೆ ಪಾರ್ವತಿಯನ್ನು ನೋಡಿ ಅವಳೊಂದಿಗೆ ಸ್ನೇಹ ಬೆಳೆಸುತ್ತಾನೆ, ಪಾರ್ವತಿಯ ಮಾತು, ಆಸಕ್ತಿ, ಮೈಮಾಟ, ಭೌತಿಕ ಜಗತ್ತಿನ ಒಲವುಗಳು ಸುಬ್ಬುವನ್ನು ಅವಳ ಕಡೆಗೆ ಆಕರ್ಷಿತವಾಗಿಸುತ್ತದೆ, ಶಾರದೆಯನ್ನು ಬಿಟ್ಟು ಪಾರ್ವತಿಯನ್ನು ಲಗ್ನವಾಗುತ್ತಾನೆ. ಮೂರು ವರ್ಷ ಕಳೆಯುತ್ತಿದ್ದಂತೆ ಪಾರ್ವತಿ ಚಿಕ್ಕ ಮಗುವನ್ನು ಬಿಟ್ಟು ಮರಣ ಹೊಂದುತ್ತಾಳೆ. ಸುಬ್ಬು ಪಾರ್ವತಿ ಮರಣ ಹೊಂದಿದ ಮೇಲೆ ಶಾರದೆಯಲ್ಲಿಗೆ ಬಂದು ಪುನಃ ತನ್ನೊಂದಿಗೆ ಬದುಕು ಕಟ್ಟಿಕೊಳ್ಳಬೇಕೆಂದು ಕೇಳುತ್ತಾನೆ. ಆದರೆ ಶಾರದೆ ಸುಬ್ಬುವನ್ನು ನಿರಾಕರಿಸಿ ತನ್ನ ಆಧ್ಯಾತ್ಮಿಕ ಬದುಕಿನಲ್ಲಿ ಮುಂದುವರಿಯುವುದಾಗಿ ಹೇಳುತ್ತಾಳೆ. ಕತೆಯಲ್ಲಿ ಶಾರದೆಯು ಸ್ಥಳೀಯ ಬದುಕಿನ ಮಾದರಿಯಾಗಿ ಸುಬ್ಬು  ಆಧುನಿಕ ಪ್ರಜ್ಞೆಯ ಮಾದರಿಯಾಗಿ ತೋರುತ್ತಾಳೆ.

'ಸೋದರಿಕೆ' ಎಂಬ ಎಚ್.ವಿ. ಸಾವಿತ್ರಮ್ಮ ಅವರ ಕತೆಯು ಹೊಂದಾಣಿಕೆ, ತಾಳ್ಮೆ,

ಪ್ರೀತಿ, ವಿಶ್ವಾಸಗಳೆಂಬ ಕುಟುಂಬದ ಆದರ್ಶವನ್ನು ಚರ್ಚೆಗೆ ಒಳಪಡಿಸುತ್ತದೆ. ಈ ಕತೆಯಲ್ಲಿ ನಿರೂಪಿತಗೊಳ್ಳುವ ರಾಮಚಂದ್ರನೆಂಬ ಪಾತ್ರವು ಸ್ಥಳೀಯ ಪಾತ್ರವಾಗಿ ಕಾಣಿಸುತ್ತದೆ. ರಾಮಚಂದ್ರ ಮೈಸೂರಿನಲ್ಲಿ ಉದ್ಯೋಗಿಯಾಗಿದ್ದು, ಮಾಧವರಾಯರ ಮಗಳಾದ ನಳಿನಿಯನ್ನು ಲಗ್ನವಾಗುತ್ತಾನೆ. ನಳಿನಿಯನ್ನು ಮಾಧವರಾಯನ ಸಂಬಂಧಿ ರಂಗ ಪ್ರೀತಿಸಿರುತ್ತಾನೆ, ಮಾಧವರಾಯನು ಮೊದಲು ರಂಗನನ್ನು ಒಪ್ಪಿಕೊಂಡಿರುತ್ತಾನೆ.

ರಂಗ ಯಾವಾಗ ಎಸ್.ಎಸ್.ಎಲ್.ಸಿ.ಯಲ್ಲಿ ನಾಲ್ಕು ವರ್ಷ ಕುಳಿತು ಉದ್ಯೋಗವಿಲ್ಲದೆ, ಪೋಲಿಯಾಗಿ ಅಲೆಯಲು ಆರಂಭಿಸಿದನೋ ಆ ನಂತರ ಮಾಧವರಾಯರ ನಿರ್ಧಾರ ಬದಲಾಯಿತು. ನಳಿನಿಯನ್ನು ರಾಮಚಂದ್ರನಿಗೆ ಕೊಟ್ಟು ಲಗ್ನ ಮಾಡಿದರು, ರಂಗನಿಗೆ ಮಾಧವರಾಯನ ಸೊಕ್ಕು ಮುರಿಯಬೇಕು, ನಳಿನಿಯ ಬದುಕಿನಲ್ಲಿ ಪ್ರವೇಶ ಪಡೆಯಬೇಕೆಂಬ ವಿಚಾರ ಮನಸ್ಸಿನಲ್ಲಿ ಗಟ್ಟಿಯಾದ ಮೇಲೆ, ಮೈಸೂರಿಗೆ ಬಂದು ನಳಿನಿಯ ಮನೆಯನ್ನು ಸೇರುತ್ತಾನೆ. ನಳಿನಿಯ ಗಂಡ ರಂಗನನ್ನು ತನ್ನ ಮನೆಯಲ್ಲಿ ಉಳಿಸಿಕೊಂಡು ಪ್ರೀತಿ-ವಿಶ್ವಾಸಗಳನ್ನು ತೋರುತ್ತಾನೆ, ನಳಿನಿ ರಂಗನೊಂದಿಗೆ ಸಿನೇಮಾ, ನಾಟಕಗಳಿಗೆ ತೆರಳುತ್ತಾಳೆ, ಹರಟೆ ಹೊಡೆಯುತ್ತಾಳೆ, ಆಟವಾಡುತ್ತಾಳೆ. ರಂಗ-ನಳಿನಿಯ ನಡತೆಯನ್ನು ರಾಮಚಂದ್ರನು ಅನುಮಾನದಿಂದ ನೋಡದೆ, ಪ್ರೀತಿ ಮತ್ತು ವಿಶ್ವಾಸದಿಂದ ಕಾಣುತ್ತಾನೆ. ಇಬ್ಬರ ಮೇಲೆ ನಂಬಿಕೆ ಹೊಂದುತ್ತಾನೆ, ರಂಗ ಮಾಧವರಾಯನ ಸೊಕ್ಕು ಮುರಿಯಬೇಕೆಂದು ನಳಿನಿ ಮನೆಗೆ ಹೋದವನು ರಾಮಚಂದ್ರನ ಪ್ರೀತಿ, ವಿಶ್ವಾಸ, ನಂಬಿಕೆಗೆ ಬೆಲೆಕೊಟ್ಟು ಗೌರವದಿಂದ ಹಿಂದಿರುಗುತ್ತಾನೆ. ಕತೆಯಲ್ಲಿ ರಾಮಚಂದ್ರ ನಡೆ-ನುಡಿ ಜೀವನ ವಿಧಾನ, ಆದರ್ಶಗಳು ಸ್ಥಳೀಯ ಬದುಕಿನ ಸತ್ವವಾಗಿ ವ್ಯಕ್ತವಾಗುತ್ತದೆ. ಹಾಗಾಗಿ ರಾಮಚಂದ್ರನನ್ನು ಸ್ಥಳೀಯ ಪಾತ್ರವೆಂದು ಕರೆಯಬಹುದು.

ಕುವೆಂಪು ಅವರ 'ಸಾಲದ ಮಗು' ಕತೆಯು ಜೀವನ ವ್ಯವಸ್ಥೆಯ ಪ್ರತಿರೂಪದಂತೆ ಕಾಣುತ್ತದೆ. ಈ ಕತೆಯಲ್ಲಿ ಬರುವ ಸುಬ್ಬನ ಪಾತ್ರವು ದುಡಿಯುವ ವರ್ಗದ ಜೀವನದ ಸ್ಪರ್ಶವನ್ನು ಒಳಗೊಂಡು ಸ್ಥಳೀಯ ಸತ್ವವನ್ನು ಕಾಣುತ್ತದೆ. ಸುಬ್ಬ ಗೌಡರ ಮನೆಯಲ್ಲಿ ಜೀತಕ್ಕೆ ದುಡಿಯುತ್ತಿದ್ದ ೧೨ ವರ್ಷದ ಹುಡುಗ. ಗೌಡರು ಚಿಕ್ಕ ಹುಡುಗನೆಂದು ಕೆಲಸ ಮತ್ತು ಹೊಡೆತಗಳಲ್ಲಿ ಯಾವುದೇ ರೀಯಾಯಿತಿ ತೋರಿಸುತ್ತಿರಲಿಲ್ಲ. ಮಳೆಗಾಲದಲ್ಲಿ ಗಾಳಿ-ಮಳೆಯ ಹೊಡೆತಕ್ಕೆ ಗೋಣಿ ಚೀಲ ಹೊದ್ದು ಮಲಗಿದ್ದ ಸುಬ್ಬನನ್ನು ಗೌಡರು ಹೊಡೆದು ಎಬ್ಬಿಸಿ, ಗದ್ದೆಯಲ್ಲಿ ಮೀನಿನ ಕೂಣಿ ನೋಡುವಂತೆ ಆರ್ಭಟಿಸಿದಾಗ, ಸುಬ್ಬ

ಅರೆನಿದ್ದೆಯ ಸ್ಥಿತಿಯಲ್ಲಿ ಭಯದಿಂದ ಲಾಟೀನು ಹಿಡಿದುಕೊಂಡು ಮಳೆಯಲ್ಲಿ ಗದ್ದೆಗೆ ಹೋಗಿ ಮೀನಿನ ಕೂಣಿಗೆ ಕೈಹಾಕುವಾಗ ಹಾವು ಕಚ್ಚಿ ಸಾಯುತ್ತಾನೆ. ಕತೆಯು ನಮ್ಮ ನೆಲದ ಪರಂಪರೆಯಲ್ಲಿ ಇರುವ ಗೌಡಿಕೆಯ ಶಾಹಿತ್ವವನ್ನು ಮತ್ತು ದುಡಿಯುವ ಜನರ ಸ್ಥಿತಿಯನ್ನು ತಾತ್ವೀಕರಿಸುತ್ತದೆ. ಸುಬ್ಬ ಕತೆಯಲ್ಲಿ ಸ್ಥಳೀಯ ನೆಲೆಯ ಪಾತ್ರವಾಗಿ ಕಾಣುತ್ತಾನೆ.

'ವಾಗ್ದತ್ತ ವಧು' ಸರಸ್ವತಿದೇವಿ ಗೌಡರ ಕತೆಯು ಬಾಲ್ಯ ವಿವಾಹದಂತಹ ಪದ್ಧತಿಗಳು ಗಂಡು ಮತ್ತು ಹೆಣ್ಣುಗಳಲ್ಲಿ ಉಂಟು ಮಾಡುವ ಆತಂಕ, ಅಸಹಾಯಕತೆ, ದ್ವೇಷ ಇತ್ಯಾದಿ ಮನೋಕಾಮನೆಗಳನ್ನು ಕೇಂದ್ರೀಕರಿಸುತ್ತದೆ. ಆಧುನಿಕ ಪ್ರಜ್ಞೆ ಮತ್ತು ಸ್ಥಳೀಯ ಪ್ರಜ್ಞೆಯನ್ನು ಕತೆಗಾರ್ತಿ ಮುಖಾಮುಖಿ ಮಾಡುವುದರ ಜೊತೆಗೆ ಮಹಿಳೆಯ ಅಸ್ತಿತ್ವವನ್ನು ಗುರುತಿಸುತ್ತಾರೆ. ಈ ಕತೆಯಲ್ಲಿ ಕಾಣುವ ನಾಗಮ್ಮ ಎನ್ನುವ ಪಾತ್ರವು ಸ್ಥಳೀಯ ಪಾತ್ರವಾಗಿ ತೋರುತ್ತದೆ ಮತ್ತು ಶೈಲಾ ಎನ್ನುವ ಪಾತ್ರವು ಆಧುನಿಕ ಪಾತ್ರವಾಗಿ ರೂಪ ಪಡೆಯುತ್ತದೆ. ನಾಗಮ್ಮ ಶೈಲಾಳನ್ನು ಸಾಕಿದರಲ್ಲದೆ ಶೈಲಾಳ ತಂದೆಯ ಮಾತನ್ನು ನಡೆಸಿಕೊಂಡು ಹೋಗಬೇಕೆಂದು ನಿರ್ಧಾರ ಹೊಂದಿದವರು. ಶೈಲಾ ಹುಟ್ಟಿ ಒಂದು ವರ್ಷ ಆಗುವ ವೇಳೆಗೆ ತಾಯಿ ನಿಧನರಾದರು. ತಂದೆಯು ಇದೇ ನೋವಿನಲ್ಲಿ ಆರೋಗ್ಯ ಕ್ಷೀಣಿತವಾಗಿ ನಾಗಮ್ಮನಲ್ಲಿ ಶೈಲಾಳನ್ನು ಒಪ್ಪಿಸಿ, ನಾಗಮ್ಮ ಮಗ ಪ್ರಕಾಶನಿಗೆ ಶೈಲಾಳನ್ನು ಲಗ್ನ ಮಾಡಬೇಕೆಂದು ಮಾತು ನೀಡಿ ಮರಣ ಹೊಂದಿದರು. ನಾಗಮ್ಮ ಶೈಲಾಳನ್ನು ಪೋಷಿಸಿ ಪ್ರಕಾಶನ 'ವಾಗ್ದತ್ತ ವಧು' ವೆಂದು ನಿರ್ಧರಿಸಿ ಇಬ್ಬರಿಗೆ ಲಗ್ನ ಮಾಡುವುದು ತನ್ನ ಕರ್ತವ್ಯವೆಂದು ಭಾವಿಸಿದ್ದರು. ಪ್ರಕಾಶ ವಿದೇಶದಲ್ಲಿ ಬೇರೆ ಹುಡುಗಿಯನ್ನು ಪ್ರೀತಿಸಿ ಮದುವೆಯಾದ ವಿಷಯವನ್ನು ಪತ್ರದ ಮೂಲಕ ಶೈಲಾ ಮತ್ತು ನಾಗಮ್ಮನಿಗೂ ತಿಳಿಸುತ್ತಾನೆ. ಪ್ರಕಾಶ ಮನೆಗೆ ಬಂದಾಗ ಶೈಲಾಳ ಲಗ್ನದ ಬಗ್ಗೆ ಹೇಳುವ ನಾಗತ್ತೆ. ಹಿರಿಯರು ಹೇಳಿದ ಮಾತು ನಡೆಸಿಕೊಡುವುದು ನನ್ನ ಧರ್ಮ ನೀನು ಶೈಲಾಳನ್ನು ಲಗ್ನವಾಗಬೇಕು. ಅವಳು ನಿನ್ನ ವಾಗ್ದತ್ತ ವಧು ಎಂದು ಹೇಳುತ್ತಾಳೆ. ಕತೆಯುದ್ದಕ್ಕೂ ನಾಗತ್ತೆ ಪರಂಪರೆಗೆ, ಸಂಪ್ರದಾಯ ಬದ್ಧವಾದ ಮಾತಿಗೆ ಹೊಂದಿಕೊಂಡ ಸ್ಥಳೀಯ ಪಾತ್ರವಾಗಿ ಕಾಣುತ್ತಾರೆ.

ಶೈಲಾ ಪಾತ್ರವು ಆಧುನಿಕ ಪ್ರಜ್ಞೆಯ ಭಾಗವಾಗಿ ಕತೆಯೊಳಗೆ ಚಿತ್ರಿತಗೊಳ್ಳುತ್ತದೆ. ಪ್ರಕಾಶ ತನ್ನ ಭಾವಿ ಪತಿ ತಾನು ಪ್ರಕಾಶನ ವಾಗ್ದತ್ತ ವಧು ಎಂಬ ವಿಚಾರ ತಿಳಿದು ಪ್ರಕಾಶನನ್ನು ಗಂಡನೆಂದು ಒಪ್ಪಿಕೊಂಡಿದ್ದ ಶೈಲಾ. ಪ್ರಕಾಶ ಬೇರೆ ಹುಡುಗಿಯನ್ನು ಪ್ರೀತಿಸಿ ಲಗ್ನವಾದ ವಿಚಾರವನ್ನು ತಿಳಿದ ಮೇಲೆ ನೊಂದುಕೊಂಡರೂ ತನ್ನನ್ನು ಲಗ್ನವಾಗುವಂತೆ ಪ್ರಕಾಶನನ್ನು ಒತ್ತಾಯಿಸುವುದಿಲ್ಲ. ಪ್ರಕಾಶನ ಹೆಂಡತಿ ತನ್ನಂತೆಯೇ

ಹೆಣ್ಣು ಎಂದು ಗ್ರಹಿಸುವ ಜೊತೆಗೆ ತನ್ನ ದಾರಿಯನ್ನು ತಾನೇ ನೋಡಿಕೊಳ್ಳುತ್ತೇನೆ ಎಂದು ತನ್ನ ಬದುಕಿನ ದಾರಿಯನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. ಶೈಲಾ ಪಾತ್ರದ ಮೂಲಕ ಕತೆಗಾರ್ತಿ ಸ್ತ್ರೀವಾದ ಪ್ರಜ್ಞೆಯನ್ನು ನಿರೂಪಿಸುತ್ತಾರಲ್ಲದೆ, ಸುಧಾರಣ ಚಳುವಳಿ ಮತ್ತು ಆಧುನಿಕ ಶಿಕ್ಷಣದ ಪ್ರಭಾವ ಬೇರುಗಳು ಶೈಲಾಳ ಮೂಲಕ ಅಭಿವ್ಯಕ್ತವಾಗುತ್ತದೆ. ಹೀಗಾಗಿ ಶೈಲಾಳನ್ನು ಆಧುನಿಕ ಪಾತ್ರವೆಂದು ಕರೆಯಬಹುದು.

'ಅವಳಿ ಮಕ್ಕಳು' ಎಂಬ ಶಾರದೆ ಜಡೆ ಅವರ ಕತೆಯು ಸಂಪ್ರದಾಯ ಬದ್ಧವಾದ ಕುಟುಂಬ ಅಭಿವ್ಯಕ್ತಿಯ ನಿಲುವುಗಳನ್ನು ಅನ್ಯಧರ್ಮಿಯ ಸ್ಪರ್ಶದ ತಾತ್ವಿಕ ರೂಪವನ್ನು ಚರ್ಚಿಸುತ್ತದೆ. ಕತೆಯಲ್ಲಿ ಜಾನಕಮ್ಮ ಸ್ಥಳೀಯ ಪಾತ್ರವಾಗಿ ಗೋಚರಗೊಳ್ಳುತ್ತಾರೆ. ಜಾನಕಮ್ಮ ಬ್ರಾಹ್ಮಣ ಪರಂಪರೆ ಪೂಜೆ, ವ್ರತ, ನಿಯಮ, ಆಚಾರ, ಮಡಿ–ಮೈಲಿಗೆಯನ್ನು ಅನುಸರಿಸಿಕೊಂಡು ಬದುಕು ಕಟ್ಟಿಕೊಂಡವರು. ತನ್ನ ಮಗಳು ಪದ್ಮ ಫಾತಿಮಾಳನ್ನು ಗೆಳತಿಯಾಗಿ ಮಾಡಿಕೊಂಡಿದ್ದಳು. ಮಹಾಲಕ್ಷ್ಮೀ ಪೂಜೆಗೆ ಜಾನಕಮ್ಮ ಅತ್ಯಂತ ಶುದ್ಧದಿಂದ ಮಹಾಲಕ್ಷ್ಮಿ ಮಂಟಪವನ್ನು ನಿರ್ಮಿಸಿ ಪೂಜೆಯನ್ನು ವ್ರತದಿಂದ ಆರಾಧನೆ ಆರಂಭಿಸಿದ್ದರೂ, ಫಾತಿಮಳು ಪದ್ಮಳನ್ನು ಹುಡುಕಿಕೊಂಡು ಮಹಾಲಕ್ಷ್ಮಿ ಮಂಟಪದ ಹತ್ತಿರಕ್ಕೆ ಬಂದಿದನ್ನು ನೋಡಿದ ಜಾನಕಮ್ಮ ಫಾತಿಮಳನ್ನು ದೂರ ನಿಲ್ಲುವಂತೆ ಗದರಿಸಿದಳು. ತನ್ನ ಮಡಿ–ವ್ರತವೆಲ್ಲ ಹಾಳಾಯಿತು ಎಂದು ವ್ಯಥೆ ಪಟ್ಟಳು. ಪೂಜೆಯಲ್ಲಿ ಭಾಗಿಗಳಾಗಿದ್ದ ತನ್ನ ಗೆಳತಿಯರು ಜಾತಿ–ನೀತಿ ಧರ್ಮದ ಬಗ್ಗೆ ಎಷ್ಟೆ ವೈಚಾರಿಕವಾಗಿ ಹೇಳಿದರು ಜಾನಕಮ್ಮ ಒಪ್ಪಿಕೊಳ್ಳದೆ ತನ್ನ ಪರಂಪರೆಯ ನಿಲುವುಗಳೇ ಪ್ರಧಾನವೆಂದು ಭಾವಿಸುತ್ತಾರೆ. ಕತೆಗಾರ್ತಿ ಜಾನಕಮ್ಮನ ಮೂಲಕ ಸ್ಥಳೀಯವಾದ ಬ್ರಾಹ್ಮಣ ಸಮುದಾಯದ ಆಚಾರ, ನೀತಿ, ವ್ರತ, ಮಡಿ–ಮೈಲಿಗೆಯಂತಹ ಪದ್ಧತಿಯನ್ನು ಅಭಿವ್ಯಕ್ತಿಸುತ್ತಾರೆ. ಜಾನಕಮ್ಮ ಸ್ಥಳೀಯ ಪಾತ್ರವಾಗಿ ತೋರುತ್ತಾರೆ.

'ಪುಸ್ತಕದ ಪಿಚಾಚಿ' ಎಂಬ ಸಿ.ಕೆ. ವೆಂಕಟರಾಮಯ್ಯ ಅವರ ಕತೆಯು ಆಧುನಿಕ ಶಿಕ್ಷಣ ಪದ್ಧತಿಯು ವ್ಯಕ್ತಿಯ ನೈತಿಕತೆಯನ್ನು ನಾಶಮಾಡುವ ಜೊತೆಗೆ ಮಾನಸಿಕವಾಗಿ ಹುಚ್ಚನಾಗಿಸುತ್ತದೆ ಎಂಬ ತಾತ್ವಿಕ ನಿಲುವನ್ನು ಮಂಡಿಸುತ್ತದೆ. ಈ ಕತೆಯಲ್ಲಿ ಬರುವ ಲಕ್ಷ್ಮಣ ಎಂಬ ಪಾತ್ರವು ಆಧುನಿಕ ಪಾತ್ರವಾಗಿ ತೋರುತ್ತದೆ. ಲಕ್ಷಣ ವಸಾಹತುಶಾಹಿಯ ರೂಪ. ಇಂಗ್ಲಿಷ್ ಶಿಕ್ಷಣವನ್ನು ಪಡೆದು ಐ.ಎ.ಎಸ್ ಪರೀಕ್ಷೆಯನ್ನು ಪಾಸು ಮಾಡಿ, ಡಿಸಿಯಾಗಿ ಅಧಿಕಾರ ಸ್ವೀಕಾರ ಮಾಡಿದ ಮೇಲೆ ಇಂಗ್ಲಿಷ್ ಸಾಹಿತ್ಯವನ್ನು, ವಿಜ್ಞಾನವನ್ನು, ವೈದ್ಯಶಾಸ್ತ್ರವನ್ನು ಓದುವುದನ್ನು ಆರಂಭಿಸಿ ಅದರಲ್ಲಿ ಮಗ್ನನಾಗುತ್ತಾನೆ, ತನ್ನ ಸುತ್ತಲಿನ

ಪರಿಸರವನ್ನು ಪುಸ್ತಕದ ಜ್ಞಾನದ ಆಧಾರದ ಮೇಲೆ ನೋಡುವ ದೃಷ್ಟಿಯನ್ನು ಬೆಳೆಸಿಕೊಳ್ಳುತ್ತಾನೆ. ಭಾರತೀಯ ಜೀವನ ವಿಧಾನದ ಜ್ಞಾನಕ್ಕೂ, ವಸಾಹತುಶಾಹಿಯ ಪುಸ್ತಕದ ಜ್ಞಾನಕ್ಕೂ ಹೊಂದಿಕೆಯಾಗದೆ, ಲಕ್ಷ್ಮಣನು ನೋಡುಗರ ಕಣ್ಣಿಗೆ ಹುಚ್ಚನಾಗಿ ಕಾಣುತ್ತಾನೆ. ತನ್ನ ತಾಯಿ ಮತ್ತು ಹೆಂಡತಿಯು ಇಂತಹದ್ದೆ ಆಹಾರ ಸೇವಿಸಬೇಕೆಂದು ಆಜ್ಞೆ ಮಾಡುತ್ತಾನೆ. ಅವನು ನಿರ್ಧರಿಸಿರುವ ಆಹಾರ ಕ್ರಮವು ವೈದ್ಯ ಶಾಸ್ತ್ರದಲ್ಲಿ ಓದಿದ ಆಹಾರ ಕ್ರಮವಾಗಿತ್ತು. ತನ್ನ ಹೆಂಡತಿ–ತಾಯಿ ತನ್ನ ಮನೆಯ ವಾತಾವರಣವು ಇಂಗ್ಲಿಷ್ ಕಾದಂಬರಿಯಲ್ಲಿ ಇರುವಂತೆ ಇರಬೇಕೆಂದು ಬಯಸುತ್ತಾನೆ. ಒಂದು ದಿನ ಲಕ್ಷ್ಮಣ ಅಡುಗೆ ಮನೆಯಲ್ಲಿದ್ದ ಹೆಂಡತಿಯನ್ನು ಮಾತನಾಡಿಸುತ್ತಾನೆ. ಮತ್ತು ಅವಳ ಹಲ್ಲು ನೀಲಿ ಬಣ್ಣದಲ್ಲಿ ಇರುವುದನ್ನು ಗಮನಿಸಿ, ವೈದ್ಯರಿಗೆ ಕರೆಮಾಡಿ ತನ್ನ ಹೆಂಡತಿಗೆ ವಿಷ ತಗುಲಿದೆ ಎಂದು ಹೇಳಿ ವೈದ್ಯರನ್ನು ಮನೆಗೆ ಕರೆಸುತ್ತಾನೆ, ಮತ್ತು ತನ್ನ ಮಾವನಿಗೆ ಟೆಲಿಗ್ರಾಂ ಕೊಡುತ್ತಾನೆ. ವೈದ್ಯರು ಬಂದು ವಿಚಾರಿಸಿದಾಗ ಲಕ್ಷ್ಮಣನು ತನ್ನ ಹೆಂಡತಿಯ ಹಲ್ಲು ನೀಲಿ ಬಣ್ಣಕ್ಕೆ ಬಂದಿರುವುದರಿಂದ ವಿಷ ದೇಹಕ್ಕೆ ಸೇರಿದೆ ಎನ್ನುತ್ತಾನೆ, ಲಕ್ಷ್ಮಣನ ಹೆಂಡತಿಯು ನಕ್ಕು ನಾನು ನೇರಳೆ ಹಣ್ಣನ್ನು ತಿಂದಿರುವುದಾಗಿ, ಹಾಗಾಗಿ ಹಲ್ಲು ನೀಲಿ ಬಣ್ಣಕ್ಕೆ ಬಂದಿರುವುದಾಗಿ ಹೇಳುತ್ತಾಳೆ. ಲಕ್ಷ್ಮಣ ಎಲ್ಲರ ಮುಂದೆ ವ್ಯಂಗ್ಯವಾಗಿ ತೋರುತ್ತಾನೆ. ಕತೆಗಾರರು ಲಕ್ಷ್ಮಣನನ್ನು ವಸಾಹತು ಪ್ರಜ್ಞೆಯ ಭಾಗವಾಗಿ ನಿರೂಪಿಸುತ್ತ ನಮ್ಮ ಸ್ಥಳೀಯ ಬದುಕಿನ ಜೊತೆಗೆ ವಸಾಹತು ಜ್ಞಾನವು ಸಂಕರಗೊಳ್ಳುವುದಿಲ್ಲ ಎಂಬ ನಿಲುವನ್ನು ಮಂಡಿಸುತ್ತಾರೆ.

'ಜಲಶಿಲ್ಪಿ' ಎಂಬ ಟೆಂಗ್ಸೆ ಗೋವಿಂದರಾವ್ ಅವರ ಕತೆಯು ನಿಧಿ ಹಾಗೂ ಆಸ್ತಿಯ ನೆಲೆಯಿಂದ ಸಂಬಂಧಗಳು ಹಾಳಾಗುವ ಬಗೆಯನ್ನು ತಾತ್ವೀಕರಿಸುತ್ತದೆ. ಈ ಕತೆಯಲ್ಲಿ ರೂಪುಗೊಳ್ಳುವ ರಾಮಭಟ್ಟರ ಪಾತ್ರವು ಸ್ಥಳೀಯ ಪಾತ್ರವಾಗಿ ಅಭಿವ್ಯಕ್ತವಾಗುತ್ತದೆ. ರಾಮಭಟ್ಟರು ಒಬ್ಬ ಕೃಷಿಕರಾಗಿ ಬದುಕು ನಡೆಸಿದವರು ಮತ್ತು ನೆಲದ ಕಸುವಿನೊಂದಿಗೆ ಸಂಬಂಧವಿಟ್ಟು ಕೊಂಡವರು. ತಮ್ಮ ಒಂದು ಎಕರೆ ಗದ್ದೆಯನ್ನು ತನ್ನ ಸ್ನೇಹಿತರಾದ ರಾಯರಿಗೆ ೫೦೦ ರೂಗೆ ಮಾರಾಟ ಮಾಡಿದರು. ಈ ಸಂಬಂಧ ರಾಯರು ಖರೀದಿ ಪತ್ರವನ್ನು ರೂಪಿಸಿ ಭೂಮಿಯ ವ್ಯವಹಾರ ನಡೆಸಿದರು. ಆದರೆ ರಾಮಭಟ್ಟರ ಮನೆಗೆ ಬಂದಿದ್ದ ಜಲಶಿಲ್ಪಿಯೊಬ್ಬ ಭಟ್ಟರ ಹಣವನ್ನು ಮತ್ತು ಭೂಮಿಯ ಸಂಬಂಧವನ್ನು ತಪ್ಪಿಸುವ ಉದ್ದೇಶದಿಂದ ರಾಮಭಟ್ಟರಿಗೆ ತಾವು ೫೦೦ ರೂಗೆ ಮಾರಾಟ ಮಾಡಿದ ಭೂಮಿಯಲ್ಲಿ ನಿಧಿ ಇದೆ. ಈ ನಿಧಿಯ ವಿಷಯ ತಿಳಿದು ರಾಯರು ೫೦೦ ರೂಪಾಯಿಗೆ

ಗದ್ದೆಯನ್ನು ಕೊಂಡುಕೊಂಡಿದ್ದಾರೆ. ಹಾಗೂ ಖರೀದಿ ಪತ್ರದಲ್ಲಿ 'ಜಲ-ತರು-ತೃಣ-ನಿಧಿ-ಕಾಷ್ಠ-ನಿಕ್ಷೇಪ ಸಹಿತ' ಎಂದು ಬರೆದಿದ್ದಾರೆ. ನೀವು ಮೋಸ ಹೋದಿರಿ. ರಾಯರಿಂದ ಭೂಮಿಯನ್ನು ವಾಪಾಸು ಪಡೆಯಿರಿ ನಂತರ ನಿಧಿಯನ್ನು ನಮ್ಮದಾಗಿಸಿಕೊಳ್ಳುವ ಎಂದ ಜಲಶಿಲ್ಪಿ ಮಾತುಗಳನ್ನು ಸತ್ಯವೆಂದು ನಂಬಿ, ಭಟ್ಟರು ರಾಯರಿಂದ ೧೦೫೦ ರೂಗೆ ಭೂಮಿಯನ್ನು ಹಿಂಪಡೆದರು ಮತ್ತು ಜಲಶಿಲ್ಪಿಯೊಂದಿಗೆ ಒಪ್ಪಂದ ಮಾಡಿಕೊಂಡು ನಿಧಿಯನ್ನು ಶೋಧಿಸುವ ಕಾರ್ಯ ರಾತ್ರಿಯೆಲ್ಲ ನಡೆಯಿತು. ನಿಧಿ ಸಿಗಲಿಲ್ಲ ಜಲಶಿಲ್ಪ ಮತ್ತು ಮಂತ್ರವಾದಿ ಅಲ್ಲಿಂದ ಪರಾರಿಯಾಗಿದ್ದರು. ರಾಮಭಟ್ಟರು ಎಲ್ಲವನ್ನು ಕಳೆದುಕೊಂಡು ಏನೂ ನಡೆದಿಲ್ಲ ಎಂಬ ನಿಲುವಿಗೆ ಬಂದರು. ಕತೆಗಾರರು ರಾಮಭಟ್ಟರ ಪಾತ್ರದ ಮೂಲಕ ಸ್ಥಳೀಯ ಸತ್ವದ ನೆಲೆಯನ್ನು ಅಭಿವ್ಯಕ್ತಿಸುತ್ತಾರೆ. ಹೇಳಿದನ್ನು ನಂಬುವ ಪ್ರಾಮಾಣಿಕತೆಯ ಪಾತ್ರವಾಗಿ ರಾಮಭಟ್ಟರು ಕಾಣುತ್ತಾರೆ.

ಜಿ.ಎನ್. ಕಲಮದಾನಿ ಅವರ 'ಮಾಲತಿಯ ಸಮಸ್ಯೆ' ಕತೆಯು ಸ್ತ್ರೀ ಅಸ್ತಿತ್ವದ ಸಂವೇದನಗಳನ್ನು ಕೌಟುಂಬಿಕ ಚೌಕಟ್ಟಿನೊಳಗೆ ಗುರುತಿಸುವ ಪ್ರಯತ್ನವನ್ನು ಮಾಡುತ್ತದೆ. ಈ ಕತೆಯಲ್ಲಿ ವ್ಯಕ್ತವಾಗುವ 'ಮಾಲತಿ' ಪಾತ್ರವು ಆಧುನಿಕ ಪ್ರಜ್ಞೆಯ ಪಾತ್ರವಾಗಿ ತೋರುತ್ತದೆ. ಮಾಲತಿ ತನ್ನ ಗಂಡನ ಮಾನ್ಯತೆ ಇಲ್ಲದೆ ಮತ್ತು ಕೇಳದೆ ತನ್ನ ಮನೆಯ ಕೆಲಸಕ್ಕೆ ಅನಾಥೆಯಾದ ಪಾರ್ವತಿಯನ್ನು ನೇಮಕ ಮಾಡಿಕೊಳ್ಳುತ್ತಾಳೆ. ಆನಂತರ ಗಂಡನಲ್ಲಿ ತಾನು ಕೆಲಸಕ್ಕೆ ಪಾರ್ವತಿಯನ್ನು ನೇಮಕ ಮಾಡಿರುವ ವಿಚಾರ ತಿಳಿಸುತ್ತಾಳೆ. ತಾನು ಗರ್ಭಿಣಿಯಾಗಿದ್ದರಿಂದ ತವರು ಮನೆಗೆ ಹೋಗುವಾಗ ಪಾರ್ವತಿಯನ್ನು ತನ್ನ ಗಂಡ ಬಿಂದುರಾಯನೊಟ್ಟಿಗೆ ಬಿಟ್ಟು ಹೋಗಲು ಅವಳ ಮನಸು ಒಪ್ಪದೆ ಕೊನೆಗೆ ತನ್ನ ಹೆರಿಗೆ ಗಂಡನ ಮನೆಯಲ್ಲಿಯೇ. ತವರು ಮನೆಗೆ ಹೋಗುವುದಿಲ್ಲವೆಂದು ನಿರ್ಧಾರ ಮಾಡುತ್ತಾಳೆ. ಕತೆಯಲ್ಲಿ ವ್ಯಕ್ತವಾಗುವ ಮಾಲತಿಯ ನಿರ್ಧಾರಗಳು ಆ ಕಾಲದ ಸಮಾಜದಲ್ಲಿ ಒಪ್ಪಿತವಲ್ಲವಾಗಿತ್ತು. ಹೆಂಡತಿ ಗಂಡನ ವಸ್ತು ಹಾಗೂ ಗಂಡನ ನಿರ್ಧಾರವೇ ಅಂತಿಮ ಎನ್ನುವ ಕಾಲದಲ್ಲಿ ಸ್ತ್ರೀ ಸಂವೇದನೆ ನೆಲೆಯ ಮೂಲಕ ಸ್ತ್ರೀ ಅಸ್ಮಿತೆಯನ್ನು ಗುರುತಿಸುತ್ತಾರೆ. ಕತೆಯಲ್ಲಿ ಮಾಲತಿಯು ಆಧುನಿಕ ಪಾತ್ರವಾಗಿ ಗುರುತಿಸಬಹುದು.

'ಕಪ್ಪು ಹುಡುಗಿ' ದ.ಬಾ. ಕುಲಕರಣಿ ಅವರ ಕತೆಯು ಬಣ್ಣದ ಮೀಮಾಂಸೆಯೊಂದಿಗೆ ಹೆಣ್ಣಿನ ಜೀವನ ಮೀಮಾಂಸೆಯನ್ನು ಚರ್ಚೆಗೆ ಒಳಪಡಿಸುತ್ತದೆ. ಕತೆಯಲ್ಲಿ ನಿರೂಪಿತಗೊಳ್ಳುವ 'ಜಾನಕಿ' ಎಂಬ ಪಾತ್ರವು ಆಧುನಿಕ ಮಾದರಿಯ ಪಾತ್ರವಾಗಿ ತೋರುತ್ತದೆ. ಭಾರತೀಯ ಬ್ರಾಹ್ಮಣ ಪರಂಪರೆಯಲ್ಲಿ ಹೆಣ್ಣು ಮಕ್ಕಳಿಗೆ ವಸಾಹತುಕಾಲದಲ್ಲಿ ಅನೇಕ ನಿರ್ಬಂಧಗಳಿದ್ದವು.

ಬಾಲ್ಯವಿವಾಹ, ವಿಧವೆಯಂತಹ ಕ್ರಮಗಳು ಬದುಕಿನ ಭಾಗವಾಗಿತ್ತು. ಹೆಣ್ಣು ಕಾಮವನ್ನು ತಣಿಸುವ ಮತ್ತು ಮಗುವನ್ನು ಹೆರುವ ವಸ್ತುವಾಗಿ ಗ್ರಹಿಸಲಾಗಿತ್ತು. ಈ ಕತೆಯಲ್ಲಿ ಕತೆಗಾರರು ಜಾನಕಿಯ ಮೂಲಕ ಹೆಣ್ಣಿನ ಅಸ್ತಿತ್ವವನ್ನು ನಿರೂಪಿಸುತ್ತಾರೆ. ಜಾನಕಿ ಕಪ್ಪಾದ ಹುಡುಗಿಯಾಗಿರುವುದರಿಂದ ಎಲ್ಲರೂ ದೂರವಿಡುತ್ತಾರೆ. ಮದುವೆಯಾಗಲು ಬಂದ ವರಗಳು ಹುಡುಗಿ ಕಪ್ಪೆಂದು ಲಗ್ನವಾಗುವುದಿಲ್ಲ. ಜಾನಕಿಯು ಲಗ್ನವನ್ನು ನಿರಾಕರಿಸಿ ಓದನ್ನು ಮುಂದುವರಿಸುತ್ತಾಳೆ. ತನ್ನ ತಾಯಿಯ ಮತ್ತು ತಂಗಿಯ ಹೆರಿಗೆಯನ್ನು ಕಂಡು ಮತ್ತು ಆರೈಕೆ ಮಾಡಿದ ಜಾನಕಿ ತಾನು ಮಗುವನ್ನು ಹೆರುವ ಸಾಧನವಾಗಬಾರದು ಎಂಬ ನಿರ್ಧಾರಕ್ಕೆ ಬರುತ್ತಾಳೆ. ತನ್ನ ತಾಯಿ ಮತ್ತು ತಂಗಿಯನ್ನು ಹೆರುವ ಕಾರ್ಖಾನೆಗಳೆಂದು ಸಂಭೋದಿಸುತ್ತಾಳೆ. ತಂದೆಯ ವಿರೋಧದ ನಡುವೆ ಓದಬೇಕೆಂದು ಹಠವಿಡಿದು ವೈದ್ಯಶಾಸ್ತ್ರವನ್ನು ಅಭ್ಯಾಸ ಮಾಡುತ್ತಾಳೆ. ಅವಳ ಓದುವಿಕೆಯ ಚಿಂತನೆಯಲ್ಲಿ ಪ್ರಧಾನವಾದ ನಿಲುವು 'ಹೆಣ್ಣನ್ನು ಹೆರುವ ಸ್ಥಾನದಿಂದ ದಾಟಿಸುವುದಾಗಿತ್ತು.' ಓದಿ ವೈದ್ಯೆಯಾದ ಮೇಲೆ ತನ್ನ ತಾಯಿಯೊಂದಿಗೆ ಹೆಣ್ಣಿನ ಸ್ಥಾನಮಾನವನ್ನು ಕೌಟುಂಬಿಕ ನೆಲೆಯನ್ನು ಚರ್ಚಿಸಿ ಗಂಡಿಗೆ ಇರುವ ವಂಶವೃದ್ಧಿಯ ಶಕ್ತಿಯನ್ನು ಕಡಿತಗೊಳಿಸಬೇಕೆಂದು (ಅಪರೇಷನ್) ನಿರ್ಧರಿಸುತ್ತಾಳೆ. ಕತೆಯು ಹೆಣ್ಣಿನ ಬದುಕಿನಲ್ಲಿ ಸುಧಾರಣೆಯ ತತ್ವವನ್ನು ಗುರುತಿಸುವುದಲ್ಲದೆ ಜಾನಕಿಯ ಮೂಲಕ ಕತೆಗಾರರು ಹೆಣ್ಣು ಮಕ್ಕಳನ್ನು ಹೆರುವ ಸಾಧನವಲ್ಲ ಗಂಡು-ಹೆಣ್ಣುಗಳು ಒಂದು ಮಗುವಿನ ಜನನ ಮತ್ತು ಪೋಷಣೆಗೆ ಸಮಾನ ಕಾರಣರು ಎಂದು ಹೇಳುವ ಜೊತೆ ಅತಿಸಂತಾನ ಮತ್ತು ಹೆಣ್ಣಿನ ಶೋಷಣೆಯನ್ನು ನಿರಾಕರಿಸಿ ಸ್ತ್ರೀ ಅಸ್ಮಿತೆಯನ್ನು ಮಂಡಿಸುತ್ತದೆ.

ಸರಸ್ವತಿ ಬಾಯಿ ರಾಜವಾಡೆ ಅವರ 'ಚಾವಡಿ ಕೂಟ' ಎನ್ನುವ ಕತೆಯು ಸ್ತ್ರೀಯೊಬ್ಬಳು ಆಧುನಿಕ ಪ್ರಜ್ಞೆಯನ್ನು ಒಳಗೊಳ್ಳುವ ಮತ್ತು ಬ್ರಾಹ್ಮಣ ಪರಂಪರೆಯ ಅನೇಕ ಮೂಢ ಆಚರಣೆಗಳನ್ನು ವೈಚಾರಿಕ ನಿಲುವಿನಿಂದ ನೋಡುವ ತಾತ್ವಿಕತೆಯನ್ನು ಮಂಡಿಸುತ್ತದೆ. ಕತೆಯಲ್ಲಿ ಸುಶೀಲಮ್ಮ ಎನ್ನುವ ಪಾತ್ರವು ಆಧುನಿಕ ಪ್ರಜ್ಞೆಯ ಪಾತ್ರವಾಗಿ ಗೋಚರಗೊಳ್ಳುತ್ತದೆ. ಕತೆಗಾರ್ತಿಯು ಸುಶೀಲಮ್ಮಳ ಮೂಲಕ ಸ್ಥಳೀಯ ಪರಂಪರೆಯ ಬದುಕಿನ ಸತ್ವದೊಳಗೆ ಆಧುನಿಕ ಚಿಂತನೆಗಳು ಸಂಕರಗೊಳ್ಳುವ ಹಾಗೂ ಸಂಘರ್ಷಕ್ಕೆ ತನ್ನನ್ನು ಒಡ್ಡಿಕೊಳ್ಳುವ ಬಗೆಯನ್ನು ಚರ್ಚಿಸುತ್ತಾರೆ. ಸುಶೀಲಮ್ಮ ತಾನು ನಡೆದುಕೊಂಡು ಬಂದಿರುವ ಪರಂಪರೆಯ ನಿಲುವುಗಳನ್ನು ಉದಾಸೀನದಿಂದ ನಿರಾಕರಿಸುತ್ತಾಳೆ. ಪೂಜೆ, ವ್ರತ, ಮಡಿ-ಮೈಲಿಗೆ ಜಾತಿಯನ್ನು ಗುರುತಿಸಲು ಉಡುವ ಉಡುಗೆ, ಸಂಪ್ರದಾಯ ಬದ್ಧ ಆಹಾರ ಕ್ರಮವನ್ನು

ದಾಟುವ ಕಡೆಗೆ ಮುಖ ಮಾಡುತ್ತಾಳೆ. ಸುಶೀಲಮ್ಮಳ ಅಜ್ಜಿ. ಗಂಗಜ್ಜಿಯು ದೇವರನ್ನು ಪೂಜಿಸಬೇಕು, ದಿನಕ್ಕೆ ಒಂದು ಬಗೆಯ ಸಿಹಿಯನ್ನು ನೈವೇದ್ಯವಾಗಿ ಮಾಡಬೇಕು ಜಾತಿ–ನೀತಿ–ಪರಂಪರೆಯನ್ನು ಉಳಿಸಿಕೊಂಡು ಹೋಗಬೇಕು ಎನ್ನುವಳು. ಸುಶೀಲಮ್ಮ ಅಜ್ಜಿಯ ಮಾತನ್ನು ನಿರಾಕರಿಸಿ. ದೇವರಿಗೆ ದಿನೇ–ದಿನೇ ಬಗೆಬಗೆಯ ತಿಂಡಿ ಮಾಡಿದರೆ ದೇವರು ಉಣ್ಣುತ್ತಾನೆಯೇ ನಮ್ಮ ಬಾಯಿ ಚಪಲಕ್ಕೆ ಮಾಡುವುದಲ್ಲವೇ? ಎಂಬ ಪ್ರಶ್ನೆಯನ್ನು ಅಜ್ಜಿಯ ಮುಂದೆ ಮತ್ತು ತನ್ನ ಗೆಳತಿಯರ ಮುಂದೆ ಮಂಡಿಸುತ್ತಾಳೆ. ಅಯ್ಯರು, ಅಯ್ಯಂಗಾರ್ಯ, ದೇಶಸ್ಥರು, ಕರ್ನಾಟಕದವರು ಎಂದು ತಿಳಿಯಲು ಕಚ್ಚೆ ಸೀರೆಯನ್ನು ಉಡಬೇಕು ಎಂದು ಸೀತಮ್ಮನವರು ಅಂದರೆ. ಸುಶೀಲಮ್ಮ, ಸೀತಮ್ಮಳ ಬ್ರಾಹ್ಮಣ ಪರಂಪರೆಯ ನೆಲೆಯ ಮಾತುಗಳನ್ನು ಸೂಕ್ಷ್ಮವಾಗಿ ಗ್ರಹಿಸಿ. ಕಚ್ಚೆ ಸೀರೆ ಉಡುವುದು ಜಾತಿಯ ಎಡ್ವರ್ಟೈಸ್ಮೆಂಟ್ ಎಂದೂ ಹೇಳುವ ಮೂಲಕ ಜಾತಿ ಎನ್ನುವುದು ಹುಟ್ಟಿನಿಂದ ಬಂದದಲ್ಲ, ದೇವರು ಕೊಟ್ಟದ್ದೂ ಅಲ್ಲ ಎನ್ನುವ ವೈಚಾರಿಕ ನಿಲುವಿಗೆ ಬರುತ್ತಾಳೆ. ಹೀಗಾಗಿ ಸುಶೀಲಮ್ಮಳನ್ನು ಆಧುನಿಕ ಪ್ರಜ್ಞೆಯ ಪಾತ್ರವೆಂದು ಚರ್ಚಿಸಬಹುದು.

'ಅಜ್ಜನೆಟ್ಟ ಮರ' ಎನ್ನುವ ಬಾಗಲೋಡಿ ದೇವರಾಯರ ಕತೆಯು ವಸಾಹತುಶಾಹಿಯ ಪ್ರಭಾವದಿಂದ ಹುಟ್ಟಿಕೊಂಡ ವ್ಯಾಪಾರಿಕ ಪ್ರಜ್ಞೆ ಮತ್ತು ಹಣದ ಮೌಲ್ಯೀಕರಣವು ಸ್ಥಳೀಯ ಸತ್ವವನ್ನು, ಕೌಟುಂಬಿಕ ಸಂಬಂಧವನ್ನು ಹೇಗೆ ಕಳೆಯಿತು ಎಂಬ ತತ್ವವನ್ನು ಮಂಡಿಸುತ್ತದೆ. ಈ ಕತೆಯಲ್ಲಿ ಬರುವ ಸಂಪಿಗೆರಾಯ ಮತ್ತು ಅವನ ಹೆಂಡತಿಯು ಸ್ಥಳೀಯ ಪಾತ್ರವಾಗಿ, ಶ್ರೀನಿವಾಸ ಮತ್ತು ಅವನ ಹೆಂಡತಿಯು ಆಧುನಿಕ ಮಾದರಿಯ ಪಾತ್ರವಾಗಿ ತೋರುತ್ತಾರೆ. ಸಂಪಿಗೆರಾಯ ಮತ್ತು ಅವನ ಹೆಂಡತಿಯು ತಮ್ಮ ಪರಂಪರೆಯಿಂದ ಬಂದಿರುವ ಆಸ್ತಿ, ಮನೆ, ಸಂಪಿಗೆಯ ಮರ, ಸಂಸ್ಕೃತಿಯ ಸ್ವರೂಪವನ್ನು ಕಾಪಾಡಿಕೊಳ್ಳುವುದರೊಂದಿಗೆ ಅಂತ:ರಾತ್ಮವಾದ ಸಂಬಂಧವನ್ನು ಹೊಂದಿದ್ದರು. ತನ್ನ ಮಗ ಹಣದ ಆಸೆಯಿಂದ ದೇವರ ಚಿನ್ನವನ್ನು ಅಡವಿಡಲು ಕೇಳಿದಾಗ ಮಗನಿಗೆ ಬುದ್ಧಿವಾದ ಹೇಳಿ ಚಿನ್ನವನ್ನು ಅಡವಿಡಲು ನಿರಾಕರಿಸುತ್ತಾರೆ ಸಂಪಿಗೆರಾಯರು. ಪ್ರತಿವರ್ಷ ಸಂಪ್ರದಾಯದಂತೆ ಮನೆದೇವರಿಗೆ ಹೋಮ, ಸತ್ಯನಾರಾಯಣ ಪೂಜೆ, ದಾನ–ಧರ್ಮಗಳು ನಡೆದುಕೊಂಡು ಬರುತ್ತಿರುವುದನ್ನು ಮಗ ನಿಲ್ಲಿಸಿ, ಸುಮ್ಮನೆ ಹಣ ಖರ್ಚು ಮಾಡುವುದು ಮೂರ್ಖತನ, ಈ ದೇವರು ದಿಂಡಿರು ಎಂದು ಹಣವನ್ನು ಖರ್ಚು ಮಾಡುವ ಬದಲು ಹಣವನ್ನು ವ್ಯಾಪಾರದಲ್ಲಿ ತೊಡಗಿಸಿಕೊಂಡರೆ, ಹಣದ ಮೇಲೆ ಹಣವಾಗುತ್ತದೆ ಎಂದು ಎಲ್ಲಾ ಆಚರಣೆಯನ್ನು ನಿಲ್ಲಿಸಿದ ಮಗನ ಕ್ರಮವನ್ನು ದಿಟ್ಟವಾಗಿ ಸಂಪಿಗೆರಾಯ ನಿರಾಕರಿಸಿ

ಮಗನನ್ನು ಪ್ರಶ್ನಿಸುತ್ತಾರೆ. ಆದರೆ ಕೊನೆಗೆ ಸೋತು ಸುಮ್ಮನಾಗುತ್ತಾರೆ.

ಸಂಪಿಗೆರಾಯ ತನ್ನ ಆಸ್ತಿ, ಮನೆ, ದೇವರು ಮತ್ತು ಮನೆತನದ ಪರಂಪರೆಯನ್ನು ಗುಣಾತ್ಮಕವಾಗಿ ಕಾಣುವ ಜೊತೆಗೆ ವಸಾಹತುಶಾಹಿಯ ಹಣಕೇಂದ್ರಿತ ಭೌತಪರಂಪರೆಯನ್ನು ನಿರಾಕರಿಸುತ್ತಾನೆ, ಕತೆಯುದ್ದಕ್ಕೂ ಸಂಪಿಗೆರಾಯ ಮತ್ತು ಅವನ ಹೆಂಡತಿ ಸ್ಥಳೀಯ ಪಾತ್ರವಾಗಿ ಕಾಣುತ್ತಾರೆ. ಶ್ರೀನಿವಾಸನಿಗೆ ಅರಿವಿನ ಪ್ರಜ್ಞೆ ಹುಟ್ಟಿ, ವ್ಯಾಪಾರ ಚಟುವಟಿಕೆಗಳಲ್ಲಿ ತೊಡಗಿಕೊಂಡ ಮೇಲೆ ಬಹುದೊಡ್ಡ ಶ್ರೀಮಂತನಾಗುತ್ತಾನೆ. ತನ್ನ ತಂದೆ-ತಾಯಿ, ದೇವರು, ಆಚಾರಗಳನೆಲ್ಲ ಹಣದ ಮೌಲ್ಯದ ಸಂಬಂಧದಿಂದನೇ ನೋಡುತ್ತಾನೆ. ದೇವರ ಚಿನ್ನ ಹಾಗೂ ಪೀಠವನ್ನು ಮಾರಾಟ ಮಾಡಿ ಬಂದ ಹಣವನ್ನು ಅಕ್ಕಿ ವ್ಯಾಪಾರಕ್ಕೆ ಹಾಕುತ್ತಾನೆ. ತನ್ನ ತಂದೆ ತಾಯಿಯನ್ನು ನೋಡಿಕೊಳ್ಳುವುದಕ್ಕೆ ಕಷ್ಟವೆಂದು ತನ್ನೊಂದಿಗೆ ಇಟ್ಟುಕೊಳ್ಳದೆ. ತನ್ನ ಹಳೆಯ ಪರಂಪರೆಯ ಮನೆಯಲ್ಲಿ ಬಿಡುತ್ತಾನೆ. ಮನೆಯಲ್ಲಿ ಹಿರಿಯರು ನಡೆಸಿಕೊಂಡು ಬರುತ್ತಿದ್ದ ಪೂಜೆ, ದಾನ, ಧರ್ಮಗಳನ್ನು ನಿಲ್ಲಿಸಿ, ತಂದೆ-ತಾಯಿಗಳ ಮಾತನ್ನು ನಿರಾಕರಿಸುತ್ತಾನೆ. ಹಣದ ಅತಿಯಾದ ಆಸೆಯಿಂದ ತನ್ನ ಹಿರಿಯರು ಬಾಳಿ ಬದುಕಿಕೊಂಡು ಬಂದಿರುವ ಮನೆಯನ್ನೂ ಮಾರಾಟ ಮಾಡುತ್ತಾನೆ. ಕತೆಯಲ್ಲಿ ಶ್ರೀನಿವಾಸ ಭೌತಜಗತ್ತನ್ನು ಒಪ್ಪಿಕೊಳ್ಳುವ ಹಣದ ಮೂಲಕ ಬದುಕನ್ನು ಕಾಣುವ ಪಾತ್ರವಾಗಿ ಅಭಿವ್ಯಕ್ತಗೊಳ್ಳುತ್ತಾನೆ ಹಾಗಾಗಿ ಶ್ರೀನಿವಾಸನನ್ನು ಆಧುನಿಕ ಪಾತ್ರವೆಂದು ಗುರುತಿಸಬಹುದು.

'ಸೋತ ಮೇಲೆ ಬುದ್ಧಿ' ಎಂಬ ಇದಿನಬ್ಬ ಬಿ ಎಂ ಅವರ ಕತೆಯು ಕೃಷಿ ಉತ್ಪನ್ನಗಳ ವ್ಯಾಪಾರದಲ್ಲಿ ನಡೆಯುತ್ತಿದ್ದ ಮೋಸ, ಯುದ್ಧದ ಕಾಲದಲ್ಲಿನ ಬೆಲೆ ಏರಿಕೆ, ಬಂಡವಾಳಶಾಹಿಗಳಿಂದ ನಡೆಯುವ ಶೋಷಣೆಯ ಕುರಿತಾದ ಸ್ವರೂಪವನ್ನು ಚರ್ಚಿಸುತ್ತದೆ. ಈ ಕತೆಯಲ್ಲಿ ಬರುವ ಕಿಟ್ಟಯ್ಯನು ಸ್ಥಳೀಯ ಪಾತ್ರವಾಗಿ ಅಭಿವ್ಯಕ್ತಗೊಳ್ಳುತ್ತಾನೆ. ಕಿಟ್ಟಯ್ಯ ವರ್ಷಕ್ಕೆ ೬ ಖಂಡಿಗೆ ಅಡಿಕೆ ಬೆಳೆದು ತಮ್ಮ ಊರಲ್ಲೆ ವ್ಯಾಪಾರ ಮಾಡಿಕೊಂಡು ನಂಬಿಕೆ, ವಿಶ್ವಾಸ ಮತ್ತು ಗೌರವದಿಂದ ಬದುಕು ಕಟ್ಟಿಕೊಳ್ಳುತ್ತಾರೆ. ಪೇಟೆಯ ಅಡಿಕೆ ವ್ಯಾಪಾರಿ ಕೊರಗಯ್ಯ ತಿಮ್ಮಯ್ಯನ ಮೂಲಕ ಕಿಟ್ಟಯ್ಯನನ್ನು ತನ್ನ ಮಂಡಿಗೆ ಬರುವಂತೆ ಮಾಡಿ ತನ್ನ ಮಾತಿನ ಕೌಶಲ್ಯದಿಂದ ಕಿಟ್ಟಯ್ಯನನ್ನು ಬುಟ್ಟಿಗೆ ಹಾಕಿಕೊಂಡು, ತನ್ನ ಗ್ರಾಹಕನಾಗಿ ಮಾಡಿಕೊಳ್ಳುತ್ತಾನೆ. ಕಿಟ್ಟಯ್ಯ ಕೊರಗಯ್ಯನ ಮಾತಿಗೆ ಬೆಲೆ ನೀಡಿ ನಂಬಿಕೆಯಿಂದ ಮಾರಾಟ ಮಾಡುತ್ತಾನೆ. ಎರಡು ವರ್ಷವಾದ ನಂತರ ಕೊರಗಯ್ಯನಿಂದ ತನಗೆ ಮೋಸವಾಗುತ್ತದೆ ಎಂದು ತಿಳಿದು ಕೆಟ್ಟ ಮೇಲೆ ಬುದ್ಧಿ ಬಂದಿತ್ತೆಂಬ ನಿಲುವಿನಲ್ಲಿ ಕೊರಗಯ್ಯನಲ್ಲಿನ ಅಡಿಕೆ ವ್ಯಾಪಾರವನ್ನು ನಿಲ್ಲಿಸುತ್ತಾನೆ. ಕತೆಯಲ್ಲಿ ಕಿಟ್ಟಯ್ಯನ ಮೋಸವನ್ನು

ಅರಿತು ಈ ನೆಲದ ಸತ್ವವನ್ನು ಇಟ್ಟುಕೊಂಡು ಬದುಕು ಕಾಣುವ ಸ್ಥಳೀಯ ಪಾತ್ರವಾಗಿ ತೋರುತ್ತದೆ.

ಅಮರೇಶ ನುಗಡೋಣಿಯವರ 'ದಾಳಿ ನಡೆದಾವೋ ಅಣ್ಣ' ಕತೆಯಲ್ಲಿ ಬರುವ 'ಮಲ್ಲಯ್ಯ' ಪಾತ್ರವು ಸ್ಥಳೀಯ ಬದುಕಿನ ಸತ್ವವನ್ನು ಒಪ್ಪಿಕೊಂಡು ಅದನ್ನೆ ಕಾಪಾಡಿಕೊಳ್ಳುವುದನ್ನು ಗುರುತಿಸುತ್ತೇವೆ. ಮಲ್ಲಯ್ಯ ತನ್ನ ಕೃಷಿ ಬದುಕನ್ನು ನಂಬಿಕೊಂಡು ನೆಮ್ಮದಿಯ ಬದುಕು ಕಂಡರೂ ಕೊನೆಯ ಕಾಲಕ್ಕೆ ಎಲ್ಲಾವನ್ನು ಕಳೆದುಕೊಂಡು ಒಂಟಿಯಾಗಿ ಸಮಸ್ಯೆಯ ಗೂಡಾಗುತ್ತಾನೆ. ಮಲ್ಲಯ್ಯನಿಗೆ ಬದುಕಾಗಿದ್ದ ಎತ್ತು, ಹೊಲ, ಶಿವನಕೊಳ್ಳ ಮಾಸದೇ ಹಾಗೆಯೇ ಅವನೊಳಗೆ ಉಳಿಯುತ್ತದೆ. ಯಾವಾಗ ಬಂಡವಾಳಶಾಹಿತ್ವದ ಮೈನಿಂಗ್ ಕಂಪನೆಗಳು ಶಿವನಕೊಳ್ಳದ ಸುತ್ತಲಿ ಪ್ರದೇಶಕ್ಕೆ ಪ್ರವೇಶ ಪಡೆದು ಗುಡ್ಡ ಬೆಟ್ಟ, ಕಾಡು, ಗಿಡ ಬಳ್ಳಿಗಳನ್ನು ನಾಶಮಾಡಿ ದೂಳನ್ನು ಎಲ್ಲೆಡೆ ಪಸರಿಸಿ, ಆ ಪರಿಸರದ ಜೀವಂತಿಕೆಯನ್ನು ನಾಶ ಮಾಡಿದ್ದು ಮಲ್ಲಯ್ಯ ಮನಸ್ಸಿಗೆ ಆಘಾತವನ್ನು ತಂದಿತು. ಮೈನಿಂಗ್‌ನಿಂದ ನಾಶಹೊಂದಿದ ತನ್ನ ಹೊಲ ಹಾಗೂ ಶಿವನಕೊಳ್ಳ ಪ್ರದೇಶವನ್ನು ನೋಡಿ ವ್ಯಥೆಪಡುವ ಜೊತೆಗೆ ಅದರ ಮೂಲರೂಪವನ್ನು ನೆನೆದು ಕಣ್ಣೀರಾಕುತ್ತಾನೆ. ಮಲ್ಲಯ್ಯ ಸ್ಥಳೀಯ ಪರಿಸರ ಹಾಗೂ ಜೀವನಾಭಿವ್ಯಕ್ತಿಯ ಭಾಗವಾಗಿ ಆಧುನಿಕತೆಗೆ ಮುಖಾಮುಖಿಯಾಗಿ ನಿಲ್ಲುತ್ತಾನೆ. ಈ ನಿಲುವಿನಿಂದ ಮಲ್ಲಯ್ಯನನ್ನು ಸ್ಥಳೀಯ ಪಾತ್ರವೆಂದು ಗುರುತಿಸಬಹುದು.

ಅಮರೇಶ ನುಗಡೋಣಿ ಅವರ 'ತಮಂದದ ಕೇಡು' ಕತೆಯಲ್ಲಿ ನಿರೂಪಣೆಗೊಳ್ಳುವ ದುರಂಗ ಎನ್ನುವ ಪಾತ್ರವು ಸ್ಥಳೀಯ ಪಾತ್ರವಾಗಿ ಗೋಚರವಾಗುತ್ತದೆ. ಗುರುಗ ಶಾಂತಗೌಡನ ಆಳುಮಗನಾಗಿ ದುಡಿಯುವ ಸಮುದಾಯದ ಪ್ರತಿನಿಧಿಯಾಗಿ ಕಾಣುತ್ತಾನೆ. ದುರುಗ ಶಾಂತಗೌಡನ ಜೀವನದ ಜೊತೆಯಲ್ಲಿ ನಡೆದನಲ್ಲದೆ ಗೌಡನ ಕಾರ್ಯ, ಮಾತುಕತೆಗಳಲ್ಲಿ ಭಾಗವಾಗಿ ತನ್ನ ಸಂವೇದನೆಯನ್ನು ಗೌಡನ ಅಧಿಕಾರ ಪ್ರಭುತ್ವದ ಮೂಲಕ ಅಭಿವ್ಯಕ್ತಿಸುತ್ತಾನೆ. ಗೌಡರು ಕಾಲಿನಲ್ಲಿ ತೋರಿಸಿದ್ದನ್ನು ತಲೆಯಲ್ಲಿಟ್ಟು ಮಾಡುತ್ತಿದ್ದನಲ್ಲದೆ ಗೌಡರ ನಂಬಿಕಸ್ಥ ವ್ಯಕ್ತಿಯಾಗಿ ಗೌಡನನ್ನು ಹೆಗಲ ಮೇಲೆ ಎತ್ತಿಕೊಂಡು ನದಿಯನ್ನು ದಾಟಿಸುವ ಮೂಲಕ ಗೌಡನಿಗೆ ಆಳಾಗಿ ಬದುಕನ್ನು ನಡೆಸಿದ, ಶಾಂತಗೌಡ ದುರುಗನ ಹೆಂಡತಿಯನ್ನು ಲೈಂಗಿಕವಾಗಿ ಬಳಸಿಕೊಂಡು ಅವಳೊಂದಿಗೆ ಕೊನೆವರೆಗೆ ಸಂಬಂಧ ಇರಿಸಿಕೊಂಡದ್ದರೂ ಪ್ರಶ್ನಿಸದೆ ಸುಮ್ಮನೆ ಒಪ್ಪಿಕೊಂಡಿದ್ದ. ದುರುಗನ ಮಗ ಶಾಂತಗೌಡನ ಮಗಳನ್ನು ಪ್ರೀತಿಸಿ ಲಗ್ನವಾಗುತ್ತೇನೆಂದು ನಿರ್ಧಾರ ಮಾಡಿದ್ದು ದುರುಗನಿಗೆ ಸಹಿಸಲಾಗಲಿಲ್ಲ. ಮಗನನ್ನು

ಕರೆದು ಕೇರಿಯವರು ಮೇಲುವರ್ಗದ ಗೌಡರ ಮಗಳನ್ನು ಪ್ರೀತಿಸುವುದು ತಪ್ಪು ತಮ್ಮ ಆಚಾರ ವಿಚಾರದಂತೆ ಬದುಕನ್ನು ನಡೆಸಬೇಕು ಎಂದು ಬುದ್ಧಿ ಹೇಳುವ ಮೂಲಕ ತನ್ನ ಜೀವನ ಪರಂಪರೆಯನ್ನು ಕಾಪಾಡಿಕೊಳ್ಳುತ್ತಾನೆ. ಹೀಗೆ ದುರುಗ ಸ್ಥಳೀಯ ಪಾತ್ರದಂತೆ ಕಾಣುತ್ತದೆ.

ಕುಂ.ವೀರಭದ್ರಪ್ಪ ಅವರ ಕಿವುಡ ನಾಯಿಯಾದ ಪ್ರಸಂಗ ಕತೆಯಲ್ಲಿ ಅಭಿವ್ಯಕ್ತಗೊಳ್ಳುವ 'ಕಿವುಡ' ಪಾತ್ರವು ಸ್ಥಳೀಯ ಸ್ಪರ್ಶವನ್ನು ಹೊಂದಿದೆ. 'ಕಿವುಡನು ದಲಿತ ವರ್ಗದ ಪ್ರಜ್ಞೆಯ ಭಾಗದಂತೆ ಕಾಣದೆ ದುಡಿಯುವ ಅಸ್ಪಶ್ಯವರ್ಗವಾಗಿ ಕಾಣುತ್ತಾನೆ. ಹೆಣವನ್ನು ಸಂಸ್ಕಾರ ಮಾಡಲು ಗುದ್ದು ತೋಡುವ ಕಾಯಕವನ್ನು ಮಾಡಿಕೊಂಡು ಬದುಕು ಕಟ್ಟಿಕೊಂಡಿತುವ ಕಿವುಡ, ಬಡತನ, ಹಸಿವು, ಕಾಯಕದಂತ ಜೀವನ ವಿನ್ಯಾಸವನ್ನು ಒಳಗೊಂಡಿದ್ದಾನೆ. ಅಂಗಡಿ ಅಜ್ಜಪ್ಪನ ಮೊಮ್ಮಗಳು ಸತ್ತು ಹೋಗಿರುವುದು ಕಿವುಡನಿಗೆ ಸಂತೋಷವಾಯಿತ್ತಲ್ಲದೆ ಹೆಣಕ್ಕೆ ಗುದ್ದು ತೆಗೆದ ಮೇಲೆ ಸಿಗುವ ಹಣದಿಂದ ತನ್ನ ಮಕ್ಕಳು ಹೆಂಡತಿಯ ಹೊಟ್ಟೆ ತುಂಬಿಸಬಹುದು ಎಂಬ ಖುಷಿ ಅವನಿಗೆ ಆದರೂ ಕೆಳವರ್ಗ ದಲಿತ ಸಮುದಾಯವನ್ನು ನೋಡುತ ಕ್ರಮ ಹಾಗೂ ಶೋಷಣೆಗೆ ತನ್ನನ್ನು ತೆರೆದುಕೊಳ್ಳುವುದನ್ನು ಸಹಜವಾಗಿಯೇ ಒಪ್ಪಿಕೊಳ್ಳುತ್ತಾನೆ.

ಕಿವುಡನ ಮಕ್ಕಳು ಹಸಿವಿನಿಂದ ಉಂಬಾಕೆ ಉಂಬಾಕೆ ಎಂದು ಗೋಳಿಡುವ ಜೊತೆ ಕಿವುಡನ ಹೆಂಡತಿ ಜೋಳ ಕುಚ್ಚಿ, ನೀರು ಗಂಜಿ ನೀಡಿ ಮಕ್ಕಳನ್ನು ಸಮಾಧಾನ ಮಾಡುವುದು ಕಿವುಡ ಶ್ರಮವಹಿಸಿ ಹೆಣದ ಸಂಸ್ಕಾರಕ್ಕೆ ಗುದ್ದು ತೋಡುವ ಜೊತೆಗೆ ತನ್ನ ಕೆಲಸದ ಬಗ್ಗೆ ಹೆಮ್ಮೆ ಪಟ್ಟುಕೊಳ್ಳುತ್ತಾನೆ. ಹಾಗೂ ಗುದ್ದು ತೆಗೆದಿದ್ದಕ್ಕೆ ನೀಡುವ ಹಣದಿಂದ ತನ್ನ ಕುಟುಂಬ ನಾಲ್ಕು ದಿನ ಬದುಕು ಸಾಗಿಸುತ್ತದೆ ಎಂಬ ಆಶಾಭಾವನೆಯಿಂದ ಶ್ರಮವಹಿಸಿ ದುಡಿಯುತ್ತಾನೆ. ಅಂಗಡಿ ಅಜ್ಜಪ್ಪ ನೀಡಿದ ಆರು ರೂಪಾಯಿಯನ್ನು ಪಡೆದು ತನ್ನ ಮಕ್ಕಳಿಗೆ ಆಹಾರ ತೆಗೆದುಕೊಳ್ಳುತ್ತೇನೆಂಬ ಆಶಯಿಂದ ಮನೆಯತ್ತ ಧಾವಿಸುತ್ತಾನೆ. ಆದರೆ ಸಾಬಿಯ ಕಿವುಡನ ಆರು ರೂಪಾಯಿಯನ್ನು ಕಸಿದುಕೊಂಡು ಹೋಗುತ್ತಾನೆ. ಕಿವುಡ ಹಣವನ್ನು ಕಳೆದುಕೊಂಡು ಮೌನಿಯಾಗುತ್ತಾನೆ. ಯಾವುದೇ ಪ್ರತಿಭಟನೆಯಿಲ್ಲದೆ ತನ್ನ ಬಡತನದ ಬದುಕಿಗೆ ಹೆಜ್ಜೆಹಾಕುವ ಕಿವುಡ ಸಹಜವಾದ ದಲಿತ ಪಾತ್ರವಾಗಿ ಕಾಣುತ್ತಾನೆ.

ವಾಣಿಯವರ 'ಮುರಳಿ' ಎಂಬ ಕತೆಯಲ್ಲಿ ಅಭಿವ್ಯಕ್ತವಾಗುವ 'ಮುರಳಿ' ಎಂಬ ಪಾತ್ರವು ಸ್ಥಳೀಯ ಪಾತ್ರವಾಗಿ ಗುರುತಿಸಿಕೊಳ್ಳುತ್ತದೆ. ಮುರಳಿ ಪ್ರಕೃತಿಯ ನೆಲೆಯಲ್ಲೆ

ಸಹಜವಾಗಿ ಹಾಡುತ್ತ ಕುಣಿಯುತ ಬೆಳೆದವನಲ್ಲದೆ ತಂದೆ-ತಾಯಿಯ ಆಸರೆಯಿಲ್ಲದೆ ಗುಡಿಯ ನೆರಳಲ್ಲಿ ಜೀವನ ರೂಪಿಸಿಕೊಂಡಿದ್ದ ಮುರುಳಿಯು 'ಗಾಯನ' ಕಲೆಯ ಮೂಲಕ ಜನರ ಪ್ರೀತಿಯನ್ನು ಗಳಿಸಿದ. ಮುರಳಿಯ ಬದುಕು ಪ್ರಕೃತಿದತ್ತವಾಗಿತ್ತಲ್ಲದೆ ಯಾವುದೆ ಸಾಮಾಜಿಕ ಬಂಧನಗಳಿಗೆ ಒಳಗಾಗಿರಲಿಲ್ಲ. ಅವನಿಗೆ ಗಾಯನದಿಂದಲೇ ನೆಮ್ಮದಿ ಬಂದಿತ್ತು. ಮುರುಳಿಯ ಗಾಯನಕ್ಕೆ ಮನಸೋತ ಊರಿನ ಜನರು ಮುರಳಿಯನ್ನು ಸಂಸಾರಿಯಾಗಿಸಿ, ಗುಡಿ ನಿರ್ಮಿಸಿ, ಗುಡಿಯ ಕಾರ್ಯ ಚಟುವಟಿಕೆಯನ್ನು ಮುರಳಿಗೆ ನೀಡಿದರು ಈ ನಡುವೆ ಮುರಳಿ ಸಾಮಾಜಿಕ ಕಟ್ಟುಪಾಡುಗಳಿಗೆ ಒಳಗಾದವನಲ್ಲದೆ ತನ್ನ ಮಾನಸಿಕ ನೆಮ್ಮದಿಯನ್ನು ಕಳೆದುಕೊಂಡು ಸತ್ವಹೀನನಾದನು, ಊರಿನ ಜನರೆಲ್ಲ ಮುರಳಿಯ ಚಲನ-ವಲನವನ್ನು ವೀಕ್ಷಿಸಿದಲ್ಲದೆ ಅವನ ಜೀವನದ ನಡೆಯನ್ನು ಅನುಮಾನದಿಂದ ನೋಡಿದರು ಈ ನಡುವೆ ಮುರಳಿ ನೊಂದು, ಗುಡಿಯನ್ನು ಊರಿನವರ ಸಂಬಂಧವನ್ನು ಬಿಟ್ಟು ತನ್ನ ಮೂಲ ಸ್ಥಳಕ್ಕೆ ತೆರಳಿ ಪಕ್ಷಿ ಪ್ರಾಣಿಗಳಂತೆ ಹಾಡುತ್ತ ಕುಣಿಯುತ್ತ ಬದುಕಲು ಆರಂಭಿಸಿದ, ಕತೆಯಲ್ಲಿ ಮುರಳಿ ಮಾನವ ಮೂಲ ಅಸ್ಥಿತ್ವವನ್ನು ಪ್ರತಿನಿಧಿಸುವ ಸ್ಥಳೀಯ ಪಾತ್ರವಾಗಿ ಗೋಚರವಾಗುತ್ತಾನೆ.

ಸಾವಿತ್ರಮ್ಮ ಅವರ 'ನಿರಾಶ್ರಿತರು' ಕತೆಯಲ್ಲಿ ಬರುವ ಚಂದ್ರ ಎಂಬ ಪಾತ್ರವು ಆಧುನಿಕ ಪಾತ್ರವಾಗಿ ಗೋಚರವಾಗುತ್ತದೆ. ಚಂದ್ರ ಹಳ್ಳಿಯಲ್ಲಿ ಬಾಲ್ಯವನ್ನು ಕಳೆದ ಮೇಲೆ ವೈದ್ಯಕೀಯ ಪದವಿಯನ್ನು ನಗರದಲ್ಲಿ ಮುಗಿಸಿದ ಮೇಲೆ ಪಾಕಿಸ್ತಾನದ ರಾವಲ್ ಪಿಂಡಿಯಲ್ಲಿ ವೈದ್ಯಕೀಯ ವೃತ್ತಿಯನ್ನು ಆರಂಭಿಸಿದ ಲಗ್ನವಾದ ಮೇಲೆ ತಂದೆ ತಾಯಿಯರು ಹಳ್ಳಿಯಲ್ಲಿ ವೃತ್ತಿಯನ್ನು ಆರಂಭಿಸಿ ನಮ್ಮೊಂದಿಗೆ ಇರು ಎಂದು ಹೇಳಿದರು ಒಪ್ಪದ ಚಂದ್ರ ಆಧುನಿಕವಾದ ನಗರ ಜೀವನ ಮೀಮಾಂಸೆಯನ್ನು ನೆಚ್ಚಿಕೊಂಡು ರಾವಲ್ ಪಿಂಡಿಗೆ ತೆರಳಿ ವೃತ್ತಿಯನ್ನು ಮುಂದುವರಿಸಿ ತನ್ನ ಬದುಕನ್ನು ಅತ್ಯಂತ ಸುಖಾಮಯವಾಗಿ ನಾಗರೀಕವಾಗಿ ಕಳೆಯುತ್ತಾನೆ. ರಾವಲ್ ಪಿಂಡಿಯಲ್ಲಿ ನಡೆದ ಧಾರ್ಮಿಕ ಸಂಘರ್ಷ ಚಂದ್ರವಿನ ಮಗುವನ್ನು ಕೊಲ್ಲುತ್ತದೆ ಅಲ್ಲದೆ ಹೆಂಡತಿಯನ್ನು ಅಪಹರಿಸುತ್ತದೆ. ಈ ನಡುವೆ ಚಂದ್ರ ಎಲ್ಲಾವನ್ನು ಕಳೆದುಕೊಂಡು ಹಳ್ಳಿಗೆ ಮರಳುತ್ತಾನೆ. ಚಂದ್ರವಿನ ನಾಗರೀಕ ಬದುಕು ಅವನನ್ನು ಅನಾಥವಾಗಿಸುತ್ತದೆ. ಹೀಗಾಗಿ ಚಂದ್ರ ಆಧುನಿಕ ಪಾತ್ರವಾಗಿ ತೋರುತ್ತಾನೆ.

'ಸೂತಕ' ಎನ್ನುವ ಕೃಷ್ಣ ಕೊಲ್ಹಾರ ಕುಲಕರ್ಣಿ ಅವರ ಕತೆಯಲ್ಲಿ ನಿರೂಪನೆಗೊಳ್ಳುವ ಸೋನಿ ಹಾಗೂ ಅಣ್ಣಯ್ಯ ಎಂಬ ಪಾತ್ರವು ಸ್ಥಳೀಯ ಪಾತ್ರವಾಗಿ ಕಾಣುತ್ತದೆ. ಸೋನಿ ಹಾಗೂ ಅಣ್ಣಯ್ಯ ನೀರು ತುಂಬಿಸುವ ಕಾಯಕದ ಮೂಲಕ ಜೀವನ ಸಾಗಿಸುತ್ತಾರೆ.

ಅಣ್ಣಯ್ಯ ಮಗ ಬಂಡ್ಯಾ ಆರು ತಿಂಗಳ ಮಗ ಜ್ವರ ಬಂದು ಸಾವನ್ನು ಕಾಣುತ್ತಾನೆ. ಈ ನಡುವೆ ಸೋನಿ ದುಃಖಿತಳಾಗುತ್ತಾಳೆ. ಮಗುವಿನ ಸಾವಿಗೆ ಸೋನಿಯೇ ಕಾರಣ ಎಂದು ಹೇಳುವ ಜನರ ಮಾತು ಕೇಳಿ ಸೋನಿ ನೊಂದುಕೊಳ್ಳುತ್ತಾಳೆ. ಅಣ್ಣಯ್ಯ ಹಾಗೂ ಸೋನಿ ಊರಿನ ಬಹುಜನರಿಗೆ ಬಾವಿಯಿಂದ ನೀರು ಒದಗಿಸುವ ದುಡಿಮೆಯನ್ನು ಪ್ರಾಮಾಣಿಕತೆಯಿಂದ ಮಾಡುವ ಮೂಲಕ ಜನರ ನಂಬಿಕೆ, ವಿಶ್ವಾಸವನ್ನು ಪಡೆದಿರುತ್ತಾರೆ. ಬಂಡ್ಯಾ ಹುಟ್ಟಿದ ಮೇಲೆ ಸೋನಿ ದುಡಿಮೆಯನ್ನು ಬಿಟ್ಟು ಮನೆಯಲ್ಲಿದ್ದರು ಸಮಯವಾದಾಗ ಗಂಡನಿಗೆ ಸಹಾಯ ಮಾಡುತ್ತಾಳೆ. ಗುಡಿಯಲ್ಲಿ ಪೂಜೆಯ ಸಂದರ್ಭದಲ್ಲಿ ಜಿಲೇಬಿಯ ಊಟವಿದ್ದರಿಂದ ಸೋನಿ ಮಧ್ಯಾಹ್ನದ ಬಂಡ್ಯಾವನ್ನು ಹೆಗಲಿಗೆ ಹಾಕಿಕೊಂಡು ಗುಡಿ ಬಂದು ಪೂಜೆ ಸಲ್ಲಿಸಿ ಊಟ ಮಾಡುತ್ತಾಳೆ. ಬಿಸಿಲು ಬಿಗುವಾಗಿ ಇದ್ದರಿಂದ ಬಂಡ್ಯಾನಿಗೆ ಜ್ವರಬಂದು ತೀವ್ರವಾಗಿ ಸಾವನ್ನು ಅಪ್ಪುತ್ತಾನೆ. ಅಣ್ಣಯ್ಯ ಹಾಗೂ ಸೋನಿ ಮಗುವಿನ ಸಾವಿನ ಕೊರಗಿನಲ್ಲಿಯೇ ದಿನ ಕಳೆಯುತ್ತಾರೆ. ಸಮಧಾನ ಪಡಿಸಲು ಬಂದ ಜನರೆಲ್ಲ ಸೋನಿಯನ್ನು ಅಣ್ಣಯ್ಯನ್ನು ದುಃಖದ ಮಡುವಿನಲ್ಲಿ ಹಾಕುತ್ತಾರಲ್ಲದೆ ಅವರ ನೆಮ್ಮದಿಯನ್ನು ಹಾಳು ಮಾಡುತ್ತಾರೆ. ಈ ಕತೆಯಲ್ಲಿ ಸೋನಿ ಹಾಗೂ ಅಣ್ಣಯ್ಯ ಸಹಜವಾದ ಸ್ಥಳೀಯ ಪಾತ್ರವಾಗಿ ಕಾಣುತ್ತಾರೆ.

ಸಿ.ಎನ್. ಜಯಲಕ್ಷ್ಮಿಯವರ 'ಸರದ ಬೆಲೆ' ಎನ್ನುವ ಕತೆಯಲ್ಲಿ ಅಭಿವ್ಯಕ್ತವಾಗುವ ಚಿಕ್ಕ ಲಿಂಗ ಎಂಬ ಪಾತ್ರವು ಸ್ಥಳೀಯ ಪಾತ್ರವಾಗಿ ಕಾಣುತ್ತದೆ. ಗೌಡರ ಮನೆಯಲ್ಲಿ ಆಳುಮಗನಾಗಿ ದುಡಿಮೆ ಮಾಡುತ್ತಿದ್ದ ಚಿಕ್ಕಲಿಂಗ ನಂಬಿಕೆ ಹಾಗೂ ಪ್ರಾಮಾಣಿಕ ಕೆಲಸಗಳಿಂದ ಗೌಡರ ಮನೆಯಲ್ಲಿ ವಿಶ್ವಾಸ ಗಳಿಸಿಕೊಂಡಿದ್ದು ಗೌಡರ ಮನೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದ. ದುಡಿಮೆಯ ಜೊತೆಗೆ ಶಿಸ್ತು ಪ್ರಾಮಾಣಿಕತೆ ದಕ್ಷತೆಯನ್ನು ಮೈಗೂಡಿಸಿಕೊಂಡಿದ್ದರಿಂದ ಸಿದ್ಧಲಿಂಗಯ್ಯನನ್ನು ಗೌರವದಿಂದ ಕಾಣುತ್ತಿದ್ದರು. ಸಿದ್ಧಲಿಂಗನ ಮಗಳು ಹಾಗೂ ಕೆಂಪಿ ಎಂಬ ಕೆಲಸದವಳ ಮಗಳು ಆಟವಾಡುವಾಗ ಗೌಡರ ಮಗಳ ಚಿನ್ನ ಸರವು ಕಾಣಿಸುತ್ತದೆ. ಸಿದ್ಧಲಿಂಗನ ಮಗಳ ಚಿನ್ನದ ಸರವನ್ನು ಎತ್ತಿಕೊಂಡು ಕೆಂಪಿಯ ಮಗಳೊಂದಿಗೆ ಸೇರಿ ತೋಟದಲ್ಲಿ ಬಚ್ಚಿಟ್ಟು ಮುಂದೊಂದು ದಿನ ಚಿನ್ನ ಸರವನ್ನು ಹಾಕಿಕೊಳ್ಳಬಹುದೆಂದು ನಿರ್ಧರಿಸುತ್ತಾರೆ. ಸಿದ್ಧಲಿಂಗ ಒಡತಿಯ ಚಿನ್ನದ ಸರ ಕಳೆದ ವಿಚಾರ ತಿಳಿದು ಸರವನ್ನು ಹುಡುಕುವ ಕೆಲಸ ಮಡುತ್ತಾನೆ. ಕೊನೆಗೆ ದೇವರಿಗೆ ಹರಕೆ ಕಟ್ಟಿ ಎಲ್ಲರ ಹತ್ತಿರ ಕದ್ದಿಲ್ಲ ಎಂಬ ಆಣೆ ಭಾಷೆಯನ್ನು ಕಾಯಿ ಮುಟ್ಟಿಸುತ್ತಾನೆ. ಸಿದ್ಧಲಿಂಗನ ಮಗಳು ಕಾಯಿಯನ್ನು ಮುಟ್ಟಿ ಆಣೆ ಭಾಷೆ ಮಾಡುತ್ತಾಳೆ. ನಂತರ

ಎರಡು ದಿನದಲ್ಲಿ ಜ್ವರ ಬಂದ ಮರಣ ಅಪ್ಪುತ್ತಾಳೆ. ಸಿದ್ಧಲಿಂಗನಿಗೆ ಮಗಳ ಸಾವಿನ ಕಾರಣ ತಿಳಿಯದೆ ಎಂದಿನಂತೆ ದುಡಿಮೆ ಮುಂದುವರಿಸುವ ಸಿದ್ಧಲಿಂಗ ಸ್ಥಳೀಯ ಪಾತ್ರದಂತೆ ಗೋಚರವಾಗುತ್ತದೆ.

ಸಿ.ಕೆ. ವೆಂಕಟರಾಮಯ್ಯ ಅವರ 'ಕಾಡುಪಾಪ' ಕತೆಯಲ್ಲಿ ಬರುವ ಸುಂದರರಾಯ ಆಧುನಿಕ ಪಾತ್ರವಗಿ ಗೋಚರವಾಗುತ್ತಾನೆ. ಸುಂದರರಾಯನು ವಿದ್ಯಾವಂತನಾಗಿ ಸರ್ಕಾರಿ ಕೆಲಸವನ್ನು ಪಡೆದುಕೊಂಡ ಮೇಲೆ ಅವನ ಜೀವನ ವಿನ್ಯಾಸ ಪಾಶ್ಚಾತ್ಯ ಮಾದರಿಯನ್ನು ಅನುಕರಿಸುತ್ತಾನೆ. ಮನೆಯ ನಿರ್ಮಾಣ ಆಹಾರ ತಯಾರಿಕೆ ಮಾತುಕತೆಗಳಲ್ಲಿ ನಾಗರೀಕ ಅಭಿಲಾಷೆಯನ್ನು ಹೊಂದಿದ್ದರಿಂದ ಸುಂದರರಾಯನಿಗೆ ತನ್ನ ಹೆಂಡತಿಯ ಸ್ಥಳೀಯ ಬದುಕಿನ ಕ್ರಮಗಳು ಸರಿ ತೋರುವುದಿಲ್ಲ. ಆದರೆ ಕತೆ ಸ್ಥಳೀಯ ಬದುಕಿನ ಪರಂಪರೆ ಹಾಗೂ ಆಧುನಿಕ ಬದುಕಿನ ವಿನ್ಯಾಸದ ನಡುವಿನ ಸಂಘರ್ಷ ಗೆಲುವಿನ ಅಭಿವ್ಯಕ್ತಿಯನ್ನು ಅನುಸಂಧಾನ ಮಾಡುತ್ತದೆ. ಸುಂದರರಾಯ ಯಾಂತ್ರಿಕ ಬದುಕಿನ ಚಿಂತನೆಯನ್ನೆ ಪ್ರಧಾನವಾದ ಜೀವನ ಮೀಮಾಂಸೆ ಎಂದು ಗುರುತಿಸುತ್ತಾನೆ. ಹಾಗಾಗಿ ಸುಂದರರಾಯನ ಪಾತ್ರವು ಈ ಕತೆಯಲ್ಲಿ ಆಧುನಿಕ ಪಾತ್ರವಾಗಿ ಕಾಣುತ್ತದೆ.

'ನನ್ನ ಗೊಂಬೆ' ಎನ್ನುವ ತ್ರಿವೇಣಿ ಅವರ ಕತೆಯು ಭಾರತೀಯ ಕುಟುಂಬ ವಿನ್ಯಾಸವನ್ನು ಪರಂಪರೆಯ ನೆಲೆಯಲ್ಲಿ ಚರ್ಚಿಸುವ ಜೊತೆಗೆ ಸ್ಥಳೀಯತೆಯನ್ನು ಅನುಸಂಧಾನ ಮಾಡುತ್ತದೆ. ಈ ಕತೆಯಲ್ಲಿ ತೆರೆದುಕೊಳ್ಳುವ ರಾಜು ಹಾಗೂ ತಾರ ಎಂಬ ಎರಡು ಪಾತ್ರಗಳು ಸ್ಥಳೀಯ ಪಾತ್ರವಾಗಿ ಕಾಣುತ್ತದೆ. ರಾಜು ಬಿ.ಎ.ಪದವಿಯನ್ನು ಮುಗಿಸಿದ ಮೇಲೆ ಒಬ್ಬಳು ಹುಡುಗಿಯೊಂದಿಗೆ ಪ್ರೇಮಾಂಕುರವಾಗುತ್ತದೆ. ಆ ಪ್ರೇಮವು ಭಂಗವಾದ ಮೇಲೆ ಲಗ್ನವಾಗದೆ ಉಳಿಯುತ್ತಾನೆ. ರಾಜುಗೆ ಇಪ್ಪತ್ತು ವರ್ಷಗಳಾಗುವಾಗ ರಾಜುವಿನ ತಂಗಿಗೆ ಹೆಣ್ಣು ಮಗುವಾಗುತ್ತದೆ. ಆ ಹೆಣ್ಣು ಮಗುವಿಗೆ ತಾರ ಎಂದು ಹೆಸರು ಇಡುವ ಮೂಲಕ ಪ್ರೀತಿಯಿಂದ ಮಗುವನ್ನು ಕಾಣುತ್ತಾನೆ. ತಾರಳಿಗೆ ತಾಯಿ ತಂದೆಗಿಂತ ಮಾವನೇ ಬಹುಮೆಚ್ಚಿನ ವ್ಯಕ್ತಿಯಾಗಿ ಕಾಣುತ್ತಾನೆ. ತಾರಳ ಬೆಳವಣಿಗೆಯಲ್ಲಿ ರಾಜು ಬಹುಮುಖ್ಯ ವ್ಯಕ್ತಿಯಾಗಿ ಕಾಣುತ್ತಾನಲ್ಲದೆ, ತಾರಳ ಆಸೆ ಆಸಕ್ತಿಯನ್ನು ಪೂರೈಸುತ್ತಾನೆ. ತಾರ ಬೆಳದೆದಂತೆ ರಾಜುವಿನ ಮೇಲೆ ಮನಸ್ಸಾಗುತ್ತದೆ. ವಯಸ್ಸಿನ ಅಂತರಕ್ಕಿಂತ ರಾಜುವಿನ ಮನಸ್ಸು ವ್ಯಕ್ತಿತ್ವಕ್ಕೆ ತಾರ ಮನಸೋಲುತ್ತಾಳೆ.

ರಾಜುವೇ ತನ್ನ ಸರ್ವಸ್ವವೆಂದು ತಿಳಿಯುವ ಮೂಲಕ ರಾಜುವನ್ನು ಬಿಟ್ಟು ಬದುಕಿಲ್ಲವೆಂದುಕೊಳ್ಳುತ್ತಾಳೆ. ರಾಜು ತಾರಳಿಗಿಂತ ವಯಸ್ಸಿನಲ್ಲಿ ದೊಡ್ಡವನಾದ ಕಾರಣ

ರಾಜು ತಾರಳನ್ನು ಲಗ್ನವಾಗಿ ಬದುಕು ಸಾಗಿಸಲು ಒಪ್ಪದೆ ಒಳ್ಳೆಯ ಹುಡುಗನನ್ನು ನೋಡಿ ಲಗ್ನಮಾಡಿ ತಾರಳಿಂದ ದೂರವಾಗುತ್ತಾನೆ. ತಾರಳು ರಾಜುವನ್ನು ದೂರಮಾಡಿ ತನ್ನ ಸಂಸಾರದೊಂದಿಗೆ ಸುಖವಾದ ಹೆಜ್ಜೆ ಹಾಕುತ್ತಾಳೆ. ಈ ಕತೆಯಲ್ಲಿ ಕತೆಗಾರ್ತಿ ಸಾಂಪ್ರದಾಯಿಕ ವಿವಾಹ ಕ್ರಮಗಳನ್ನೆಲ್ಲ ಮೀರಿ ನಡೆಯುವ ಜೊತೆಗೆ ರಾಜು ಹೆಣ್ಣಿನ ಭವಿಷ್ಯವನ್ನು ಅರ್ಥ ಮಾಡಿಕೊಂಡು ತನ್ನ ಆಸೆ ಆಕಾಂಕ್ಷೆಯನ್ನು ಬಿಟ್ಟು ತಾರಳ ಬದುಕನ್ನು ಸುಖವಾಗಿಡಲು ಪ್ರಯತ್ನಿಸುತ್ತಾನೆ. ಹೀಗಾಗಿ ರಾಜು ಸ್ಥಳೀಯ ಪಾತ್ರವಾಗಿ ಕಾಣುತ್ತಾನೆ.

ಮೊದಲ ತಲೆಮಾರಿನ ಕತೆಗಳ ಕಥನ ಪರಂಪರೆಯನ್ನು ನಿರ್ಮಿಸಿತ್ತಲ್ಲದೆ ನಮ್ಮ ಬದುಕಿನ ಪರಂಪರೆಯ ಒಲವು ಗೆಲವುಗಳನ್ನು ಗ್ರಹಿಸುವ ಮೂಲಕ ಅಭಿವ್ಯಕ್ತಿಸಿತು. ಕತೆಗಾರರು ತಮ್ಮ ಕತೆಗಳಲ್ಲಿ ಸ್ಥಳೀಯ ಸತ್ವವನ್ನು ಹೊಂದಿರುವ ಮತ್ತು ಆಧುನಿಕ ಪ್ರಜ್ಞೆಯನ್ನು ಒಳಗೊಂಡಿರುವ ಪಾತ್ರಗಳನ್ನು ನಿರೂಪಿಸುತ್ತಾರೆ. ಈ ಪಾತ್ರಗಳು ಸ್ಥಳೀಯ ಬದುಕಿನ ಸ್ವರೂಪವು ವಸಾಹತುಶಾಹಿಯೊಂದಿಗಿನ ಸಂಘರ್ಷ, ಸಂಕರಗೊಳ್ಳುವಿಕೆಯ ತಾತ್ವಿಕತೆಯನ್ನು ಆಶಯವಾಗಿರಿಸಿಕೊಂಡಿವೆ. ಸ್ಥಳೀಯ ಸತ್ವವಿರುವ ಪಾತ್ರಗಳು ಕತೆಯಲ್ಲಿ ಸ್ಥಳೀಯತೆಯನ್ನು ಗುಣಾತ್ಮಕ ನಿಲುವಿನಲ್ಲಿ ಮಂಡಿಸುವ ಜೊತೆಗೆ ವಸಾಹತುಶಾಹಿಯ ಪ್ರಭಾವಕ್ಕೆ ಒಳಗಾದರೂ ತನ್ನ ತನದ ಅಸ್ಮಿತೆಯನ್ನು ಉಳಿಸಿಕೊಂಡು ಸ್ಥಳೀಯ ಪಾತ್ರವಾಗಿಯೇ ಉಳಿಯುತ್ತವೆ. ಕೆಲವು ಕತೆಗಾರರು ತಮ್ಮ ಕಾಲದ ಸಾಂಸ್ಕೃತಿಕ ಸಂಘರ್ಷವನ್ನು, ಸಂಕರತೆಯನ್ನು ನಿರೂಪಿಸುವ ನೆಲೆಯಲ್ಲಿ ಸ್ಥಳೀಯ ಪಾತ್ರವು ಕತೆಯ ಅಂತ್ಯದಲ್ಲಿ ಆಧುನಿಕ ಮಾದರಿಯ ಪಾತ್ರವಾಗಿ ಅಭಿವ್ಯಕ್ತಗೊಳ್ಳುತ್ತದೆ. ಮೊದಲ ತಲೆಮಾರಿನ ಕತೆಗಳಲ್ಲಿನ ಪಾತ್ರ ಚಿತ್ರಣಗಳು ಸ್ಥಳೀಯ ಬದುಕಿನ ಸಾಂಸ್ಕೃತಿಕ ಒತ್ತಡಗಳನ್ನು ಸ್ಥಳೀಯವಾಗಿ ಉಳಿಸಿಕೊಳ್ಳುವ ಕಡೆಗೆ ತುಡಿಯುತ್ತದೆ. ವಸಾಹತುಶಾಹಿಯ ರಾಜಕೀಯ ಮತ್ತು ಸಾಂಸ್ಕೃತಿಕ ನಿರೂಪಣೆಗಳು ಸ್ಥಳೀಯ ಪರಿಸರದೊಳಗೆ ಜೀವ ಪಡೆಯುವುದನ್ನು ಗುರುತಿಸಬಹುದು.

# ಉಪಸಂಹಾರ

ಕನ್ನಡದ ಸಣ್ಣ ಕತೆಗಳಿಗೆ ಸುದೀರ್ಘವಾದ ಪರಂಪರೆಯಿದೆ. ಕತೆಗಳ ರಚನೆಗೆ ಬಹುಮುಖಿಯಾದ ಭೂಮಿಕೆ ಹುಟ್ಟಿಕೊಂಡಿದ್ದು ವಸಾಹತುಶಾಹಿ ಸಂದರ್ಭದಲ್ಲಿ, ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳು ಮೊದಲ ತಲೆಮಾರಿನ ಕತೆಗಾರರಿಗೆ ವಿಭಿನ್ನವಾದ ದೃಷ್ಟಿಕೋನವನ್ನು ನೀಡತ್ತಲ್ಲದೆ, ಸ್ಥಳೀಯ ಸತ್ವವನ್ನು ಕಥಾನವಾಗಿಸುವಂತೆ ಮಾಡಿತು. ವಸಾಹತುಶಾಹಿ ಪ್ರಭುತ್ವದ ಧೋರಣೆಯಿಂದ ಅಸ್ಮಿತೆಯನ್ನು ಕಳೆದುಕೊಳ್ಳುತ್ತಿರುವ ನಮ್ಮ ನೆಲದ ನಂಬಿಕೆ, ಆಚಾರ, ಭಾಷೆ, ಪರಂಪರೆ ಹಾಗೂ ಜೀವನ ಮೌಲ್ಯವನ್ನು ಸ್ಥಳೀಯತೆಯಾಗಿ ದುಡಿಸಿಕೊಂಡು ಕತೆಯಾಗಿಸುವ ಮೂಲಕ ಕಥಾ ಸಂವಿಧಾನವನ್ನು ರೂಪಿಸಿದ್ದಾರೆ.

ಪಂಜೆ, ಮಾಸ್ತಿ, ಕೆರೂರು ವಾಸುದೇವಾಚಾರ್ಯ, ಎಂ.ಎನ್. ಕಾಮತ್, ಬಾಗಲೋಡಿ ದೇವರಾಯ... ಇತ್ಯಾದಿ ಕತೆಗಾರರು ಆಧುನಿಕ ಕಥಾಸಾಹಿತ್ಯಕ್ಕೆ ಭಾಷಾ ಅಭಿವ್ಯಕ್ತಿಯನ್ನು, ರಚನ ಮಾದರಿಯನ್ನು ರೂಪಿಸುವ ಜೊತೆಗೆ ಆ ಕಾಲಮಾನ ಸಾಂಸ್ಕೃತಿಕ ಸಂಘರ್ಷ ಹಾಗೂ ಸಂಕರದ ತಾತ್ವಿಕತೆಯನ್ನು ಸಾಂದ್ರವಾಗಿ ಕತೆಗಳ ನೆಲೆಯಲ್ಲಿ ಅನುಸಂಧಾನ ಮಾಡಿರುವುದು ವಿಶೇಷವಾಗಿದೆ.

'ಸ್ಥಳೀಯತೆ' ಎಂಬ ಪರಿಕಲ್ಪನೆಯನ್ನು ವಿಭಿನ್ನ ಆಯಾಮದಲ್ಲಿ ಚರ್ಚೆ ಒಳಪಡಿಸುವ ಜೊತೆ ವಸಾಹತುಶಾಹಿಯ ಧೋರಣೆಗೆ ಮುಖಾಮುಖಿಯಾಗಿ ಗುಣಾತ್ಮಕ ನೆಲೆಯಲ್ಲಿ ಪ್ರಾದೇಶಿಕವಾಗಿ ನೆಲದ ಸತ್ವವನ್ನು, ಜೀವ ಮೀಮಾಂಸೆಯನ್ನು ಶೋಧಿಸುವ ಕತೆಗಳು ಅಧ್ಯಯನಕ್ಕೆ ಜೀವಂತಿಕೆಗಳನ್ನು ನೀಡಿವೆ.

ಸ್ಥಳೀಯತೆಯ ಪರಿಕಲ್ಪನೆಯು ಪ್ರತಿನಿಧಿಕ ಕತೆಗಾರರ ಕತೆಗಳಲ್ಲಿ ಸಾಮ್ಯತೆ ಹಾಗೂ ವೈಶಿಷ್ಟ್ಯ ರೂಪದ ಅಭಿವ್ಯಕ್ತಿಯಲ್ಲಿ ಗುರುತಿಸಬಹುದು. ಕತೆಗಳನ್ನು ಭೌಗೋಳಿಕವಾಗಿ

ದಕ್ಷಿಣ ಕನ್ನಡ, ಮೈಸೂರು, ಮುಂಬೈ ಕರ್ನಾಟಕ ಹಾಗೂ ಕಲ್ಯಾಣ ಕರ್ನಾಟಕಗಳೆಂದು ವಿಭಾಗಿಸಿ ಅಧ್ಯಯನಕ್ಕೆ ಒಳಪಡಿಸುವಾಗ ಸ್ಥಳೀಯತೆಯ ಸ್ವರೂಪವು ಕತೆಯ ಸತ್ವವಾಗಿ ನಿರೂಪಿತಗೊಂಡಿದ್ದು ಕಾಣುತ್ತದೆ. ನಾಲ್ಕು ಭಿನ್ನ ಭೌಗೋಳಿಕ ಪರಿಸರವು ಭಿನ್ನವಾದ ಭಾಷೆ, ಆಹಾರ, ಉಡುಪು ಸಾಂಸ್ಕೃತಿಕ ಆಚಾರ ವಿಚಾರಗಳನ್ನು ಹೊಂದಿದೆಯಲ್ಲದೆ ರಾಜಕೀಯವಾಗಿಯೂ ವಿವಿಧ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಈ ಎಲ್ಲಾ ಪ್ರದೇಶಗಳು ವಸಾಹತುಶಾಹಿಯ ಆಳ್ವಿಕೆಗೆ ಪ್ರತ್ಯೇಕವಾಗಿ ಪರೋಕ್ಷವಾಗಿ ಒಳಪಟ್ಟು ಅನೇಕ ಪಲ್ಲಟಗಳಿಗೆ ಕನ್ನಡ ಪರಿಸರವು ತೆರೆದುಕೊಂಡಿತು. ವಸಾಹತು ಶಾಹಿಯ ಧೋರಣೆಯ ಪ್ರಭಾವವನ್ನು ನಮ್ಮ ನೆಲದ ಮೂಲ ಸತ್ವವನ್ನು ನಾಶಮಾಡಿದ ಕಾಲಮಾನದಲ್ಲಿ ರಚನೆಯಾದ ಕತೆಗಳು ಸ್ಥಳೀಯತೆಯನ್ನೇ ಕೇಂದ್ರವಾಗಿಸಿಕೊಂಡು ವಸಾಹತು ಪ್ರಜ್ಞೆಯನ್ನು ಅನುಸಂಧಾನ ಮಾಡುತ್ತವೆ.

ಮುಖ್ಯವಾಗಿ ನಂಬಿಕೆ, ಆಚಾರ, ಪರಂಪರೆಯನ್ನು ಗುಣಾತ್ಮಕವಾಗಿ ಅಭಿವ್ಯಕ್ತಿಸುವ ನೆಲೆ, ಮಾನವ ಸಂಬಂಧವನ್ನು ಈ ನೆಲದ ಜೀವನ ಸತ್ವದಲ್ಲಿ ಕೇಂದ್ರೀಕರಿಸುವ ನೆಲೆ, ವಸಾಹತುಶಾಹಿಯೊಂದಿಗಿನ ಸಂಕರತೆಯ ನೆಲೆ, ಸ್ತ್ರೀ ಗುಣಾತ್ಮಕ ನೆಲೆ ಹಾಗೂ ವೈಚಾರಿಕ ನೆಲೆಯ ಮೂಲಕ ಸ್ಥಳೀಯತೆಯ ಸ್ವರೂಪವು ಅಭಿವ್ಯಕ್ತಗೊಂಡಿದೆ.

ದಕ್ಷಿಣ ಕನ್ನಡದ ಭಾಗದ ಕತೆಗಾರರು ಮುಖ್ಯವಾಗಿ ಸ್ಥಳೀಯತೆಯನ್ನು ವಸಾಹತುಶಾಹಿಯ ಧೋರಣೆಯ ಪ್ರತಿಯಾಗಿ ನಿರೂಪಿಸಲು ಬಳಸುತ್ತಾರೆ. ಆ ನೆಲದ ಆಚಾರ, ನಂಬಿಕೆ, ಆಹಾರ, ಜೀವನ ಮೌಲ್ಯಗಳು ಹಾಗೂ ಸಾಂಸ್ಕೃತಿಕ ಪರಂಪರೆಯೇ ಗುಣಾತ್ಮಕವಾಗಿ ವಸಾಹತುಶಾಹಿಯ ಉಪ ಉತ್ಪನ್ನದಂತೆ ಸ್ಥಳೀಯತೆ ಅನುಸಂಧಾನವಾಗುತ್ತದೆ. ಮೈಸೂರು ಭಾಗದ ಕತೆಗಳು ಈ ಭಾಗದ ಪರಂಪರೆಯನ್ನು ಸ್ಥಳೀಯತೆಯ ರೂಪವಾಗಿ ನಿರೂಪಿಸುತ್ತಾರೆ ಹಾಗೂ ಪರಂಪರೆಯ ಗೆಲುವೇ ಇಲ್ಲಿ ಪ್ರಧಾನವಾಗುತ್ತದೆ. ವಸಾಹತುಶಾಹಿಯ ಧೋರಣೆಯು ರಾಜರ ಮೂಲಕ ಜನರಿಗೆ ಪ್ರವೇಶವಾಗಿದ್ದರಿಂದ ಭಾರತೀಯ ಹಾಗೂ ಆಂಗ್ಲ ಪರಂಪರೆಯ ಸಂಕರಿತ ತಾತ್ವಿಕತೆಯೇ ಹೆಚ್ಚು ಸ್ಥಳಿಯ ಅಭಿವ್ಯಕ್ತಿಯಾಗಿ ಕಂಡರೂ ನಮ್ಮ ಪರಂಪರೆಯನ್ನು ಗುಣಾತ್ಮವೆಂದು ವಸಾಹತುಶಾಹಿಯ ಬಾಯಿಯಲ್ಲಿ ಹೇಳಿಸುವಂತಹ ತಂತ್ರಗಳು ಸ್ಥಳೀಯತೆಯ ವ್ಯಾಪ್ತಿಯನ್ನು ಗಟ್ಟಿಯಾಗಿಸಿವೆ. ಇಲ್ಲಿ ಬಹುತೇಕ ಕತೆಗಳು ಗಂಡ ಹೆಂಡತಿಯ ಸಂಬಂಧವನ್ನು ಬೆಸೆಯುವ ಮೂಲಕ ಭಾರತೀಯ ಜೀವನ ಮೀಮಾಂಸೆಯನ್ನು ಕಾಪಾಡಿಕೊಳ್ಳುತ್ತದೆ. ಮುಂಬೈ ಕರ್ನಾಟಕದ ಭಾಗದ ಕತೆಗಾರರ ಕತೆಗಳು ಸುಧಾರಣಾ ಚಳುವಳಿಯ ಉಪ ಉತ್ಪನ್ನದಂತೆ

ಕಂಡರೂ ಸ್ಥಳೀಯತೆಯನ್ನು ಸ್ತ್ರೀಯರ ಸಹಜ ಅಭಿವ್ಯಕ್ತಿಯ ಭಾಗವಾಗಿ ಅನುಸಂಧಾನವಾಗುತ್ತದೆ. ಸ್ತ್ರೀಯರ ಬದುಕಿನ ದಾರಿಯಲ್ಲಿ ನಿರೂಪಿತಗೊಂಡಿದ್ದ ಮೌಢ್ಯ ನಂಬಿಕೆ, ಆಚಾರ ಕಟ್ಟುಪಾಡುಗಳನ್ನು ಮೀರುವ ಮೂಲಕ ಸ್ತ್ರೀ ಅಸ್ಮಿತೆಯನ್ನು ಸ್ಥಳೀಯತೆಯ ನೆಲೆಯಲ್ಲಿ ತಾತ್ವೀಕರಿಸುತ್ತದೆ. ಬಹುಪಾಲು ಕತೆಗಳು ಸ್ತ್ರೀ ಸಮಸ್ಯೆಯನ್ನು ಅನುಸಂಧಾನಕ್ಕೆ ಒಳಪಡಿಸುವುದನ್ನು ಗಮನಿಸಬಹುದು. ಕಲ್ಯಾಣ ಕರ್ನಾಟಕದ ಕತೆಗಾರರ ಕತೆಗಳು ಮುಖ್ಯವಾಗಿ ಯಜಮಾನಿಕೆಯ ಪ್ರಭುತ್ವವನ್ನು ವಿಮರ್ಶೆ ಮಾಡುವ ಜೊತೆಗೆ ದುಡಿಯುವ ಸಮುದಾಯದ ಜೀವನ ಮೀಮಾಂಸೆಯನ್ನು ಆಧುನೀಕರಣದ ಪ್ರತಿಯಾಗಿ ಮಂಡಿಸುವ ಜೊತೆಗೆ ಆಹಾರ, ವೃತ್ತಿ, ಬಡತನ, ಹಸಿವು ಹೆಣ್ಣು ಗಂಡಿನ ಸಂಬಂಧ, ಕ್ರೌರ್ಯ, ಹಿಂಸೆ ಜೀವಪರ ನಿಲುವುಗಳನ್ನು ಸ್ಥಳೀಯ ಮುಖವಾಡವಾಗಿ ನಿರೂಪಿಸುತ್ತವೆ.

ನಾಲ್ಕು ಪ್ರಾದೇಶಿಕ ಪರಿಸರದ ಮೊದಲ ತಲೆಮಾರಿನ ಕತೆಗಳು ಸ್ಥಳೀಯತೆಯನ್ನು ಕೇಂದ್ರವಾಗಿ ಗ್ರಹಿಸುವ ಜೊತೆಗೆ ವಸಾಹತುಶಾಹಿಯನ್ನು ಪ್ರತಿರೋಧಿಸುವ ಭಾಗವಾಗಿ, ಸ್ಥಳೀಯ ಜನರ ಜೀವನ ವಿನ್ಯಾಸದ ಸತ್ವವಾಗಿ ವ್ಯಾಪಿಸಿಕೊಂಡಿರುವ ಸ್ಥಳೀಯತೆಯ ಸ್ವರೂಪವು ಪ್ರದೇಶ, ಭಾಷೆ, ಆಹಾರ, ನಂಬಿಕೆ, ವೃತ್ತಿ, ಆಚಾರ ಹಾಗೂ ಸಾಂಸ್ಕೃತಿಕ ಪರಂಪರೆಯ ಪರಿಸರವನ್ನು ಮರುರೂಪಿಸುವಂತೆ ಮಾಡಿದೆ ಹಾಗೂ ಸ್ಥಳೀಯತೆಯನ್ನು ಮಂಡಿಸಲು ಪ್ರಧಾನ ಅಸ್ತ್ರವಾಗಿ ನಮ್ಮ ನೆಲದ ಸತ್ವವು ಬಳಕೆಯಾಗಿದೆ.

**********

# ಫಲಿತಗಳು

೧) ವಸಾಹತುಶಾಹಿಯ ಧೋರಣೆಯನ್ನು ವಿರೋಧಿಸಲು ಬಳಕೆಯಾದ ನಮ್ಮ ನೆಲದ ಕಾನೂನು ಧರ್ಮ, ನಂಬಿಕೆಗಳು ಕತೆಗಳ ಪ್ರಧಾನ ಸತ್ವವಾಗಿ ಕಂಡುಬರುತ್ತದೆ.

೨) ನಮ್ಮ ನೆಲದ ಪರಂಪರೆಯನ್ನು ವಸಾಹತುಶಾಹಿಯ ಮುಖಾಮುಖಿಯಾಗಿಸಿ ಗುಣಾತ್ಮಕ ನೆಲೆಯಿಂದ ಮಂಡಿಸುವ ಜೊತೆಗೆ ವಸಾಹತುಶಾಹಿಯ ಧೋರಣೆಗಳನ್ನು ಮೀರುವ, ಹೊಂದಿಕೊಳ್ಳುವ ಮತ್ತು ತನ್ನಾದಾಗಿಸಿಕೊಳ್ಳುವ ತಾತ್ವಿಕತೆಯನ್ನು ಸ್ಥಳೀಯತೆಯ ಧಾರೆಯಲ್ಲಿ ಮೊದಲ ತಲೆಮಾರಿನ ಕತೆಗಳು ಮಂಡಿಸುತ್ತವೆ.

೩) ಸ್ಥಳೀಯ ನೆಲದ ಜೀವನ ಮೀಮಾಂಸೆಯ ಮಿತಿಯಲ್ಲಿಯೇ ಗಂಡು-ಹೆಣ್ಣಿನ ಸಂಬಂಧವನ್ನು ಬೆಸೆಯುವ ಮೂಲಕ ಪಾಶ್ಚಾತ್ಯ ಪರಿಸರಕ್ಕೆ ಕುಟುಂಬವನ್ನು ಒಡ್ಡಿಕೊಳ್ಳುವ ಆಶಯವನ್ನು ಕತೆಗಳು ಹೊಂದಿವೆ.

೪) ವಸಾಹತುಶಾಹಿಯ ಉತ್ತಮ ಧೋರಣೆಗಳನ್ನು ನಮ್ಮ ಪರಂಪರೆಯೊಂದಿಗೆ ಸಮನ್ವಯಗೊಳಿಸುವ ಮೂಲಕ ಮೂಢ ಆಚರಣೆಯನ್ನು ವೈಚಾರಿಕ ನಿಲುವಿಗೆ ಒಡ್ಡುವ ಜೊತೆಗೆ ನಮ್ಮ ಪರಂಪರೆಯನ್ನು ಮರು ಸಂಘಟಿಸುವ ತಾತ್ವಿಕತೆಯು ಕತೆಯ ಮೂಲಕ ವ್ಯಕ್ತವಾಗುತ್ತದೆ.

೫) ನಂಬಿಕೆಯ ಒಟ್ಟು ಸಂಕಲನವೇ ಇಲ್ಲಿ ಸ್ಥಳೀಯತೆಯಾಗಿ ಗೋಚರವಾಗುತ್ತದೆ.

೬) ನಮ್ಮ ನೆಲದ ಪರಂಪರೆಯನ್ನು ಪ್ರಧಾನವಾದ ಜೀವನ ಮೌಲ್ಯವೆಂದು ಕಟ್ಟುವ ನಿಲುವನ್ನು ಬಹುತೇಕ ಕತೆಗಳು ಹೊಂದಿವೆ.

೭) ವಸಾಹತುಶಾಹಿಯ ಮೂಲಕ ನಮ್ಮ ನಂಬಿಕೆ, ಆಚಾರ, ಕಲೆ-ಸಾಹಿತ್ಯವನ್ನು

ಶ್ರೇಷ್ಠವೆಂದು ಹೇಳಿಸುವ ಮೂಲಕ ಕತೆಗಾರರು ಸ್ಥಳೀಯತೆಯನ್ನು ಸತ್ವಪೂರ್ಣವಾಗಿಸಲು ಪ್ರಯತ್ನಿಸುತ್ತಾರೆ.

೮) ಸ್ತ್ರೀ ಅಸ್ಮಿತೆಯನ್ನು ನಮ್ಮ ಪರಂಪರೆಯೊಳಗೆ ನಿರೂಪಿಸಿರುವುದನ್ನು ಗುರುತಿಸಬಹುದು.

೯) ಧಾರ್ಮಿಕ ಹಾಗೂ ಸಾಮಾಜಿಕ ಸುಧಾರಣೆಗೆ ಬಹುಪಾಲು ಪ್ರಭಾವಗೊಂಡ ಮುಂಬೈ ಕರ್ನಾಟಕದ ಕತೆಗಾರರು ಮೌಢ್ಯ ವ್ಯವಸ್ಥೆಯನ್ನು ದಾಟುವ ಮತ್ತು ಸ್ತ್ರೀ ಬದುಕಿನ ವಿನ್ಯಾಸವನ್ನು ಪರಿಚಯಿಸುವ ಕಾರ್ಯವನ್ನು ಮಾಡುತ್ತಾರೆ.

೧೦) ವಸಾಹುತುಶಾಹಿಯ ಉಪಉತ್ಪನ್ನದಂತೆ ಸ್ಥಳೀಯತೆ ಕತೆಗಳಲ್ಲಿ ವ್ಯಕ್ತವಾಗಿದೆ.

೧೧) ಪ್ರಧಾನ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದ ಭಾಷೆ, ವೃತ್ತಿ, ಆಚಾರ, ಪರಂಪರೆಗಳು ಬದಲಾದಂತೆ ಕಂಡರೂ ತನ್ನ ಅಂತರಂಗದಲ್ಲಿ ಮೂಲಸಂಸ್ಕೃತಿಯ ಸತ್ವವನ್ನು ಹಾಗೆ ಉಳಿಸಿಕೊಂಡಿರುತ್ತವೆ.

೧೨) ವಸಾಹತುಶಾಹಿಯ ಧೋರಣೆಗಳಿಂದ ಛಿದ್ರವಾದ ಕೌಟುಂಬಿಕ ಸಂಬಂಧಗಳನ್ನು ನಮ್ಮ ನೆಲದ ಜೀವನ ಪ್ರೀತಿ, ನಂಬಿಕೆ, ರಸಿಕತೆ, ಹಾಗೂ ಮಾನವೀಯ ನೆಲೆಗಳಿಂದ ಕೂಡಿಸುವ ತಾತ್ವಿಕತೆಯನ್ನು ಈ ಕಾಲದ ಕತೆಗಳು ಹೊಂದಿವೆ.

೧೩) ಮೊದಲ ತಲೆಮಾರಿನ ಕತೆಗಳಲ್ಲಿ ಸ್ಥಳೀಯ ಪಾತ್ರಗಳು ಪರಂಪರಾಗತವಾದ ಜೀವನ ವಿಧಾನ, ಮೌಲ್ಯ, ಆಚಾರಗಳನ್ನು ಗುಣಾತ್ಮಕವಾಗಿ ಮಂಡಿಸುತ್ತವೆ.

೧೪) ಆಧುನಿಕ ಮಾದರಿಯ ಪಾತ್ರಗಳೆಲ್ಲವು ಸ್ಥಳೀಯ ಸಾಂಸ್ಕೃತಿಕ ಪ್ರಜ್ಞೆಯಿಂದ ಬಿಡಿಸಿಕೊಳ್ಳುವುದರ ಕಡೆಗೆ ಮುಖಮಾಡುತ್ತವೆ.

೧೫) ಆಧುನಿಕ ಪಾತ್ರಗಳು ಹಣದ ಮೌಲ್ಯವನ್ನು ಮತ್ತು ಭೌತ ಜಗತ್ತನ್ನು ಕೇಂದ್ರೀಕರಿಸಿಕೊಂಡು ದುಡಿಸಿಕೊಳ್ಳುವುದರ ಆಶಯವನ್ನು ಹೊಂದಿವೆ.

೧೬) ಸ್ಥಳೀಯ ಪಾತ್ರಗಳು ವಸಾಹತುಶಾಹಿಯ ಪ್ರಭಾವ ಮತ್ತು ಆರ್ಥಿಕ, ರಾಜಕೀಯ ಒತ್ತಡಕ್ಕೆ ಒಳಗಾಗಿ ಆಧುನಿಕ ಸ್ವರೂಪವಾಗಿ ರೂಪುಗೊಂಡಿವೆ.

೧೭) ಸ್ಥಳೀಯ ಸಂಸ್ಕೃತಿ ಮತ್ತು ವಸಾಹತುಶಾಹಿ ಸಂಸ್ಕೃತಿಯ ನಡುವಿನ ಸಂಘರ್ಷ, ಸಂಕರವನ್ನು ಕತೆಯ ಪಾತ್ರಗಳು ಮುಖಾಮುಖಿಯಾಗಿಸಿವೆ.

೧೮) ಸ್ಥಳೀಯ ಪಾತ್ರವು ತನ್ನ ಅಸ್ಮಿತೆಯನ್ನು ಉಳಿಸಿಕೊಂಡರೂ ಆಧುನಿಕ ಪ್ರಜ್ಞೆಯ ಪಾತ್ರದೊಂದಿಗೆ ಮುಖಾಮುಖಿಯಾಗುವಾಗ ತನ್ನ ಅಸ್ಮಿತೆಯನ್ನು ಕಳೆದುಕೊಂಡು ಇಳಿಮುಖವಾಗುತ್ತದೆ.

೧೯) ಪುರುಷಲೋಕಗ್ರಹಿಕೆಯಲ್ಲಿ ಸ್ತ್ರೀ ನಿಲುವುಗಳನ್ನು ಗುಣಾತ್ಮಕವಾಗಿಯೇ

ಮಂಡಿಸಲಾಗಿದೆ.

೨೦) ವಸಾಹತುಶಾಹಿಯ ಧೋರಣೆಯು ಸ್ಥಳೀಯ ಜೀವನ ವಿನ್ಯಾಸದ ಮೇಲೆ ಉಂಟುಮಾಡಿದ ಗಾಯಗಳನ್ನು ಗಂಭೀರವಾಗಿ ಅಭಿವ್ಯಕ್ತಿಸುತ್ತದೆ.

೨೧) ಮೊದಲ ತಲೆಮಾರಿನ ಬಹುತೇಕ ಕತೆಗಾರರು ಬ್ರಾಹ್ಮಣರೇ ಆಗಿರುವುದರಿಂದ ವೈದಿಕ ಸಂಸ್ಕೃತಿ, ಆಚಾರ, ನಂಬಿಕೆ ಹಾಗೂ ಅವರ ಜೀವನ ಮೌಲ್ಯಗಳೇ ಹೆಚ್ಚು ಚರ್ಚೆಗೆ ಒಳಗಾಗಿವೆ.

### ಅನುಬಂಧ – ೧

## ಪ್ರಧಾನ ಆಕರಗಳು

| | | | |
|---|---|---|---|
| ೧. | ಕೇರೂರು ವಾಸುದೇವಾಚಾರ್ಯ | ೧೮೬೬–೧೯೨೧ | ೧.ಪ್ರೇಮ ವಿಜಯ, ೧೯೫೨ |
| | | | ೨.ಬೆಳಗಿನ ದೀಪಗಳು, ೧೯೫೨ |
| | | | ೩.ತೊಳೆದ ಮುತ್ತು, ೧೯೫೨ |
| ೨. | ಪಂಜೆ ಮಂಗೇಶರಾಯ | ೧೮೭೪–೧೯೩೭ | ೧.ಪಂಜೆಯವರ ಕೃತಿಗಳು, ಸಂ.೧–೩, ೧೯೭೩ |
| ೩. | ನವರತ್ನ ರಾಮರಾವ್ | ೧೮೭೭–೧೯೬೧ | ೧.ಸಣ್ಣಕತೆಗಳು, ೧೯೫೧ |
| ೪. | ಎಂ.ಎನ್.ಕಾಮತ್ | ೧೮೮೩–೧೯೪೦ | ೧.ಅಂದಿನ ಅಪೂರು, ೧೯೪೧ |
| ೫. | ಎಸ್.ಜಿ. ಶಾಸ್ತ್ರೀ | ೧೮೯೦–೧೯೫೫ | ೧.ಇದ್ದರೂ ಇರಬಹುದು, ೧೯೯೪ |
| ೬ | ಎ.ಆರ್. ಕೃಷ್ಣಶಾಸ್ತ್ರೀ | ೧೮೯೦–೧೯೬೮ | ೧.ಶ್ರೀಪತಿಯ ಕಥೆಗಳು, ೧೯೪೮ |
| ೭ | ಮಾಸ್ತಿ ವೆಂಕಟೇಶ ಅಯ್ಯಂಗಾರ್ | ೧೮೯೧–೧೯೮೬ | ೧.ಮಾಸ್ತಿಯವರ ಸಮಗ್ರ ಕಥೆಗಳು |
| ೮. | ಹೊಯಿಸಳ (ಅರಗಂ ಲಕ್ಷ್ಮಣರಾವ್) | ೧೮೯೩–೧೯೫೬ | ೧.ಕಂಚಿನ ಕನ್ನಡ, ೧೯೪೭ |
| | | | ೨.ದಿನಾರಿ, ೧೯೪೭ |
| ೯. | ಕೊರಡ್ಕಲ್ ಶ್ರೀನಿವಾಸರಾವ್ | ೧೮೯೫–೧೯೪೮ | ೧.ನಂದಾದೀಪ, ೧೯೩೮ |
| | | | ೨.ಪ್ರೇಮವಿವಾಹ, ೧೯೫೮ |
| ೧೦. | ದ.ರಾ.ಬೇಂದ್ರೆ | ೧೮೯೬–೧೯೮೬ | ೧.ನಿರಾಭರಣ ಸುಂದರಿ, ೧೯೫೬ |
| ೧೧. | ಪರಮಾನಂದ | ೧೮೯೭–೧೯೮೩ | ೧.ಹುಚ್ಚು ಬೆಳದಿಂಗಳಿನ ಹೂಬಾಣಗಳು, |
| ೧೨. | ದೇವುಡು | ೧೮೯೭–೧೯೬೨ | ೧.ಮೂರು ಮನಸು |

| | | |
|---|---|---|
| | | ೨.ವೇದದ ಕಥೆಗಳು |
| | | ೩.ದೇಶಾಂತರದ ಕಥೆಗಳು |
| | | ೪.ಬುದ್ಧಿಯ ಕಥೆಗಳು |
| ೧೩. ಬಿ. ಪುಟ್ಟಸ್ವಾಮಯ್ಯ | ೧೮೯೭-೧೯೮೪ | ೧.ಧ್ರುವ ಸ್ವಾಮಿನಿ |
| | | ಇತಿಹಾಸದ ಪುಟಗಳಿಂದ |
| ೧೪. ನಾ. ಕಸ್ತೂರಿ | ೧೮೯೭ | ೧.ಚೆಂಗೂಲಿ ಚಲುವ |
| | | ೨.ಚಕ್ರದೃಷ್ಟಿ |
| | | ೩.ಡೊಂಕುಬಾಲ |
| ೧೫. ಆನಂದಕಂದ | ೧೯೦೦-೧೯೮೨ | ೧.ಬಡತನದ ಬಾಳು, ೧೯೩೨ |
| | | ೨.ಸಂಸಾರದ ಚಿತ್ರ, ೧೯೩೨ |
| | | ೩.ನಮ್ಮ ಬದುಕು, ೧೯೩೯ |
| | | ೪.ಜನಪದ ಜೀವನ, ೧೯೫೫ |
| | | ೫.ಮಾತನಾಡುವ ಕಲ್ಲು, ೧೯೬೩ |
| | | ೬.ಕಳ್ಳರ ಗುರು |
| ೧೬. ಶಿವರಾಮ ಕಾರಂತ | ೧೯೦೨-೧೯೯೬ | ೧.ತೆರೆಯ ಮರೆಯಲ್ಲಿ, ೧೯೬೬ |
| | | ೨.ಹಸಿವು, ೧೯೩೧ |
| | | ೩.ಹಾವು, ೧೯೩೧ |
| | | ೪.ಕವಿವರ್ಮ, ೧೯೩೩ |
| ೧೭. ಸೇಡಿಯಾಪು ಕೃಷ್ಣಭಟ್ಟ | ೧೯೦೨-೧೯೯೬ | ೧.ಪಳಮೆಗಳು, ೧೯೪೭ |
| ೧೮. ಮಧುರಚೆನ್ನ | ೧೯೦೩-೧೯೫೩ | ೧.ನನ್ನ ಬಾಳು ಹಾಳು |
| ೧೯. ಗೋರೂರು ರಾಮಸ್ವಾಮಿ ಅಯ್ಯಂಗಾರ್ | ೧೯೦೪ | ೧.ವೈಯಾರಿ |
| | | ೨.ಶಿವರಾತ್ರಿ |
| | | ೩.ಉಸುಬು |
| | | ೪.ಗೋಪುರದ ಬಾಗಿಲು |
| | | ೫.ಕನ್ಯಾಕುಮಾರಿ ಮತ್ತು ಇತರೆ ಕಥೆಗಳು |
| ೨೦. ಜಿ.ಬಿ. ಜೋಶಿ | ೧೯೦೪ | ೧.ಅಪ್ರಕಟಿತ ಕಥೆಗಳು |

| | | |
|---|---|---|
| ೨೧. ಕಡೆಂಗೋಡ್ಲು ಶಂಕರ ಭಟ್ಟ | ೧೯೦೪-೧೯೬೮ | ೧.ಗಾಜಿನ ಬಳೆ, ೧೯೪೭ |
| | | ೨.ಹಿಂದಿನ ಕಥೆಗಳು, ೧೯೪೯ |
| | | ೩.ದುಡಿಯುವ ಮಕ್ಕಳು, ೧೯೫೩ |
| ೨೨. ಕುವೆಂಪು | ೧೯೦೪-೧೯೯೪ | ೧.ಸನ್ಯಾಸಿ ಮತ್ತು ಇತರ ಕಥೆಗಳು, ೧೯೩೬ |
| | | ೨.ದೇವರು ಮತ್ತು ಇತರ ಕಥೆಗಳು, ೧೯೪೦ |
| ೨೩. ಕ್ಷೀರಸಾಗರ | ೧೯೦೬-೧೯೭೯ | ೧.ವೀಳ್ಯ, ೧೯೪೬ |
| ೨೪. ರಂ.ಶ್ರೀ. ಮುಗಳಿ | ೧೯೦೬-೧೯೯೩ | ೧.ಕನಸಿನ ಕೆಳದಿ |
| ೨೫. ಕೆ. ಗೋಪಾಲಕೃಷ್ಣರಾವ್ | ೧೯೦೬-೧೯೬೮ | ೧.ಉಡುಗೊರೆ |
| | | ೨.ಬಂಗಾರದ ಡಾಬು |
| | | ೩.ನಟಿ |
| ೨೬. ಆನಂದ | ೧೯೦೬-೧೯೬೩ | ೧.ಕೆಲವು ಕಥೆಗಳು |
| | | ೨.ಭವತಿ ಭಿಕ್ಷಾಂದೇಹಿ |
| | | ೩.ಮಾಟಗಾತಿ |
| | | ೪.ಚಂದ್ರಗ್ರಹಣ |
| | | ೫.ಸ್ವಪ್ನಜೀವಿ |
| | | ೬.ಜೋಯಿಸರ ಚಾಡಿ |
| | | ೭.ಬಿಲ್ವ ಸಂಕುಲ |
| ೨೭. ಮೇವುಂಡಿ ಮಲ್ಲಾರಿ | ೧೯೦೭-೧೯೭೫ | ೧.ಬೆಳಕಿನ ಕತ್ತಲೆ, ೧೯೪೨ |
| ೨೮. ಕೃಷ್ಣಕುಮಾರ, ಕಲ್ಲೂರು | ೧೯೦೯-೧೯೮೨ | ೧.ಮಂಗನ ಮೆರವಣಿಗೆ, ೧೯೩೦ |
| | | ೨.ಬಿಸಿಲುಗುದುರೆ, ೧೯೩೧ |
| | | ೩.ಜೀವನ, ೧೯೩೪ |
| ೨೯. ಶ್ಯಾಮಲಾದೇವಿ ಬೆಳಗಾಂವ್ಕರ್ | ೧೯೧೦ | ೧.ಹೂ ಬಿಸಿಲು, ೧೯೩೬ |
| | | ೨.ಹೊಂಬಿಸಿಲು, ೧೯೪೨ |
| ೩೦. ಶ್ರೀಸ್ವಾಮಿ (ರಂಗಸ್ವಾಮಿ ಅಯ್ಯಂಗಾರ್) | ೧೯೧೧-೧೯೮೦ | ೧.ಪುಷ್ಪಮಾಲೆ, ೧೯೩೬ |
| | | ೨.ಮೋಡಗಳು, ೧೯೪೨ |
| ೩೧. ಭಾರತೀಪ್ರಿಯ | ೧೯೧೧-೧೯೮೧ | ೧.ರುದ್ರವೀಣೆ, ೧೯೪೭ |

| | | |
|---|---|---|
| ೩೨. ಜಯಲಕ್ಷ್ಮೀ ಶ್ರೀನಿವಾಸನ್ | ೧೯೧೧-೨೦೦೧ | ೧.ದೀಪಾವಳಿ, ೧೯೪೦ |
| | | ೨.ಪ್ರತಿಫಲ, ೧೯೪೫ |
| ೩೩. ವಿ.ಜಿ. ಶ್ಯಾನಭಾಗ | ೧೯೧೨-೧೯೮೦ | ೧.ಕೆಲವು ಚಿತ್ರಗಳು, ೧೯೪೨ |
| ೩೪. ಕೊಡಗಿನ ಗೌರಮ್ಮ | ೧೯೧೨-೧೯೩೯ | ೧.ಕಂಬನಿ, ೧೯೩೯ |
| | | ೨.ಚಿಗುರು, ೧೯೪೨ |
| ೩೫. ಸರಸ್ವತಿ ಬಾಯಿ ರಾಜವಾಡೆ | ೧೯೧೩ | ೧.ಆಹುತಿ |
| | | ೨.ಕದಂಬ |
| ೩೬. ಎಚ್.ಎಲ್. ನಾಗೇಗೌಡ | ೧೯೧೫ | ೧.ಕಂಡು ಕೇಳಿದ ಕಥೆಗಳು |
| | | ೨.ಖೈದಿಗಳ ಕಥೆಗಳು |
| ೩೭. ಭಾರತೀಸುತ | ೧೯೧೫ | ೧.ಚಿಂಬ ಹಿಡಿದ ಮೀನು |
| | | ೨.ಕರೆಗೆ ಓಗೊಟ್ಟ ಕಾರ್ಡೀಲಿಯ |
| | | ೩.ಬೆಂಕಿಯಲ್ಲಿ ಬೆಂದವಳು |
| | | ೪.ಪ್ರೇಮ ಪಂಚಮಿ |
| ೩೮. ಸರಸ್ವತಿದೇವಿ ಗೌಡರ | ೧೯೫೮ | ೧.ಅಲ್ಪವಿರಾಮ, ೧೯೫೮ |
| | | ೨.ಪುಣ್ಯಸ್ಮೃತಿ, ೧೯೭೨ |
| ೩೯. ವಾಣಿ | ೧೯೪೪ | ೧.ಕಸ್ತೂರಿ, ೧೯೪೪ |
| ೪೦. ಕಾತ್ಯಾಯಿನಿ | ೧೯೨೩ | ೧.ಮಾಲಾ ಮತ್ತು ಇತರ ಕಥೆಗಳು, |
| | ೧೯೫೪ | ೨.ಗೌರಿ ಮತ್ತು ಇತರ ಕಥೆಗಳು, ೧೯೭೯ |
| ೪೧. ಬಾಗಲೋಡಿ ದೇವರಾಯ | ೧೯೨೭-೧೯೮೯ | ೧.ಹುಚ್ಚು ಮುನಸೀಫ |
| | | ೨.ಆರಾಧನ |
| | | ೩.ರುದ್ರಪ್ಪನ ರೌದ್ರ |
| ೪೨. ತ್ರಿವೇಣಿ | ೧೯೨೮-೧೯೬೩ | ೧.ಹೆಂಡತಿಯ ಹೆಸರು, ೧೯೫೮ |
| | | ೨.ಎರಡು ಮನಸ್ಸು, ೧೯೬೦ |
| | | ೩.ಸಮಸ್ಯೆಯ ಮಗು, ೧೯೬೧ |

# ಪರಾಮರ್ಶನ ಗ್ರಂಥಗಳು


೧. ಅಮರೇಶ್ ನುಗಡೋಣಿ, ಕಥೆಹುಟ್ಟುವ ಪರಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೧೪

೨. ಅರವಿಂದ ಮಾಲಗಿತ್ತಿ,ಪುರಾಣ ಜನಪದ ಮತ್ತು ದೇಶೀವಾದ, ಕನ್ನಡ ಸಾಹಿತ್ಯ ಪರಿಷತ್ತ್, ಬೆಂಗಳೂರು. ೧೯೯೯

೩. ಉಷಾ ಎಂ,ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ,ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೦೧

೪. ಕಮಲೇಶ್ವರ, ಕಥಾ ಸಂಸ್ಕೃತಿ, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೨೦೦೭

೫. ಕಲಬುರ್ಗಿ ಎಂ.ಎಂ. ಸಂಸ್ಕೃತಿ-ವಿಕೃತಿ,ಕನ್ನಡ ಮತ್ತು ಸಂಸ್ಕೃತಿ ಇಲಾಖೆ,ಬೆಂಗಳೂರು.೨೦೦೬

೬ ಕೂತಂಡ ಪಾರ್ವತಿ ಪೂವಯ್ಯ, ಕೊಡಗಿನ ಕಥೆಗಳು,ಸಪ್ನ ಪುಸ್ತಕ ಪ್ರಕಾಶನ ಬೆಂಗಳೂರು.೨೦೧೪

೭ ಕೃಷ್ಣ ಭಟ್ಟಹೆರಂಜೆ,ತುಳು ಕರ್ನಾಟಕ ಅರಸು ಮನೆತನಗಳು ,ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೦೦

೮. ಕೃಷ್ಣ ಮೂರ್ತಿಅಗ್ರಹಾರ, ಸಂಸ್ಕೃತಿ ಕಥನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು. ೨೦೦೬

೯. ಕೃಷ್ಣ ಶಾಸ್ತ್ರೀ ಎ.ಆರ್,ಭಾಷಣಗಳು ಮತ್ತು ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು. ೨೦೦೬

೧೦. ಕರೀಗೌಡ ಬೀಚನಹಳ್ಳಿ, ಕನ್ನಡ ಸಾಹಿತ್ಯ ಸಂಸ್ಕೃತಿ ಕಥನ,ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೧೭

೧೧. ಕೀರ್ತಿನಾಥ ಕುರ್ತಕೋಟಿ,ಉರಿಯನಾಲಿಗೆ,ಕನ್ನಡ ಮತ್ತು ಸಂಸ್ಕೃತಿ ಇಲಾಖೆ,ಬೆಂಗಳೂರು.೨೦೦೬

೧೨. ಕೇಶವ ಶರ್ಮ,ಸಾಹಿತ್ಯ ವಿಮರ್ಶೆ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೧೯೯೭

೧೩. ಕೇಶವ ಮಳಗಿ,ಸಂಕಥನ, ಗಾರ್ಡನ್ ವಿಲಾಸ ನಾಗರಬಾವಿ, ಬೆಂಗಳೂರು.೨೦೧೧

೧೪. ಕೇಶವಭಟ್ಟ ಎಂ,ನಾಡೋಜ ಪಂಪ,ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.೨೦೦೬

೧೫. ಗಿರಡ್ಡಿ ಗೋವಿಂದರಾಜ (ಸಂ).ಮರೆಯಬರದ ಹಳೆಯ ಕತೆಗಳು, ಪ್ರಿಸಮ್ ಬುಕ್ಸ್ ಹೌಸ್, ಬೆಂಗಳೂರು.೧೯೯೯

೧೬. ಗೋವಿಂದರಾಜು.ಸಿ.ಆರ್, ಕರ್ನಾಟಕದ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ,ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.೨೦೦೬

೧೭. ಚಿನ್ನಪ್ಪ ಗೌಡ ಕೆ (ಸಂ).ಕರಾವಳಿಯ ಪ್ರಬಂಧಗಳು,ಕನ್ನಡ ಅಧ್ಯಯನ ವಿಭಾಗ, ಮಂಗಳೂರುವಿಶ್ವವಿದ್ಯಾಲಯ.೨೦೦೬

೧೮. ಚಿನ್ನಪ್ಪ ಗೌಡ ಕೆ, (ಸಂ).ಕರಾವಳಿಯ ಕತೆಗಳು, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.೨೦೦೬

೧೯. ಚಂದ್ರಶೇಖರ ಕಂಬಾರ(ಸಂ), ಕನ್ನಡ ಶೈಲಿ ಕೈಪಿಡಿ, ಕನ್ನಡವಿಶ್ವವಿದ್ಯಾಲಯ, ಹಂಪಿ. ೧೯೯೫

೨೦. ಚಂದ್ರಶೇಖರ್ ಎಸ್, ವಸಾಹತುಕಾಲೀನ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು. ೨೦೦೬

೨೧. ಡಿ.ವಿ.ಜಿ, ಸಂಸ್ಕೃತಿ,ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೧೯೫೩

೨೨. ದೇವಿ ಜಿ.ಎನ್ (ಸಂ),ವಿಸ್ತೃತಿಯ ನಂತರ,ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು. ೨೦೧೫

೨೩. ದಂಡಪ್ಪ ಎಚ್ (ಸಂ),ಸುವರ್ಣ ಸಾಹಿತ್ಯ ವಿಮರ್ಶೆ, ಕನ್ನಡ ಮತ್ತು ಸಾಂಸ್ಕೃತಿ ಇಲಾಖೆ,ಬೆಂಗಳೂರು. ೨೦೦೬

೨೪. ಧನಂಜಯ ಕುಂಬ್ಳೆ, ಅರುಣಾಬ್ದ ಮತ್ತು ಕುಮಾರವ್ಯಾಸ ತೌಲಾನಿಕ ಅಧ್ಯಯನ,ಚಿಂತನ ಬಯಲು ಪ್ರಕಾಶನ, ದ.ಕ. ೨೦೧೨

೨೫. ಧಾರವಾಡಕರ.ರಾ.ಯ,ಹೊಸಗನ್ನಡದ ಉದಯಕಾಲ, ಕನ್ನಡ ಸಾಹಿತ್ಯ ಪರಿಷತ್. ಚಾಮರಾಜಪೇಟೆ. ೧೯೭೫

೨೬. ನಟರಾಜ ಬೂದಾಳು, ಕನ್ನಡ ಕಾವ್ಯ ಮೀಮಾಂಸೆ,ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೬

೨೭. ನಟರಾಜ್ ಹುಳಿಯಾರ್,ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ,ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೪

೨೮. ನಾಗಭೂಷಣ ಸ್ವಾಮಿ ಜಿ ಎಲ್,ವಚನಸಾವಿರ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೪

೨೯. ನಾವಡ ಎ ವಿ, ಕಡೇಂಗೋಡ್ಲು ಶಂಕರಭಟ್ಟ (ಸಾಹಿತ್ಯ ವಾಚಿಕೆ).ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.೧೯೯೫

೩೦. ನಾಗೇಗೌಡ ಎಚ್.ಎಲ್,ನನ್ನೂರು, ಐಬಿಎಚ್ ಪ್ರಕಾಶನ ಬೆಂಗಳೂರು, ೧೯೬೪

೩೧. ನಾಗೇಂದ್ರಪ್ಪ ಕೆ, ಕನ್ನಡ ಜೈನ ಕಥಾಸಾಹಿತ್ಯ ಸಮೀಕ್ಷೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೮

೩೨. ಪ್ರಭು ಖಾನಾಪುರೆ, ಶಾಂತಶ್ರೀ,ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. ೧೯೯೯

೩೩. ಪ್ರಸಾದಸ್ವಾಮಿ ಎಸ್, ಶೀಲವೆಂಬುದು ಸೂತಕ, ಕಣ್ವ ಪಬ್ಲಿಕೇಷನ್ ಬೆಂಗಳೂರು.೨೦೧೪

೩೪. ಪ್ರಸಾದಸ್ವಾಮಿ ಎಸ್, ನವೋದಯ ಕಥೆಗಳು, ಜ್ಞಾನೋದಯ ಪ್ರಕಾಶನ. ೨೦೦೧

೩೫. ಪ್ರಹ್ಲಾದ ಅಗಸನಕಟ್ಟೆ, (ಸಂ),ಸಣ್ಣ ಕಥೆ ೨೦೦೮, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು. ೨೦೧೧

೩೬. ಪಾದೇಕಲ್ಲು ವಿಷ್ಣು ಭಟ್,ಸೇಡಿಯಾಪು ಕೃಷ್ಣ ಭಟ್ಟರು, ಮಂಗಳೂರು ವಿಶ್ವವಿದ್ಯಾಲಯ. ೧೯೯೭

೩೭. ಬಸವರಾಜ ಸಬರದ, ಹೈದರಾಬಾದ್ ಕರ್ನಾಟಕದ ತತ್ವಪದಗಳು,ಕನ್ನಡವಿಶ್ವವಿದ್ಯಾಲಯ, ಹಂಪಿ. ೨೦೦೦

೩೮. ಬಸವರಾಜ ಕಲ್ಗುಡಿ,(ಸಂ) ಸುವರ್ಣ ವಿಚಾರ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು. ೨೦೦೬

೩೯. ಬೋರಲಿಂಗಯ್ಯ ಹಿ ಚಿ, ದೇಸಿ ಕನ್ನಡ. ಪರಂಪರೆ, ಕನ್ನಡ ವಿಶ್ವವಿದ್ಯಾಲಯ ಹಂಪಿ .೨೦೧೬

೪೦. ಮಲ್ಲೇಶಪುರಂ ಜಿ.ವೆಂಕಟೇಶ,(ಸಂ), ಶಂಬಾ ಜೋಶಿಯವರ ಆಯ್ದ ಲೇಖನಗಳು,ಕನ್ನಡ ಪುಸ್ತಕ ಪ್ರಾಧಿಕಾರ,ಚಾಮರಾಜಪೇಟೆ.೧೯೯೭

೪೧. ಮಹೀತವಾಡಿ, ಕನ್ನಡ ಕಥಾ ಸೃಷ್ಟಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೬೮

೪೨. ಮಲ್ಲಿಕಾರ್ಜುನ ಪಾಟೀಲ, ವಿಲಿಯಂ ಷೇಕ್ಸ್ ಪಿಯರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೯

೪೩. ಮಂಗಳು ಜಿ.ನಾ, ತಿರುಮಲಾಂಬ,, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.೧೯೯೧

೪೪. ಮರುಳಯ್ಯ ಸಾ.ಶಿ,ದೇವುಡು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. ೧೯೯೨

೪೫. ಮೋಹನ್ ಕೃಷ್ಣ ರೈ ಕೆ, ವಸಾಹತುಶಾಹಿ ಮತ್ತು ನಗರೀಕರಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೭

೪೬ ಮೋಹನ್ ಕೃಷ್ಣ ರೈ ಕೆ, ತುಳುನಾಡು ಕನ್ನಡ ನುಡಿ,ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೨

೪೭ ಮೋಹನ್ ಕೃಷ್ಣ ರೈ ಕೆ, ತುಳುಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೧೯೯೯

೪೮. ಯರವಿನ ತೆಲಿಮಠ.ಸಿ.ಆರ್, ದೇಸಿಯತೆ ಮತ್ತು ದೇಶಿವಾದ, ಚಿತ್ತಾರ ಪ್ರಕಾಶನ. ೨೦೧೬

೪೯. ರಹಮತ್ ತರೀಕೆರೆ,ವಸಾಹತು ಪ್ರಜ್ಞೆ ಮತ್ತು ವಿಮೋಚನೆ, ಅಭಿನವ ಪ್ರಕಾಶನ ಬೆಂಗಳೂರು.೧೯೯೬

೫೦. ರಹಮತ್ ತರೀಕೆರೆ, ಧರ್ಮ ಪರೀಕ್ಷೆ, ನವಕರ್ನಾಟಕ ಪ್ರಕಾಶನ.ಬೆಂಗಳೂರು.೨೦೦೮

೫೧. ರಾಜಪ್ಪದಳವಾಯಿ,ಕನ್ನಡ ಸಾಹಿತ್ಯ ಕೋಶ, ದಳವಾಯಿ ಪ್ರಕಾಶನ, ಬೆಂಗಳುರು. ೧೯೯೬

೫೨. ವೆಂಕಟೇಶ್ ಜಿ, ಶಂಭಾ ಕೃತಿ ಸಂಪುಟ (೪)ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ. ೧೯೯೯

೫೩. ವೆಂಕಟೇಶ್ ಜಿ, ಶಂಭಾ ಕೃತಿ ಸಂಪುಟ–೬,ಕನ್ನಡ ಪುಸ್ತಕ ಪ್ರಾಧಿಕಾರಚಾಮರಾಜಪೇಟೆ. ೧೯೯೯

೫೪. ವೇಣುಗೋಪಾಲ ಕಾಸರಗೋಡು,ಯರ್ಮುಂಜೆ ರಾಮಚಂದ್ರ, ಕನ್ನಡ ಸಾಹಿತಯ ಅಕಾಡೆಮಿ ಬೆಂಗಳೂರು.೧೯೯೪

೫೫. ವಿಷ್ಣು ನಾಯ್ಕ(ಸಂ) ಗೌರೀಶ ಕಾಯ್ಕಿಣಿ ಅವರ ಆಯ್ದ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು. ೨೦೦೬

೫೬. ಶಿವರಾಮ ಶೆಟ್ಟಿ ಬಿ.(ಸಂ)ಜೇನು ಹುಟ್ಟು, ಮಂಗಳೂರು ವಿಶ್ವವಿದ್ಯಾಲಯ.೨೦೦೭

೫೭. ಶಿವರಾಮ ಐತಾಳ ಕೆ. ದಕ್ಷಿಣ ಕನ್ನಡದ ಜನಪದ ಸಾಹಿತ್ಯ. ಶಾರದಾ ಮಂದಿರ ಮೈಸೂರು.೧೯೭೧

೫೮. ಶಿವರುದ್ರಪ್ಪ ಜಿ ಎಸ್. ಸಮಗ್ರ ಗದ್ಯ-೨. ಕನ್ನಡ ಮತ್ತು ಸಂಸ್ಕೃತಿ ಇಲಾಖೆಬೆಂಗಳೂರು. ೨೦೦೨

೫೯. ಶಿವರುದ್ರಪ್ಪ ಜಿ ಎಸ್.ಮಾಸ್ತಿಯವರ ಸಾಹಿತ್ಯ, ಬೆಂಗಳೂರು ವಿ ವಿ. ೧೯೭೬

೬೦. ಶಿವರೆಡ್ಡಿ ಕೆ.ಸಿ. ಕನ್ನಡ ಹಾಡುಪಡು. ಬೆಂಗಳೂರು. ೨೦೦೩

೬೧. ಶಿವಕುಮಾರಸ್ವಾಮಿ, ದೇವುಡು. ಕನ್ನಡ ಸಾಹಿತ್ಯ ಅಕಾಡೆಮಿ. ೧೯೯೪

೬೨. ಶಿವಗುರಪ್ಪನ ಮೋತಕವಿಳ್ಳಿ, ಕನ್ನಡ ಸಾಹಿತ್ಯ ಸಂಜೀವಿನಿ, ಮೋತಕಪಲ್ಲಿ ಪ್ರಕಶನ, ಗುಲಬರ್ಗ. ೨೦೧೬

೬೩. ಶ್ರೀನಿವಾಸಮೂರ್ತಿ ಎ.ವಿ. ಭಾರತದ ಸ್ವಾತಂತ್ರ್ಯ ಚಳುವಳಿ-೧೮೫೭-೧೯೪೭, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.೧೯೯೪

೬೪. ಶ್ರೀಕಂಠಶಾಸ್ತ್ರೀ ಎಸ್. ಸಂಶೋಧನ ಲೇಖನಗಳು, ಮೈಸೂರು ವಿ ವಿ. ೧೯೭೫

೬೫. ಶ್ರೀನಿವಾಸ ಹಾವನೂರು.ಹೊಸಗನ್ನಡದ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. ೨೦೦೦

೬೬. ಶ್ರೀಕಂಠಶಾಸ್ತ್ರೀ ಎಸ್. ಭಾರತೀಯ ಸಂಸ್ಕೃತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.೨೦೦೬

೬೭. ಸತ್ಯನಾರಾಯಣ ಮಲ್ಲಿಪಟ್ಟಣ, ದಕ್ಷಿಣ ಕನ್ನಡದ ಕಾವ್ಯ ಮತ್ತು ಪ್ರಾದೇಶಿಕತೆ, ಮಂಗಳೂರು ವಿಶ್ವವಿದ್ಯಾಲಯ.೧೯೯೯

೬೮. ಸುಮಿತೀಂದ್ರ ನಾಡಿಗ.ವಿಮರ್ಶೆಯ ದಾರಿಯಲ್ಲಿ, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು.೧೯೯೪

೬೯. ಸುಮಿತ್ರಾ ಬಾಯಿ ಎನ್. ಕಾತ್ಯಾಯಿನಿ. ಕನ್ನಡ ಸಾಹಿತ್ಯ ಅಕಾಡೆಮಿ.ಬೆಂಗಳೂರು.೧೯೯೪

೭೦. ಸುಬ್ರಹ್ಮಣ್ಯ ಸಿ (ಸಂ) ಕದಿರು, ಅಕ್ಷಯ ಪ್ರಕಾಶನ, ಬೆಂಗಳೂರು. ೨೦೧೬

೭೧. ಸುಬ್ರಹಣ್ಯ ಭಟ್ಟ ಕೆ.ಮುಳಿಯ ತಿಮ್ಮಪ್ಪಯ್ಯನವರು, ಮಂಗಳೂರು ವಿಶ್ವವಿದ್ಯಾಲಯ.೧೯೯೭

೭೨. ಸಂಧ್ಯಾರೆಡ್ಡಿ ಕೆ.ಆರ್ ಜಾನಪದ ಅಧ್ಯಯನ,ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಹಾವೇರಿ.೨೦೧೬

೭೩. ಸೋಮಣ್ಣ ಹೊಂಗಳ್ಳಿ , ಬಾಗಲೋಡಿ ದೇವರಾಯ.ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.೧೯೯೪

೭೪. ಹರೀಕೃಷ್ಣ ಭರಣ್ಯ.ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ, ಸಪ್ನ ಬುಕ್ ಹೌಸ್, ಬೆಂಗಳೂರು. ೧೯೯೦

೭೫. ಹೊನ್ನಯ್ಯ ಶೆಟ್ಟಿ (ಸಂ).ಕಿರಿಯರ ಪ್ರಪಂಚ. ಮಧುವನ ಪ್ರಕಾಶನ, ಮಂಗಳೂರು೧೯೪೭

೭೬. ಹಂಪ ನಾಗರಾಜಯ್ಯ.ಕಡೆಗೋಲು, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೭

ಅನುಬಂಧ – ೨

## ಕತೆಗಾರರ ಬದುಕು ಬರಹ

**೧. ಪಂಜೆ ಮಂಗೇಶರಾಯ: (೧೮೭೪–೧೯೩೭)**

ಕನ್ನಡದ ಮೊದಲ ತಲೆಮಾರಿನ ಆರಂಭದ ಕತೆಗಾರ ಪಂಜೆ ಮಂಗೇಶರಾಯರು. ೧೮೭೪ರ ಫೆಬ್ರವರಿ ೨೨ ರಂದು ಬಂಟ್ವಾಳದಲ್ಲಿ ಜನಿಸಿದರು. ಮಕ್ಕಳ ಸಾಹಿತ್ಯದ ಪಿತಾಮಹ ಎಂದು ಕರೆಸಿಕೊಂಡ ಪಂಜೆ ಕತೆ, ಕವಿತೆ, ಹರಟೆ ಮುಂತಾದ ಕ್ಷೇತ್ರದಲ್ಲಿ ಕೆಲಸ ಮಾಡಿದ್ದಾರೆ. ವೃತ್ತಿಯಲ್ಲಿ ಉಪಾಧ್ಯಾಯರಾಗಿದ್ದು 'ಸುಹಾಸಿನಿ' ಎಂಬ ಸಾಹಿತ್ಯ ಪತ್ರಿಕೆಯನ್ನು ರೂಪಿಸಿದರು. ೧೯೦೦ರ ಕಾಲಮಾನದಲ್ಲಿ ಅನೇಕ ಸಣ್ಣಕತೆಗಳನ್ನು ಬರೆಯುವ ಮೂಲಕ ಕನ್ನಡ ಕಥಾ ಪರಂಪರೆಗೆ ವಿಶೇಷ ಸ್ಥಾನವನ್ನು ಒದಗಿಸಿಕೊಟ್ಟರು, ವಸಾಹತುಶಾಹಿಗೆ ಸ್ಥಳೀಯ ಸತ್ವದ ಮೂಲಕ ಪ್ರತಿಕ್ರಿಯಿಸಿದ ಪ್ರಮುಖ ಬರಹಗಾರ ಪಂಜೆಯವರು.

**ಕಥಾ ಸಂಕಲನಗಳು**

೧. ನನ್ನ ಚಿಕ್ಕ ತಂದೆ

೨. ನನ್ನ ಚಿಕ್ಕ ತಂದೆಯ ಉಯಿಲು

೩. ಕಮಲಾಪುರದ ಹೋಟ್ಲಿನಲ್ಲಿ

೪. ಭಾರತ ಶ್ರವಣ ಇತ್ಯಾದಿ.

೫. ಇವರು ೨೫.೧೦.೧೯೩೭ರಲ್ಲಿ ಮರಣ ಹೊಂದಿದರು. ಇವರ ಬರಹಗಳನ್ನು ಮೂರು ಸಂಪುಟಗಳಲ್ಲಿ ಓರಿಯಂಟ್ ಲಾಂಗ್‌ಮನ್ ಸಂಸ್ಥೆಯು ಪ್ರಕಟಿಸಿದೆ.

## ೨. ಕೆರೂರು ವಾಸುದೇವಾಚಾರ್ಯ (೧೮೬೬-೧೯೨೧)

ಸುಧಾರಣ ಚಳುವಳಿಯ ಧೋರಣೆಗಳನ್ನು ಮನಸಿನಲ್ಲಿಟ್ಟುಕೊಂಡು ಕತೆಗಳನ್ನು ಬರೆದ ಕೆರೂರು ವಾಸುದೇವಾಚಾರ್ಯರು ಹುಟ್ಟಿದ್ದು ೧೮೬೬ ಅಕ್ಟೋಬರ್ ೧೫ ರಂದು ಬಿಜಾಪುರ ಜಿಲ್ಲೆಯ ಬಾಗಲಕೋಟೆಯಲ್ಲಿ. ಇವರು ವೃತ್ತಿಯಲ್ಲಿ ವಕೀಲರು. 'ಸಚಿತ್ರ ಭಾರತ' ಎಂಬ ಪತ್ರಿಕೆಯ ಸಂಪಾದಕರೂ ಆಗಿದ್ದ ಕೆರೂರು ಅನೇಕ ಕತೆಗಳನ್ನು ಬರೆದರು.ಆ ಕಾಲದ ಸುಧಾರಣ ಪ್ರಜ್ಞೆಯನ್ನು ಕತೆಗಳ ತಾತ್ವಿಕ ಭಿತ್ತಿಯಾಗಿಸಿಕೊಂಡು ವಿಧವಾ ವಿವಾಹ ಸ್ತ್ರೀ ಶಿಕ್ಷಣ, ಸ್ತ್ರೀ ಪುರುಷ ಸಮಾನತೆ, ಪ್ರೇಮ ವಿವಾಹದಂತಹ ಆಧುನಿಕ ವಿಚಾರವನ್ನು ಅನುಸಂಧಾನ ಮಾಡಿದರು.

**ಕಥಾ ಸಂಕಲನಗಳು**

೧. ಪ್ರೇಮ ವಿಜಯ

೨. ಬೆಳಗಿದ ದೀಪಗಳು

೩. ತೊಳೆದ ಮುತ್ತು

೧೯೦೮ರಲ್ಲಿ ಕನ್ನಡ ಮೊದಲ ಸಾಮಾಜಿಕ ಕಾದಂಬರಿ 'ಇಂದಿರಾ'ವನ್ನು ಬರೆದು ಪ್ರಕಟಿಸಿದ ಕೀರ್ತಿ ಕೆರೂರು ಅವರಿಗೆ ಸಲ್ಲುತ್ತದೆ.

## ೩. ಎನ್ ಎಂ ಕಾಮತ್ (೧೮೮೩-೧೯೪೦)

೧೮೮೩ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜನಿಸಿದ ಮುಂಡ್ಕೂರು ನರಸಿಂಹ ಕಾಮತ್ ಆರಂಭಿಕ ಕತೆಗಾರರಲ್ಲಿ ಒಬ್ಬರು. ವಸಾಹತುಶಾಹಿಯ ಧೋರಣೆಯನ್ನು ಸೂಕ್ಷ್ಮವಾಗಿ ಕತೆಗಳ ಮೂಲಕ ವಿಮರ್ಶೆಗೆ ಒಳಪಡಿಸಿದ ಕಾಮತರು ದಕ್ಷಿಣ ಕನ್ನಡ ಭಾಗದ ಸ್ಥಳೀಯ ಜ್ಞಾನವನ್ನು ಗುಣಾತ್ಮಕವೆಂದು ನಿರೂಪಿಸಿದರು. ಇವರ ಕತೆಗಳು 'ಮಧುರವಾಣಿ', 'ಸುವಾಸಿನಿ' ಪತ್ರಿಕೆಯಲ್ಲಿ ಪ್ರಕಟವಾಗಿವೆ.

**ಕಥಾ ಸಂಕಲನಗಳು**

೧. ಅಂದಿನ ಆವೂರು - ೧೯೪೧

೨. ಮಧುವನ - ೧೯೩೫

೩. ನಮ್ಮ ಕತೆ - ೧೯೩೨

ಕಾಮತರ 'ಕದ್ದವರು ಯಾರು?' ಕತೆಯು ದಕ್ಷಿಣ ಕನ್ನಡ ಭಾಗದ ಸ್ಥಳೀಯ ಬದುಕಿನ ವಿಶ್ವಾಸವನ್ನು ನಿರೂಪಿಸುವ ಜೊತೆಗೆ ಜೀವನ ಮೌಲ್ಯಗಳನ್ನು ಮರುಕಟ್ಟುವ ಕಾರ್ಯವನ್ನು ಮಾಡುತ್ತದೆ.ಕಾಮತರ ಮರಣದ ನಂತರದಲ್ಲಿ ಅವರ ಬರಹಗಳು ಪ್ರಕಟವಾಗಿವೆ.

### ೪. ಎಸ್.ಜಿ. ಶಾಸ್ತ್ರೀ (೧೮೯೦-೧೯೫೫)

ಮಾನವ ಸಂಬಂಧವನ್ನೆ ಪ್ರಧಾನವಾಗಿ ಕತೆಯಲ್ಲಿ ಅಭಿವ್ಯಕ್ತಿಸಿದ ಸೊಸಲೆ ಗರಳಪುರ ಶಾಸ್ತ್ರಿ ಹುಟ್ಟಿದ್ದು ೧೮೯೦ರಲ್ಲಿ. ಮಾಸ್ತಿಯವರ ಕಾಲಮಾನದಲ್ಲಿ ಮೈಸೂರು ಭಾಗದಲ್ಲಿ ಸಾಹಿತ್ಯ ಕೃಷಿ ಮಾಡಿದ ಎಸ್.ಜಿ. ಶಾಸ್ತ್ರೀ 'ಪ್ರಬುದ್ಧ ಕರ್ನಾಟಕ' ಪತ್ರಿಕೆಯಲ್ಲಿ ಇವರ ಅನೇಕ ಕತೆಗಳು ಪ್ರಕಟವಾದವು.ವಸಾಹತುಶಾಹಿ ಸಂದರ್ಭದಲ್ಲಿ ಉಂಟಾದ ಸಾಮಾಜಿಕ ಪಲ್ಲಟಗಳಿಗೆ ಮುಖಾಮುಖಿಯಾಗುವ ಇವರ ಕತೆಗಳು ಭಾರತೀಯ ಜೀವನ ಮೀಮಾಂಸೆಯನ್ನೆ ಪ್ರಧಾನವೆಂಬ ನಿಲುವನ್ನು ತಾತ್ವೀಕರಿಸುತ್ತದೆ.

**ಕಥಾ ಸಂಕಲನಗಳು**

೧. ಇದ್ದರೂ ಇರಬಹುದು-೧೯೪೬

೨. ಪರಪುರುಷ ಮತ್ತು ಇತರ ಕತೆಗಳು-೧೯೪೫

### ೫. ಕೊರಡ್ಕಲ್ ಶ್ರೀನಿವಾಸರಾಯರು (೧೮೯೫-೧೯೪೮)

ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖವಾದ ಮೊದಲ ತಲೆಮಾರಿನ ಕತೆಗಾರ ಕೊರಡ್ಕಲ್ ಶ್ರೀನಿವಾಸರಾಯರು ಹುಟ್ಟಿದ್ದು ೧೮೯೫ರಲ್ಲಿ. ಮಾರ್ಕ್ಸ್‌ವಾದಿ ಚಿಂತನೆಯ ಪ್ರಭಾವಕ್ಕೆ ಒಳಗಾದ ಕತೆಗಾರರು ದುಡಿಯುವ ಸಮುದಾಯದ ಜೀವನ ಮೀಮಾಂಸೆಯನ್ನು ವರ್ಗ ಪ್ರಜ್ಞೆಯ ನೆಲೆಯಿಂದ ನಿರೂಪಿಸುತ್ತಾರೆ. 'ಧನಿಯರ ಸತ್ಯ ನಾರಾಯಣ' ಕತೆ ಇದಕ್ಕೆ ಸಾಕ್ಷಿ. ದುಡಿಯುವ ವರ್ಗದ ಧ್ವನಿಯನ್ನು ಕತೆಯ ನೆಲೆಯಿಂದ ಅನುಸಂಧಾನ ಮಾಡಿದ ಶ್ರೀನಿವಾಸರಾಯರು ಪ್ರಮುಖ ಕತೆಗಾರರಾಗಿ ಉಳಿಯುತ್ತಾರೆ.

**ಕಥಾ ಸಂಕಲನಗಳು**

೧. ನಂದಾದೀಪ–೧೮೩೮

೨. ಪ್ರೇಮಪ್ರವಾಹ–೧೯೫೮

೩. ಮಧುವನ–೧೯೩೫

೪. ಕಂಡೂ ಕಾಣದ ನೋಟಗಳು–೧೯೪೧

## ೬. ಸೇಡಿಯಾಪು ಕೃಷ್ಣ ಭಟ್ಟ (೧೯೦೨–೧೯೯೬)

ನಂಬಿಕೆಯ ಗೆಲುವನ್ನು ಕತೆಯ ಕೇಂದ್ರವಾಗಿಸಿಕೊಂಡು ವಸಾಹತುಶಾಹಿಯ ಆಲೋಚನಾ ಕ್ರಮಗಳಿಗೆ ಪ್ರತಿಕ್ರಿಯಿಸಿದ ದಕ್ಷಿಣ ಕನ್ನಡ ಭಾಗದ ಕತೆಗಾರ ಸೇಡಿಯಾಪು ಕೃಷ್ಣಭಟ್ಟರು ಹುಟ್ಟಿದ್ದು ೧೯೦೨ರಲ್ಲಿ ಬಂಟ್ವಾಳ ತಾಲೂಕಿನ ವಿಟ್ಲ. ವೃತ್ತಿ; ಶಿಕ್ಷಕ. ತಂದೆ–ಪಂಜಿಗುಡ್ಡೆ ರಾಮಭಟ್ಟ, ತಾಯಿ ಮೂಕಾಂಬಿಕೆ. ಸ್ವಾತಂತ್ರ್ಯ ಚಳುವಳಿ ಹಾಗೂ ಗಾಂಧಿ ಚಿಂತನೆಯಿಂದ ಪ್ರಭಾವಿತಗೊಂಡು ಸ್ಥಳೀಯತೆಯ ಚಿಂತನೆಯನ್ನು ಬರಹದ ಕೇಂದ್ರವಾಗಿಸಿಕೊಂಡ ಪ್ರಮುಖ ಕತೆಗಾರ.

**ಕಥಾ ಸಂಕಲನ**

೧. ಪಳಮೆಗಳು–೧೯೭೪

## ೭. ಟೆಂಗ್ಸೆ ಗೋವಿಂದರಾವ್

ವಸಾಹತುಶಾಹಿಯ ಬಂಡವಾಳಶಾಹಿತ್ವವನ್ನು ಸೂಕ್ಷ್ಮವಾಗಿ ಪ್ರತಿರೋಧಿಸುವ ಮೂಲಕ ಭಾರತೀಯ ಜೀವನ ಮೌಲ್ಯವನ್ನು ಕತೆಗಳ ಕೇಂದ್ರವಾಗಿಸಿದ ಟೆಂಗ್ಸೆ ಗೋವಿಂದರಾವ್ ಧಾರವಾಡ ಭಾಗದವರು. ವರು ವೃತ್ತಿಯಲ್ಲಿ ವಕೀಲರಾಗಿ ನಂತರದಲ್ಲಿ ಶಿಕ್ಷಕರಾಗಿ ಸೇವೆಸಲ್ಲಿಸಿದರು. 'ಜಯ ಕರ್ನಾಟಕ' ಪತ್ರಿಕೆಯಲ್ಲಿ ಅವರ ಅನೇಕ ಕತೆಗಳು ಪ್ರಕಟವಾಗಿ ಜನರ ಮೆಚ್ಚುಗೆ ಗಳಿಸಿದೆ. ಮೊದಲ ತಲೆಮಾರಿನ ಪ್ರಮುಖ ಕತೆಗಾರರು.

**ಕಥಾ ಸಂಕಲನಗಳು**

೧. ಕಾಮನ ಬಿಲ್ಲು – ೧೯೩೩

೨. ನವಿಲುಗರಿ –

೩. ದಾಸರ ಹುಡುಗ – ೧೯೪೪

## ೮. ಮೇವುಂಡಿ ಮಲ್ಲಾರಿ (೧೯೦೭–೧೯೭೫)

'ಜಯಕರ್ನಾಟಕ' ಪತ್ರಿಕೆಯಲ್ಲಿ ಕತೆಗಳನ್ನು ಬರೆಯಲು ಆರಂಭಿಸಿದ ಮೇವುಂಡಿ ಮಲ್ಲಾರಿ ಹುಟ್ಟಿದ್ದು ೧೯೦೭ರಲ್ಲಿ ಧಾರವಾಡ ಜಿಲ್ಲೆ ಮೇವುಂಡಿಯಲ್ಲಿ. ತಂದೆ ನೀಲಕಂಠ ಭಟ್ಟ, ತಾಯಿ ಲಕ್ಷ್ಮೀಬಾಯಿ. ಬೇಂದ್ರೆ ಬೆಟಗೇರಿ ಕೃಷ್ಣ ಶರ್ಮರಂತಹ ಶಿಕ್ಷಕರ ಮಾರ್ಗದರ್ಶನದಲ್ಲಿ ಬೆಳೆದ ಮಲ್ಲಾರಿಯವರು ಮಕ್ಕಳ ಸಾಹಿತ್ಯ ಮತ್ತು ಕತೆ ಕವನಗಳ ಕ್ಷೇತ್ರದಲ್ಲಿ ದುಡಿದರು. 'ಹೊಟ್ಟೆಡುಮ್ಮ' ಎಂಬ ಮಕ್ಕಳ ಮಾಸಪತ್ರಿಕೆಯನ್ನು ಆರಂಭಿಸಿದ ಕೀರ್ತಿ ಇವರದು.ಸ್ವಾತಂತ್ರ್ಯ ಹೋರಾಟಗಾರರಾಗಿ ಮೊದಲ ತಲೆಮಾರಿನ ಕತೆಗಾರರಾಗಿ ಇವರನ್ನು ಗುರುತಿಸಬಹುದು.

**ಕಥಾ ಸಂಕಲನಗಳು**

೧. ಬೆಳಕಿನ ಕತ್ತಲೆ–೧೯೪೨

೨. ಇದು ನನ್ನದಲ್ಲ–೧೯೬೦

೩. ಮೂರು ಬಾರಿ–೧೯೬೦

## ೯. ಟಿ.ಎಸ್. ಸಂಜೀವರಾಯ

ವಸಾಹತುಶಾಹಿಯ ಪ್ರಭಾವದಿಂದ ಪಲ್ಲಟವಾದ ಕೌಟುಂಬಿಕ ವ್ಯವಸ್ಥೆಯನ್ನು ವಿಮರ್ಶೆಗೆ ಒಳಪಡಿಸುವ ಮೂಲಕ ಭಾರತೀಯ ಜೀವನ ಮೌಲ್ಯವನ್ನು ಪ್ರತಿಪಾದಿಸಿದ ಮೊದಲ ತಲೆಮಾರಿನ ಕತೆಗಾರ ಟಿ.ಎಸ್.ಸಂಜೀವರಾಯ ಹುಟ್ಟಿದ್ದು ಜನವರಿ ೧೯೨೦ರಲ್ಲಿ.ಪುಣೆಯಲ್ಲಿ ವಾಸವಾಗಿದ್ದ. ಸಂಜೀವರಾಯರು, ಕನ್ನಡ ಕತೆಗಳನ್ನು ಬರೆದರು.ಮಾಸ್ತಿಯವರು ಇವರ ಕತೆಗಳನ್ನು ಸಂಗ್ರಹಿಸಿ ಪ್ರಕಟಿಸಿರುವುದು ವಿಶೇಷ.

**ಕಥಾ ಸಂಕಲನಗಳು**

೧. ಹೆಣ್ಣು ಹೃದಯ ಮತ್ತು ಇತರ ಕತೆಗಳು - ೧೯೫೮

## ೧೦. ಬಾಗಲೋಡಿ ದೇವರಾಯ (೧೯೨೭–೧೯೮೫)

ಭಾರತೀಯ ನೆಲದ ಸತ್ವವನ್ನು ಸ್ಥಳೀಯತೆಯ ಕೇಂದ್ರವಾಗಿ ಕತೆಗಳ ಮೂಲಕ ಅನುಸಂಧಾನ ಮಾಡಿದ ಮೊದಲ ತಲೆಮಾರಿನ ಕತೆಗಾರ ಬಾಗಲೋಡಿ ದೇವರಾಯ ಹುಟ್ಟಿದ್ದು ೨೭–೦೨–೧೯೨೭ರಂದು ಮಂಗಳೂರಿನ ಕಿನ್ನಿಕಂಬಳದಲ್ಲಿ.ತಂದೆ ಬಾಗಲೋಡಿ ಕೃಷ್ಣರಾಯರು. ವೃತ್ತಿ ಇಂಗ್ಲಿಷ್ ಪ್ರಾಧ್ಯಾಪಕ ನಂತರದಲ್ಲಿ 'ಬಲ್ಗೇರಿಯಾದ' ರಾಯಭಾರಿಯಾಗಿ ಕಾರ್ಯ ನಿರ್ವಹಿಸಿದರು.

ಕನ್ನಡ ಕತೆಗಳ ಬಗ್ಗೆ ವಿಶೇಷವಾದ ಒಲವನ್ನು ಹೊಂದಿದ ದೇವರಾಯರು ಅನೇಕ ಕತೆಗಳನ್ನು ಬರೆದರಲ್ಲದೆ 'ಜೀವನ' ಎಂಬ ಪತ್ರಿಕೆಯನ್ನು ಪ್ರಕಟಿಸಿದರು.

**ಕಥಾ ಸಂಕಲನಗಳು**

೧. ಹುಚ್ಚು ಮುನಸೀಪ ಮತ್ತು ಇತರ ಕತೆಗಳು–೧೯೪೯

೨. ಆರಾಧನಾ–೧೯೫೪

೩. ರುದ್ರಪ್ಪನ ರೌದ್ರ

## ೧೧. ಮಾಸ್ತಿ ವೆಂಕಟೇಶ ಅಯ್ಯಂಗಾರರು (೧೮೯೧–೧೯೮೬)

ಕನ್ನಡ ಕತೆಗೆ ಪರಂಪರೆಯನ್ನು ರೂಪಿಸಿದ ಮಾಸ್ತಿ ವೆಂಕಟೇಶ ಅಯ್ಯಂಗಾರರು ಹುಟ್ಟಿದ್ದು ಕೋಲಾರ ಜಿಲ್ಲೆಯ ಮಾಲೂರು ತಾಲೂಕಿನ ಮಾಸ್ತಿ ಗ್ರಾಮದಲ್ಲಿ ಜೂನ್ ೬ ೧೮೯೧ರಂದು, ವೃತ್ತಿಯಲ್ಲಿ ಮೊದಲ ಕೆಲವುದಿನಗಳು ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಉಪಾಧ್ಯಾಯರಾಗಿದ್ದು ನಂತರ ದಿನಗಳಲ್ಲಿ ಸಿವಿಲ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಅಸಿಸ್ಟೆಂಟ್ ಕಮೀಶನರಾಗಿ ಕೆಲಸ ಮಾಡಿದರು. ಸಾಹಿತ್ಯ ಕ್ಷೇತ್ರದಲ್ಲಿ ಆಸಕ್ತಿ ಹೊಂದಿದ್ದ ಮಾಸ್ತಿ ಕತೆ, ಕಾದಂಬರಿ, ನಾಟಕ, ವಿಮರ್ಶೆಯಂತಹ ಅನೇಕ ವಿಭಾಗದಲ್ಲಿ ಕೆಲಸ ಮಾಡಿದ್ದಾರೆ.

ಸಣ್ಣಕತೆಯ ರಚನೆಯಲ್ಲಿ ಮಾಸ್ತಿ ಕೆಲಸ ಬಹು ಅಮೂಲ್ಯವಾದದ್ದು.ಭಾರತೀಯ ನಂಬಿಕೆ, ಪರಂಪರೆ, ಜೀವನ ಮೀಮಾಂಸೆಯನ್ನು ಗಾಢವಾಗಿ ಕತೆಯೊಳಗೆ ಬಳಸಿದ ಕತೆಯ ಮೀಮಾಂಸೆಗೆ ರಚನೆಯ ರೂಪಕೊಟ್ಟ ಮಾಸ್ತಿ ಮೊದಲ ತಲೆಮಾರಿನ ಮುಖ್ಯ ಕತೆಗಾರರೆನಿಸುತ್ತಾರೆ.

**ಕಥಾ ಸಂಕಲನಗಳು**

೧. ರಂಗನ ಮದುವೆ-೧೯೧೦

೨. ಸಣ್ಣಕತೆಗಳು-೫ ಸಂಪುಟ

೩. ಮಾತುಗಾರ ರಾಮ

ಮಾಸ್ತಿಯವರ ಚಿಕವೀರ ರಾಜೇಂದ್ರ ಕೃತಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದೆ. ೧೨೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ ಮಾಸ್ತಿ ಕನ್ನಡದ ಆಸ್ತಿಯಾಗಿ ಉಳಿದಿದ್ದಾರೆ.

## ೧೨. ಕುವೆಂಪು (೧೯೦೪-೧೯೯೪)

ಕುವೆಂಪು ಎಂಬ ಕಾವ್ಯ ನಾಮದಿಂದ ಬರವಣಿಗೆಯನ್ನು ಆರಂಭಿಸಿದ ಕೆ.ವಿ. ಪುಟ್ಟಪ್ಪ ೧೯೦೪ರಲ್ಲಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯ ಕುಪ್ಪಳ್ಳಿಯಲ್ಲಿ ಜನಿಸಿದರು. ತಂದೆ ವೆಂಕಟಪ್ಪ, ತಾಯಿ ಸೀತಮ್ಮ. ಸಾಹಿತ್ಯ ಆಸಕ್ತಿ ಹೊಂದಿದ್ದ ಕುವೆಂಪು ಬಾಲ್ಯದಿಂದಲೇ ಅನೇಕ ಕವಿತೆಗಳನ್ನು ಬರೆಯಲು ಆರಂಭಿಸಿದರು. ವೃತ್ತಿಯಲ್ಲಿ ಕನ್ನಡ ಅಧ್ಯಾಪಕರಾಗಿ ಕುಲಪತಿಯಾಗಿ ಕಾರ್ಯನಿರ್ವಹಿಸಿದರು. ಕತೆ ಕಾವ್ಯ ಕಾದಂಬರಿ ನಾಟಕ ಪ್ರಬಂಧ ವಿಮರ್ಶೆ ಇತ್ಯಾದಿ ಕ್ಷೇತ್ರಗಳಲ್ಲಿ ಕೃಷಿ ಮಾಡಿದ ಇವರು ಕತೆಗಳ ರಚನೆಯಲ್ಲಿ ಪ್ರಾದೇಶಿಕ ಅಭಿವ್ಯಕ್ತಿಯನ್ನು ಪರಿಸರ ಮೀಮಾಂಸೆಯನ್ನು ಅನುಸಂಧಾನ ಮಾಡಿದರಲ್ಲದೆ ಯಜಮಾನಿಕೆಯ ಪ್ರಭುತ್ವವನ್ನು ವಿಮರ್ಶೆಗೆ ಒಳಪಡಿಸಿದರು. ವಸಾಹತುಶಾಹಿಯ ಧೋರಣೆಗಳನ್ನು ಭಾರತೀಯ ಪರಂಪರೆಯ ಮೂಲಕ ನಿರಾಕರಿಸುವ ಗುಣ ಇವರ ಕತೆಯಲ್ಲಿ ಇರುವುದು ವಿಶೇಷ. ಕುವೆಂಪುಗೆ ೧೯೬೮ರಲ್ಲಿ 'ಶ್ರೀರಾಮಾಯಣ ದರ್ಶನಂ' ಕಾವ್ಯಕ್ಕೆ ಜ್ಞಾನಪೀಠ ಪ್ರಶಸ್ತಿ ಲಭಿಸಿದ್ದು ಕನ್ನಡಿಗರ ಹೆಮ್ಮೆಯಾಗಿದೆ.

**ಕಥಾ ಸಂಕಲನಗಳು**

೧. ನನ್ನ ದೇವರು ಮತ್ತು ಇತರ ಕತೆಗಳು

೨. ಸನ್ಯಾಸಿ ಮತ್ತು ಇತರ ಕತೆಗಳು

## ೧೩. ಸರಸ್ವತಿ ದೇವಿ ಗೌಡರ್-೧೯೨೩

ಮೊದಲ ತಲೆಮಾರಿನ ಪ್ರಮುಖ ಕಥೆಗಾರ್ತಿ ಸರಸ್ವತಿ ದೇವಿಗೌಡರ ಹುಟ್ಟಿದ್ದು ೧೯೨೩ರಲ್ಲಿ ಬೆಳಗಾವಿ ಜಿಲ್ಲೆಯ ತಿಗಡಿ ಗ್ರಾಮ.ಬರಹದ ಮೂಲಕ ಸ್ತ್ರೀ ಅಸ್ಮಿತೆಯನ್ನು ಹುಟ್ಟು ಹಾಕಿದ ಸರಸ್ವತಿದೇವಿ ಕತೆ, ಕವಿತೆ, ನಾಟಕಗಳಂತ ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡಿದರಲ್ಲದೆ ಕತೆಗಳ ಅಭಿವ್ಯಕ್ತಿಗೆ ಸ್ತ್ರೀ ಸಂವೇದನೆಯನ್ನು ಹುಟ್ಟು ಹಾಕಿದರು.ವಸಾಹತುಶಾಹಿ ಕಾಲಮಾನದಲ್ಲಿ ಸ್ತ್ರೀಯರ ಬದುಕಿನಲ್ಲಿ ಉಂಟಾದ ಬದಲಾವಣೆ ಹಾಗೂ ಸ್ತ್ರೀ ಪ್ರಜ್ಞೆಯನ್ನು ಅನುಸಂಧಾನ ಮಾಡಿದರು.ಇವರಿಗೆ ಅನೇಕ ಪ್ರಶಸ್ತಿ, ಗೌರವಗಳು ಸಂಧಿವೆ.

**ಕಥಾ ಸಂಕಲನಗಳು**

೧. ಅಲ್ಪ ವಿರಾಮ

೨. ಪುಣ್ಯ ಸ್ಮೃತಿ

೩. ಜೀವದ ಬಲೆ

೪. ಗೆಳತಿಗೆ ಓಲೆಗಳು

೫. ರಾಯರು ದಾರಿಗೆ ಬಂದರು

## ೧೪. ತ್ರಿವೇಣಿ- (೧೯೨೮-೧೯೬೩)

ವ್ಯಕ್ತಿಯ ಮನೋಚಿಂತನೆಯಲ್ಲಿ ರೂಪುಗೊಳ್ಳುವ ಅಭಿವ್ಯಕ್ತಿಯನ್ನು ಕಥನಾವಾಗಿಸಿದ ಪ್ರಮುಖ ಕತೆಗಾರ್ತಿ ಅನಸೂಯ, ತ್ರಿವೇಣಿ ಎಂಬ ಕಾವ್ಯ ನಾಮದಿಂದ ಪ್ರಸಿದ್ಧಿಯಾದರು. ೧೯೨೮ರ ಸೆಪ್ಟೆಂಬರ್ ೧ ರಂದು ಮೈಸೂರಿನಲ್ಲಿ ಹುಟ್ಟಿದ ತ್ರಿವೇಣಿಯ ತಂದೆ ಬಿ.ಎಂ.ಕೃಷ್ಣ ಸ್ವಾಮಿ, ತಾಯಿ ತಂಗಮ್ಮ. ಬಿ.ಎಂ.ಶ್ರೀ ತ್ರಿವೇಣಿಯ ದೊಡ್ಡಪ್ಪ ಬಿ.ಎ ಪದವಿ ಪಡೆದ ನಂತರದಲ್ಲಿ ಮಂಡ್ಯದಲ್ಲಿ ಕೆಲಕಾಲ ಅಧ್ಯಾಪಕಿಯಗಿ ಕೆಲಸ ಮಾಡಿದರಲ್ಲದೆ ನಂತರ

ನಿವೃತ್ತಿ ಘೋಷಿಸಿ ಓದು ಬರಹಕ್ಕೆ ತಮ್ಮನ್ನು ತೊಡಗಿಸಿಕೊಂಡರು.ಸ್ತ್ರೀ ಅಸ್ಮಿತೆಯನ್ನು ಆಧುನಿಕ ಪ್ರಜ್ಞೆಯ ಮೂಲಕ ನಿರೂಪಿಸಿದ ಹಾಗೂ ಮನೋವಿಶ್ಲೇಷಣೆಯನ್ನು ಕತೆಯ ಪರಂಪರೆಯಾಗಿಸಿದ ಪ್ರಮುಖ ಕತೆಗಾರ್ತಿ ತ್ರಿವೇಣಿಯವರಿಗೆ ಅನೇಕ ಪ್ರಶಸ್ತಿಗಳು ಸಂದಿವೆ.

**ಕಥಾ ಸಂಕಲನಗಳು**

೧. ಸಮಸ್ಯೆಯ ಮಗು

೨. ಎರಡು ಮನಸ್ಸು

೩. ಹೆಂಡತಿಯ ಹೆಸರು

## ೧೫. ದ.ಬಾ.ಕುಲಕರ್ಣಿ (೧೯೧೬-೧೯೬೩)

ಕನ್ನಡದ ಕತೆ, ಪ್ರಬಂಧ ಬರಹದ ಮೂಲಕ ಪ್ರಸಿದ್ಧಿ ಪಡೆದ ಲೇಖಕ ದತ್ತಾತ್ರೇಯ ಬಾಲಕೃಷ್ಣ ಕುಲಕರ್ಣಿ, ಹುಟ್ಟಿದ್ದು ೧೯೧೬ರಲ್ಲಿ ಬೆಳಗಾಂ ಜಿಲ್ಲೆಯ ರಾಮದುರ್ಗ, ಮನೋಹರ ಗ್ರಂಥ ಭಂಡಾರವನ್ನು ಬೆಳೆಸುವ ಜೊತೆಗೆ ಸಾಹಿತ್ಯಕ್ಷೇತ್ರಕ್ಕೆ ಕತೆ, ಕಾದಂಬರಿ, ಪ್ರಬಂಧಗಳನ್ನು ನೀಡಿದ ಕೊಡುಗೆ ಇವರದು.ಇವರ ಕತೆಗಳು ಕನ್ನಡದ ಅನೇಕ ಪತ್ರಿಕೆಯಲ್ಲಿ ಪ್ರಕಟಗೊಂಡವು.ಇವರ ಕತೆಗಳ ಭೂಮಿಕೆ ಬದುಕು ಹಾಗೂ ಅದರ ಜೀವಂತ ಪರಿಸರವೇ ಆಗಿದೆ.

**ಕಥಾ ಸಂಕಲನಗಳು**

೧. ಕಪ್ಪು ಹುಡುಗಿ

೨. ನಾಳಿನ ಮನಸು

೩. ಹಾಸುಹೊಕ್ಕು

## ೧೬. ನವರತ್ನ ರಾಮರಾವ್ (೧೮೭೭-೧೯೬೦)

ವಸಾಹತುಶಾಹಿಯ ಸಂದರ್ಭದಲ್ಲಿ ಕನ್ನಡದ ಸಾಹಿತ್ಯ ಕೃಷಿ ಮಾಡಿದ ನವರತ್ನ ರಾಮರಾವ್ ಹುಟ್ಟಿದ್ದು ೧೮೭೭ ಬೆಂಗಳೂರು ಜಿಲ್ಲೆಯ ದೇವನಹಳ್ಳಿಯಲ್ಲಿ.ತಂದೆ ನವರತ್ನ

ಬಾಲಕೃಷ್ಣರಾಯರು. ೧೯೦೦ರಲ್ಲಿ ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮೈಸೂರು ಸರ್ಕಾರದಲ್ಲಿ ಅಮಲ್ದಾರರಾಗಿ ನೇಮಕವಾದರು.ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೆ ಆದ ಕೊಡುಗೆಯನ್ನು ನೀಡುವ ಮೂಲಕ 'ರಾಜ ಸೇವಕ' ಎಂಬ ಬಿರುದನ್ನು ಪಡೆದರು.

**ಕಥಾ ಸಂಕಲನ**

ಕೆಲವು ನೆನಪುಗಳು

## ೧೭. ಜಯಲಕ್ಷ್ಮಿ ಶ್ರೀನಿವಾಸನ್ (೧೯೧೧)

ವಸಾಹತುಶಾಹಿ ಸಂದರ್ಭದ ಪ್ರಮುಖ ಮಹಿಳಾ ಲೇಖಕಿ ಜಯಲಕ್ಷ್ಮಿ ಶ್ರೀನಿವಾಸನ್ ಹುಟ್ಟಿದ್ದು ೧೯೧೧ರಲ್ಲಿ ತಮಿಳುನಾಡಿನ ಕರೂರು ಎಂಬಲ್ಲಿ.ತಾಯಿ ಸೀತಾಲಕ್ಷ್ಮಿ ತಂದೆ ರಾಮನಾಥನ್. ಸಾಹಿತ್ಯಕ್ಷೇತ್ರದಲ್ಲಿ ಬರಹದ ಅಭಿವ್ಯಕ್ತಿಯನ್ನು ರೂಪಿಸಿಕೊಂಡ ಇವರು ಸ್ತ್ರೀ ಸಮಸ್ಯೆಗಳನ್ನು ಆಧುನಿಕ ಪ್ರಜ್ಞೆಯ ನೆಲೆಯಲ್ಲಿ ಪರಂಪರೆಯ ಪರಿಸರದ ಚೌಕಟ್ಟಿಬಲ್ಲಿಯೇ ಕತೆಗಳನ್ನು ರೂಪಸಿದರು.

**ಕಥಾ ಸಂಕಲನಗಳು**

೧. ಪರಿಮಳೆ

೨. ವಾತ್ಸಾಲ್ಯ

೩. ಸುಲೋಚನ

## ೧೮. ಆನಂದ (೧೯೦೨–೧೯೬೩)

ಮೊದಲ ತಲೆಮಾರಿನ ಕತೆಗಾರರಲ್ಲಿ ಮಾಸ್ತಿಯ ಕಥಾ ಪರಂಪರೆಯನ್ನು ಮುಂದುವರಿಸಿದ ಕತೆಗಾಗ ಎ.ಸೀತಾರಾಂ ಹುಟ್ಟಿದ್ದು ೧೯೦೨ರಲ್ಲಿ ಸೊರಬದ ಆನವಟ್ಟಿ ಎಂಬ ಹಳ್ಳಿಯಲ್ಲಿ ತಂದೆ ಅನಂತಯ್ಯ ತಾಯಿ ವೆಂಕಟಲಕ್ಷ್ಮಮ್ಮ. ಆನಂದ ಎಂಬ ಕಾವ್ಯನಾಮದಿಂದ ಬರವಣಿಗೆಯನ್ನು ಆರಂಭಿಸಿದ ಸೀತಾರಾಂರು ಮಾಸ್ತಿಯ ಕತೆಗಳಿಂದ ಪ್ರಭಾವ ಹೊಂದಿ ಅನೇಕ ಕತೆಗಳನ್ನು ರಚಿಸಿದರು. ವೃತ್ತಿಯಲ್ಲಿ ರೇಷ್ಮೆ ಇಲಾಖೆಯ ಅಧಿಕಾರಿಯಾದ ಇವರು ಸಾಹಿತ್ಯಕ್ಷೇತ್ರಕ್ಕೆ ವಿಶೇಷ ಕೊಡುಗೆ ನೀಡಿದ್ದು ಹೆಮ್ಮೆಯ ವಿಚಾರವಾಗಿದೆ.

**ಕಥಾ ಸಂಕಲನಗಳು**

೧. ಸಂಸಾರ ಶಿಲ್ಪಿ

೨. ಸ್ವಪ್ನ ಜೀವಿ

೩. ಮಾಟಗಾತಿ

## ೧೯. ಅಶ್ವತ್ಥ (೧೯೧೨–೧೯೯೪)

ಕತೆ, ಕಾದಂಬರಿಯ ಮೂಲಕ ಪ್ರಸಿದ್ಧರಾದ ಮೊದಲ ತಲೆಮಾರಿನ ಕತೆಗಾರ ಅಶ್ವತ್ಥರು ಹುಟ್ಟಿದ್ದು ಚಿಕ್ಕಮಗಳೂರು ಜಿಲ್ಲೆಯ ಕೂದುವಳ್ಳಿ ತಂದೆ ಸೋಮಯ್ಯ ತಾಯಿ ಲಕ್ಷ್ಮಮ್ಮ. ೧೯೩೪ರಲ್ಲಿ ಬಿ.ಇ. ಪದವಿ ಪಡೆದು ಚಿಕ್ಕಮಗಳೂರಿನ ಲೋಕೋಪಯೋಗಿ ಇಲಾಖೆಯಲ್ಲಿ ಸೇವೆ ಆರಂಭಿಸಿದರು.ಸ್ಥಳೀಯ ಅಭಿವ್ಯಕ್ತಿಯನ್ನೆ ಪ್ರಧಾನ ತಾತ್ವಿಕತೆಯಾಗಿ ರೂಪಿಸಿದ ಅಶ್ವತ್ಥರು ಮೊದಲ ತಲೆಮಾರಿನ ಮುಖ್ಯ ಕತೆಗಾರರಾಗಿ ಕಾಣುತ್ತಾರೆ.

**ಕಥಾ ಸಂಕಲನಗಳು**

೧. ದೂರದ ಕಾಶಿಯಲ್ಲಿ

೨. ಬಾಳೆ ಹೊಳೆ

೩. ಅಗ್ನಿ ಸಾಕ್ಷಿ

೪. ಜಯಂತಿ

೫. ನೋವು ನಲಿವು

## ೨೦. ದೇವುಡು (೧೮೮೬–೧೯೬೨)

ಭಾರತೀಯ ಪರಂಪರೆಯನ್ನು ರಾಜಪ್ರಭುತ್ವದ ನೆಲೆಯಲ್ಲಿ ಅಭಿವ್ಯಕ್ತಿಸಿದ ಕತೆಗಾರ ದೇವುಡು ನರಸಿಂಹಶಾಸ್ತ್ರಿ ಹುಟ್ಟಿದ್ದು ೧೮೮೬ರಲ್ಲಿ ಮೈಸೂರಿನಲ್ಲಿ ತಂದೆ ಕೃಷ್ಣ ಶಾಸ್ತ್ರಿ ತಾಯಿ ಸುಬ್ಬಮ್ಮ. ಸಂಸ್ಕೃತ ಅಧ್ಯಯನದಲ್ಲಿ ಆಸಕ್ತಿ ವಹಿಸಿದರಲ್ಲದೆ ಸಂಸ್ಕೃತದಲ್ಲಿ ಎಂ ಎ ಪದವಿ ಪಡೆದರು. ವೃತ್ತಿಯಲ್ಲಿ ಅಧ್ಯಾಪಕರಾಗಿ ಸಾಹಿತ್ಯ, ಪತ್ರಿಕೋದ್ಯಮ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದರು. ವಸಾಹತುಶಾಹಿ ಕಾಲಮಾನದಲ್ಲಿ ಉಂಟಾದ ಆಧುನಿಕ ವಿದ್ಯಾಮಾನಗಳನ್ನು

ವಿಮರ್ಶೆ ಮಡುವ ಮೂಲಕ ರಾಜಶಾಹಿತ್ವದ ಮೀಮಾಂಸೆಯನ್ನು ಕತೆಯ ಕೇಂದ್ರವಾಗಿಸಿದ ದೇವುಡು ಅನೇಕ ಪ್ರಶಸ್ತಿಗಳಿಗೆ ಭಾಜನರಾದರು.

**ಕಥಾ ಸಂಕಲನಗಳು**

೧. ಸೋಲೋ ಗೆಲುವೋ

೨. ಘಾಟಿ ಮುದುಕ ಮತ್ತು ಇತರ ಕತೆಗಳು

೩. ಮೂರು ಕನಸು

೪. ದೇವುಡು ಅವರ ಆಯ್ದ ಕತೆಗಳು

## ೨೧. ಸತ್ಯಕಾಮ (೧೯೨೦)

ಸಾಮಾಜಿಕ ಚಿಂತನೆಗಳನ್ನು ಸಾಹಿತ್ಯ ಅಭಿವ್ಯಕ್ತಿಯಲ್ಲಿ ಅನುಸಂಧಾನ ಮಾಡಿದ ಅನಂತ ಕೃಷ್ಣಾಚಾರ್ಯ ಶಹಪುರ ಇವರು ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲೂಕಿನ ಗಲಿಗಲಿ ಗ್ರಾಮದವರು.ಇವರು ಹುಟ್ಟಿದ್ದು ೧೯೨೦ರ ಏಪ್ರಿಲ್ ೧೬ರಂದು ತಾಯಿ ರುಕ್ಮಿಣಿಯವರು. ಹೈಸ್ಕೂಲಿನ ವರೆಗೆ ಶಿಕ್ಷಣವನ್ನು ಬಾಗಲಕೋಟೆಯಲ್ಲಿ ಮುಗಿಸಿದರು. ನಂತರ ಸಾಮಾಜಿಕ ಸಾಂಸ್ಕೃತಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡರು.ಸ್ವಾತಂತ್ರ್ಯ ಚಳುವಳಿಯ ಪ್ರಭಾವಕ್ಕೆ ಒಳಗಾಗುವ ಮೂಲಕ ಗಾಂಧೀಜಿಯವರ ಚಿಂತನೆಯನ್ನು ಮೈಗೂಡಿಸಿಕೊಂಡು ಸ್ವದೇಶಿ ಚಿಂತನೆಯನ್ನು ಕತೆಗಳ ಕೇಂದ್ರವಾಗಿಸಿದ ಸತ್ಯಕಾಮರು ಅನೇಕ ಕೃತಿಗಳನ್ನು ಕನ್ನಡಕ್ಕೆ ನೀಡಿದ್ದಾರೆ.

**ಕಥಾ ಸಂಕಲನಗಳು**

೧. ಆಹುತಿ

೨. ಮಾತೃ ಮಂದಿರ

## ೨೨. ರಾಮಚಂದ್ರ ಕೊಟ್ಟಲಗಿ ( ೧೯೧೮-೧೯೭೫)

ಕನ್ನಡ ಮೊದಲ ತಲೆಮಾರಿನ ಹೆಸರಾಂತ ಕತೆಗಾರ ರಾಮಚಂದ್ರ ಕೊಟ್ಟಲಗಿ ಹುಟ್ಟಿದ್ದು ೧೯೧೮ರಲ್ಲಿ ಬಿಜಯಪುರ ಜಿಲ್ಲೆ ಬಸವನ ಬಾಗೇವಾಡಿಯ ಹತ್ತಿರ ಮನಗೊಳಯಲ್ಲಿ.ತಂದೆ ಕೃಷ್ಣರಾವ್ ಕೊಟ್ಟಲಗಿ. ಕೃಷಿ ಕುಟುಂಬದಿಂದ ಬಂದ ರಾಮಚಂದ್ರರು ಸ್ಥಳೀಯತೆಯನ್ನು ಜೀವನ ಅನುಭವಿಸಿದ ಮೂಲಕ ಅಭಿವ್ಯಕ್ತಿಸುತ್ತಾರೆ.

**ಕಥಾ ಸಂಕಲನ**

ದೀಪ ಹತ್ತಿತ್ತು.

## ೨೩. ಹೆಚ್ ವಿ ಸಾವಿತ್ರಮ್ಮ (೧೯೧೩-೧೯೯೫)

ಮೊದಲ ತಲೆಮಾರಿನ ಅಪರೂಪದ ಕತೆಗಾರ್ತಿ ಹೆಬ್ಬಳಲು ವೆಂಪನೂರು ಸಾವಿತಮ್ಮ ಹುಟ್ಟಿದ್ದು ೧೯೧೩ರಲ್ಲಿ. ತಂದೆ ರಾಮರಾವ್, ತಾಯಿ ಮೀನಾಕ್ಷಮ್ಮ. ೧೯೩೧ರಲ್ಲಿ ಮೈಸೂರಿನ ಮಹಾರಾಣಿ ಕಾಲೇಜಿನಿಂದ ಬಿ.ಎ ಪದವಿದಲ್ಲಿ ಚಿನ್ನದ ಪದಕ ಪಡೆದ ಮೊದಲ ಮಹಿಳೆ ಎಂಬ ಹೆಗ್ಗಳಿಗೆಗೆ ಗಂಡನ ಪ್ರೋತ್ಸಾಹದ ಮೂಲಕ ಓದು ಬರಹವನ್ನು ಆರಂಭಿಸಿದ ಸಾವಿತ್ರಮ್ಮ ಅನೇಕ ಬರಹಗಳ ಕನ್ನಡಕ್ಕೆ ನೀಡಿದರು.

**ಕಥಾಸಂಕಲನಗಳು**

೧. ಸರಿದ ನೆರಳು

೨. ಪ್ರತೀಕ್ಷೆ

## ೨೪. ಗೊರೂರು ರಾಮಸ್ವಾಮಿ ಅಯ್ಯಂಗಾರ್(೧೯೦೪-೧೯೯೧)

ಸಾಮಾಜಿಕ ಚಿಮತನೆಯನ್ನು ಸ್ಥಳೀಯತೆಯ ರೂಪವಾಗಿ ಚರ್ಚಿಸಿದ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಹುಟ್ಟಿದ್ದು ಜುಲೈ ೪, ೧೯೦೪ರಲ್ಲಿ ಗೊರೂರಿನಲ್ಲಿ.ತಾಯಿ ಲಕ್ಷಮ್ಮ ಶ್ರೀನಿವಾಸ ಅಯ್ಯಂಗಾರ್ ತಂದೆ.ಗಾಂಧಿಜಿಯ ಚಿಂತನೆಯ ಪ್ರಬಾವಕ್ಕೆ ಒಳಗಾದ ಗೊರೂರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದಾರಲ್ಲದೆ ಸ್ವದೇಶಿ ಚಿಂತನೆಯನ್ನು

ತಮ್ಮ ಬರಹದಲ್ಲಿ ಅನುಸಂಧಾನ ಮಾಡಿದರು. ಕಾದಂಬರಿ ಕತೆ ಅನುವಾಗಗಳಂತ ಕ್ಷೇತ್ರದಲ್ಲಿ ಕೃಷಿ ಮಾಡಿದ ಇವರಿಗೆ ಕೇಂದ್ರ ಸಾಹಿತ್ಯ ಅಕಾಡಮೆ, ದೇವರಾಜ್ ಬಹದ್ದೂರ್ ಪ್ರಶಸ್ತಿ ಇತ್ಯಾದಿ ಗೌರವಗಳು ಸಂದಿವೆ.

**ಕಥಾ ಸಂಕಲನಗಳು**

೧. ಬೂತಯ್ಯನ ಮಗ ಅಯ್ಯು

೨. ಕೋರ್ಟಿನಲ್ಲಿ ಗೆದ್ದ ಎತ್ತು

**೨೫. ಶಾಂತರಸ**

ಕಲ್ಯಾಣ ಕರ್ನಾಟಕದ ಪ್ರಮುಖ ಕತೆಗಾರ ಶಾಂತರಸ ಹುಟ್ಟಿದ್ದು ೧೯೨೪ರಲ್ಲಿ ರಾಯಚೂರು ಜಿಲ್ಲೆಯ ಹೆಂಜೀವಾಳು. ತಂದೆ ಚನ್ನ ಬಸಯ್ಯ ಹಿರೀಮಠ, ವೃತ್ತಿಯಲ್ಲಿ ರಾಯಚೂರಿನಲ್ಲಿ ಶಿಕ್ಷಣ ಸಂಸ್ಥೆಯ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ನಂತರ ಪದವಿ ಪೂರ್ವ ಕಾಲೇಜಿನ ಪ್ರಾಚಾರ್ಯರಾಗಿ ನಿವೃತ್ತರಾದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗಿಯದ ಶಾಂತರಸರು ಕತೆ, ಗಜಲ್, ಕಾದಂಬರಿ, ನಾಟಕದಂತಹ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ್ದಾರೆ. ಇವರ ಕತೆಗಳ ಪ್ರಪಂಚ ಕಲ್ಯಾಣ ಕರ್ನಾಟಕದ ಜನಬದುಕಿನ ವಿನ್ಯಾಸ ಹಾಗೂ ದುಡಿಯುವ ಜನ ಅಭಿವ್ಯಕ್ತಿಯ ಅನುಸಂಧಾನವಾಗಿದೆ.

**ಕಥಾ ಸಂಕಲನಗಳು**

೧. ಬಡೆಸಾಬು ಪುರಾಣ

೨. ನಾಯಿ ಮತ್ತು ಪಿಂಚಣಿ

೩. ಸ್ವಾತಂತ್ರ್ಯ ವೀರ ಮತ್ತು ಇತರ ಕತೆಗಳು

೪. ಉರಿದ ಬದುಕು.

## ೨೬. ಸರಸ್ವತಿಬಾಯಿ ರಾಜವಾಡೆ (೧೯೩೦-೧೯೫೪)

ದಕ್ಷಿಣ ಕನ್ನಡ ಭಾಗದ ಮೊದಲ ತಲೆಮಾರಿನ ಕತೆಗಾರ್ತಿ ಸರಸ್ವತಿ ಬಾಯಿ ರಾಜವಾಡೆ 'ಗಿರಿಬಾಲೆ' ಎಂಬ ಕಾವ್ಯನಾಮದಿಂದ ಸಾಹಿತ್ಯ ಕೃಷಿ ಆರಂಭಿಸಿದ ಇವರು, ಕನ್ನಡ ಸಾಹಿತ್ಯಕ್ಕೆ ಕತೆ, ಕಾದಂಬರಿ, ನಾಟಕದ ಮೂಲಕ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ, ಸರಸ್ವತಿ ಬಾಯಿ ರಾಜವಾಡೆ ಉಡುಪಿ ಬಳಿಯ ಒಳಂಜಾಲ ಎಂಬಲ್ಲಿ ೧೯೧೩ರ ಅಕ್ಟೋಬರ್‌ನಲ್ಲಿ ಜನಿಸಿದರು. ತಂದೆ ನಾರಾಯಣರಾವ್, ತಾಯಿ ಕಮಲಾಬಾಯಿ. ವೃತ್ತಿಯಲ್ಲಿ ನಟಿಯಾಗಿ, ಲೇಖಕಿಯಾಗಿ ಸೇವೆ ಸಲ್ಲಿಸಿದ ಸರಸ್ವತಿಬಾಯಿ ರಾಜವಾಡೆ, ಸ್ತ್ರೀ ಸಂವೇದನೆಯನ್ನು ಪುರುಷ ಗ್ರಹಿಕೆಯನ್ನು ಮೀರಿ ಅನುಸಂಧಾನ ಮಾಡುವ ಮೂಲಕ ದಕ್ಷಿಣ ಕನ್ನಡ ಮೊದಲ ತಲೆಮಾರಿನ ಕತೆಗಳಿಗೆ ವಿಶೇಷ ಸ್ಥಾನಮಾನವನ್ನು ತಂದುಕೊಟ್ಟ ಪ್ರಮುಖ ಲೇಖಕಿ.

**ಕಥಾ ಸಂಕಲನಗಳು**

೧) ಆಹುತಿ ಇತ್ಯಾದಿ ಕತೆಗಳು (೧೯೩೮)

೨) ಕದಂಬ (೧೯೪೭)

೨. ವಾಣಿ (೧೯೧೨-೧೯೮೮)

## ೨೭. ವಾಣಿ (೧೯೧೨)

ಮೈಸೂರು ರಾಜರಿಂದ 'ರಾಜಸೇವಾಸಕ್ತ' ಬಿರುದು ಪಡೆದು ಕಾದಂಬರಿ ಹಾಗೂ ಕತೆಗಳ ಮೂಲಕ ಕನ್ನಡ ಸಾಹಿತ್ಯ ಪರಮಪರೆಯನ್ನು ಬೆಳೆಸಿದ ಕತೆಗಾರ್ತಿ ಸುಬ್ಬಮ್ಮ ಎಂ ಎನ್ ಅವರದ್ದು. ಇವರು ಮೈಸೂರಿನ ಶ್ರೀರಂಗ ಪಟ್ಟಣದಲ್ಲಿ ೧೯೧೨ರಲ್ಲಿ ಜನಿಸಿದರು. ತಂದೆ ಪಿ ನರಸಿಂಗ್ ರಾವ್ ಪ್ರಸಿದ್ಧ ವಕೀಲರು. ವಾಣಿ ಎಂಬ ಕಾವ್ಯನಾಮದಿಂದ ಸಾಹಿತ್ಯ ಕ್ಷೇತ್ರದಲ್ಲಿ ಬರವಣಿಗೆಯನ್ನು ಆರಂಭಿಸಿದರು. ಕಸ್ತೂರಿ ಕಥಾಸಂಕಲನದ ಮೂಲಕ ಬರೆಯಲು ಆರಂಭಿಸಿ ೩೩ ಕೃತಿಗಳನ್ನು ನೀಡಿದ ಕೊಡುಗೆ ಇವರು, ವಸಾಹತುಶಾಹಿ ಕಾಲಮಾನದಲ್ಲಿ ಉಂಟಾದ ಸಾಮಜಿಕ ಪಲ್ಲಟವನ್ನು ಸ್ರೀ ದೃಷ್ಟಿಕೋನದಿಂದ ಗ್ರಹಿಸಿದ ವಾಣಿ ಸ್ತ್ರೀ ಸಮಸ್ಯೆಗಳನ್ನು ಲೋಕದ ಮುಂದೆ ನಿರೂಪಿಸುವ ಜೊತೆಗೆ ಮೌಢ್ಯ ಪರಂಪರೆಯನ್ನು ಮೀರುವ ಅಭಿವಕ್ತಿಯನ್ನು ಹುಟ್ಟು ಹಾಕಿದ ಮೊದಲ ತಲೆಮಾರಿನ ಮುಖ್ಯಕತೆಗಾರ್ತಿ ವಾಣಿ.

ಕಥಾ ಸಂಕಲನಗಳು

೧) ಕಸ್ತೂರಿ

೨) ಅರ್ಪಣೆ

೩) ಬಾಬು ಬರ್ತಾನೆ

೪) ಹ್ಯಾಪಿಬರ್ತ್‌ಡೇ

## ೨೮. ಕಡೆಂಗೋಡ್ಲು ಶಂಕರಭಟ್ಟ (೧೯೦೪-೧೯೬೪)

ಕನ್ನಡ ಸಂಸ್ಕೃತಿ ಹಾಗೂ ಪರಂಪರೆಯನ್ನು ವಸಾಹತುಶಾಹಿಯ ಸಂದರ್ಭದಲ್ಲಿ ಚಿಂತನೆ ನಡೆಸಿದ ಹಾಗೂ ಕತೆಗಳ ಮೂಲಕ ಸ್ವಾತಂತ್ರ್ಯ ಹೋರಾಟಕ್ಕೆ ಪ್ರತಿಕ್ರಿಯೆ ನೀಡಿದ ಕತೆಗಾರ ಕಡೆಂಗೋಡ್ಲು ಶಂಕರಭಟ್ಟರು ಹುಟ್ಟಿದ್ದು ೧೯೦೪ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲದ ಸಮೀಪದ ಪೆರುವಾಯಿಯಲ್ಲಿ ತಂದೆ ಕೃಷಿಕರು, ಹಿರಿಯ ಸಂಶೋಧಕ ಮುಳಿಯ ತಿಮ್ಮಪ್ಪಯ್ಯ ಅವರ ಪರಿಸರದಲ್ಲಿ ಬೆಳೆದ ಶಂಕರಭಟ್ಟರು ಸಾಹಿತ್ಯ ಕೃಷಿಯನ್ನು ಆರಂಭಿಸಿದರು. ಗಾಂಧಿಯವರ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವ ಮೂಲಕ ಸ್ವದೇಶಿ ಚಿಂತನೆಯನ್ನು ಬೆಂಬಲಿಸಿ ಕೆಲಸ ಮಾಡಲು ಆರಂಭಿಸಿದ ಶಂಕರಭಟ್ಟರು ಸೈಂಟ್ ಆಗ್ನೇಸ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಕತೆ , ನಾಟಕ , ಕಾವ್ಯ, ಕಾದಂಬರಿಯ ಮೂಲಕ ದೇಸೀಯ ಚಿಂತನೆಯನ್ನು ರೂಪಿಸಿದ ಕಡೆಂಗೋಡ್ಲು ೧೯೬೪ರಲ್ಲಿ ಮರಣ ಹೊಂದಿದರು.

## ೨೯. ಜಯಲಕ್ಷ್ಮೀದೇವಿ (೧೯೨೬-೧೯೯೫)

ಕನ್ನಡ ಮೊದಲ ತಲೆಮಾರಿನ ಪ್ರಮುಖ ಲೇಖಕಿ, ಸಮಾಜ ಸೇವಕಿ, ಜಯಲಕ್ಷ್ಮೀದೇವಿಯವರು ಹುಟ್ಟಿದ್ದು ಚನ್ನಪಟ್ಟಣದಲ್ಲಿ ೧೯೨೬ರ ಮಾರ್ಚ್ ೮ರಂದು. ತಂದೆ ಸಿ.ಕೆ. ನಾರಾಯಣರಾವ್, ತಾಯಿ ನಂಜಮ್ಮ, ತಂದೆ ಚನ್ನಪಟ್ಟಣದ ಪಟ್ಲು ಗ್ರಾಮದಲ್ಲಿ ವ್ಯವಸಾಯದಲ್ಲಿ ನಿರತರಾಗಿದ್ದುದರಿಂದ ಓದಿಗೆ ಅನುಕೂಲವಿಲ್ಲದೆ ಇವರ ವಿದ್ಯಾಭ್ಯಾಸ ನಡೆದುದು ಮೈಸೂರಿನ ಇನ್ನೊಬ್ಬ ದೊಡ್ಡಪ್ಪನವರಾದ ಕೆ.ಎ. ಪದ್ಮನಾಭಯ್ಯನವರ ಆಶ್ರಯದಲ್ಲಿ. ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವಾಗಲೇ ನಂಜುಂಡಯ್ಯನವರೊಡನೆ ಮದುವೆಯಾದ್ದರಿಂದ ವಿದ್ಯಾಭ್ಯಾಸ ನಿಂತುಹೋಯಿತಾದರೂ, ಗಂಡನ ಪ್ರೋತ್ಸಾಹದಿಂದ

ಕನ್ನಡ ಸಾಹಿತ್ಯಪರಿಷತ್ತಿನ ಕಾವ, ಜಾಣ ಪರೀಕ್ಷೆಗಳ ಜೊತೆಗೆ ಎಲ್.ಎಸ್. ಪರೀಕ್ಷೆ ನಂತರ ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಕುಳಿತು ತೇರ್ಗಡೆಯಾದರು.

ಕಾಲೇಜಿಗೆ ಸೇರಿದಾಗ ಬಂಕಿಮಚಂದ್ರ, ಗಳಿಗನಾಥರ ಕಾದಂಬರಿಗಳ ಪರಿಚಯದ ಜೊತೆಗೆ ಪಠ್ಯಪುಸ್ತಕವಾಗಿದ್ದ ಮಾಸ್ತಿಯವರ 'ಚನ್ನಬಸವ ನಾಯಕ' ಕಾದಂಬರಿಯನ್ನು ಓದಿದ ನಂತರ ಇವರಿಗೂ ಕಥೆಗಳನ್ನು ಬರೆಯಬೇಕೆನ್ನಿಸಿತು. ಹೀಗೆ ಬರೆದ ಕಥೆಗಳು ಅಂದಿನ ಪತ್ರಿಕೆಗಳಲ್ಲಿ ಪ್ರಕಟವಾಗತೊಡಗಿದವು. ಸಾಹಿತ್ಯದ ಜೊತೆಗೆ ಇವರಿಗೆ ಪ್ರಿಯವಾಗಿದ್ದ ಇತರ ಕ್ಷೇತ್ರಗಳೆಂದರೆ ಸಂಗೀತ ಹಾಗೂ ಗಮಕಕಲೆ. ಪ್ರಖ್ಯಾತ ಸಂಗೀತಜ್ಞರಾಗಿದ್ದ ರಾಳ್ಳಪಲ್ಲಿ ಅನಂತಕೃಷ್ಣ ಶರ್ಮರ ಬಳಿ ಕೀರ್ತನೆಗಳನ್ನು ಅಭ್ಯಾಸ ಮಾಡಿದರೆ, ಗಮಕಕಲೆಯನ್ನು ಗಮಕಕಲಾ ಪ್ರವರ್ತಕರಲ್ಲೊಬ್ಬರಾದ ಕೃಷ್ಣಗಿರಿ ಕೃಷ್ಣರಾಯರಲ್ಲಿ ಹಲವಾರು ವರ್ಷ ಅಭ್ಯಾಸ ನಡೆಸಿದರು.

**ಕಥಾ ಸಂಕಲನಗಳು**

೧) ಅನಾಮಿಕ ಮತ್ತು ಇತರ ಕಥೆಗಳು

೨) ಶುಭದೃಷ್ಟಿ

೩) ನಾರಿಯರ ಹಲವು ಮುಖಗಳು

## ೩೦. ಪಾ.ವೆಂ. ಆಚಾರ್ಯ

ಪಾ.ವೆಂ.ಆಚಾರ್ಯರು ಹುಟ್ಟಿದ್ದು ಉಡುಪಿಯಲ್ಲಿ. ತಂದೆ ಲಕ್ಷ್ಮೀನಾರಾಯಣ, ತಾಯಿ ಸೀತಮ್ಮ. ಉಡುಪಿಯ ಬಳಿಯ ಅನಂತೇಶ್ವರದಲ್ಲಿ ಎಸ್.ಎಸ್.ಎಲ್.ಸಿ. ನಂತರ ಹಿಂದಿ ರಾಷ್ಟ್ರಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣ. ಕೆಲಕಾಲ ಅಂಗಡಿ ಗುಮಾಸ್ತರಾಗಿ, ಶಿಕ್ಷಕರಾಗಿಯೂ ದುಡಿದರು. ನಂತರ ಸೇರಿದ್ದು ಪತ್ರಿಕೋದ್ಯಮ. ಕರ್ಮವೀರ ಉಪಸಂಪಾದಕರಾಗಿ. ಕಸ್ತೂರಿಯ ಸಂಪಾದಕರಾಗಿ ನಿವೃತ್ತಿ ಹೊಂದಿದರು.

ಕಿಶೋರಾವಸ್ಥೆಯಿಂದಲೇ ಕಾವ್ಯರಚನೆ ಪ್ರಾರಂಭ. ಹರಟೆ, ವ್ಯಂಗ್ಯ, ವಿಡಂಬನಾತ್ಮಕ ಪ್ರಬಂಧ, ತುಳು ಭಾಷೆಯಲ್ಲೂ ಸಾಹಿತ್ಯ ನಿರ್ಮಾಣ. ಒಂದುವರೆ ಸಾವಿರಕ್ಕೂ ಹೆಚ್ಚು ಹಾಸ್ಯಲೇಖನ ಬರೆದ ದಾಖಲೆ.

## ೩೧. ಶಾರದಾ ಜಡೆ (೧೯೨೩)

ಕನ್ನಡ ಪ್ರಮುಖ ಮೊದಲ ತಲೆಮಾರಿನ ಕತೆಗಾರ್ತಿಯಾಗಿ ಗುರುತಿಸಿಕೊಂಡ ಶಾರದಾ ಜಡೆ. ಇವರು ಜನಿಸಿದ್ದು ೨-೭-೧೯೨೩, ಕೃಷ್ಣರಾಜಪೇಟೆಯಲ್ಲಿ. ತಂದೆ ಕೆ.ಆರ್. ಸುಂದರರಾಯರು, ತಾಯಿ ಕೆ.ಎಸ್. ರಾಜೀಬಾಯಿ. ಎಸ್.ಎಸ್.ಎಲ್.ಸಿ. ಹಿಂದಿ ಮತ್ತು ಕನ್ನಡಪಂಡಿತ್, ರಾಷ್ಟ್ರಭಾಷಾ ವಿಶಾರದ ಮುಗಿಸಿ ಉಪಾಧ್ಯಾಯಿ ನಿವೃತ್ತಿಯಿಂದ ನಿವೃತ್ತರಾಗಿದ್ದಾರೆ. ಕಳೆದ ೨೫ ವರ್ಷಗಳಿಂದಲೂ ಹಾಸ್ಯಪ್ರಧಾನ ಪತ್ರಿಕೆ ವಿನೋದಕ್ಕೆ' ಲೇಖನ ಲಲಿತ ಪ್ರಬಂಧಗಳನ್ನು ಬರೆದಿದ್ದಾರೆ. ಮಹಿಳಾ ಪ್ರಗತಿಯನ್ನು ಧ್ಯೇಯವಾಗಿಟ್ಟು ಕೊಂಡು ಅನೇಕ ಪ್ರಬಂಧಗಳನ್ನು ಬರೆದಿದ್ದಾರೆ. ವಿವಿಧ ಸಂಕಲನಗಳಲ್ಲಿ ಕಥೆ, ಲೇಖನಗಳು ಸೇರಿವೆ. ಗೌರವ ಹುದ್ದೆ. ಮಂಡ್ಯ ಸಕ್ಕರೆ ಕಾರ್ಖಾನೆಯ ಮಹಿಳಾ ಸಮಾಜದ ಮಾಜಿಕಾರ್ಯದರ್ಶಿ, ಅಹಮದ್ ನಗರದ ಸಾಕರ್ವಾಡೀ ಕಾಂಗ್ರೆಸ್ ಸೇವಾದಳದ ಅಧ್ಯಕ್ಷೆಯಾಗಿಯೂ ಸೇವೆಸಲ್ಲಿಸಿದ್ದಾರೆ.

**ಕಥಾ ಸಂಕಲನ**

೧) ನವರತ್ನದ ಕಡಗ

*****